# 'ನನ್ನ ತಂದೆ

(ಶ್ರೀ ಬಿ. ಪುಟ್ಟಯ್ಯನವರ ಜೀವನ ಚಿತ್ರ)



ಶ್ರೀ ಡಿ. ವಿ. ಗುಂಡಪ್ಪನವರ
ಮುನ್ನುಡಿಯೊಡನೆ

1949



ರಾಧಾಕೃಷ್ಣ

# ಮುನ್ನುಡಿ

ಶ್ರೀಮಾನ್ ಬಿ. ಪುಟ್ಟಯ್ಯನವರ ಜೀವನ ಚರಿತ್ರೆಯನ್ನು ಅವರ ಕುಮಾರರು, ಶ್ರೀಮಾನ್ ರಾಧಾಕೃಷ್ಣ ಅವರು ಬರೆದಿದ್ದಾರೆಂದು ನನಗೆ ತುಂಬ ಸಂತೋಷವಾಗಿದೆ. ಅಂಥವರ ಜೀವನ ಚರಿತ್ರೆ ಸ್ವಾರಸ್ಯವುಳ್ಳದ್ದು ಮಾತ್ರವಲ್ಲದೆ ನಮ್ಮ ಜನಕ್ಕೆ ಈಗ ಬೇಕಾಗಿರುವ ತಿಳಿವಳಿಕೆಯನ್ನು ಕೊಡ ಬಲ್ಲದ್ದೂ ಆಗಿರುತ್ತದೆ.

ಶ್ರೀಮಾನ್ ಪುಟ್ಟಯ್ಯನವರ ಪರಿಚಯ ನನಗೆ ಆದದ್ದು ಸುಮಾರು ೧೯೦೮-೯ ರಲ್ಲಿ. ಒಕ್ಕಲಿಗರ ಸಂಘ ಹುಟ್ಟಿ ಆಗ್ಗೆ ಕೆಲವು ತಿಂಗಳಾಗಿತ್ತು. "ಒಕ್ಕಲಿಗರ ಪತ್ರಿಕೆ" ಆಗತಾನೆ ಹುಟ್ಟಿತ್ತು. ಆ ಪತ್ರಿಕೆಯನ್ನು ಮುದ್ರಿಸಲು ಕೋಟೆಯಲ್ಲಿ [ಟಿಪ್ಪೂಸುಲ್ತಾನರ ಅರಮನೆಯ ಪಕ್ಕದಲ್ಲಿ, ಈಗ ಲ್ಯಾಂಡ್ ಮಾರ್ಟ್‌ಗೇಜ್ (ಜಮೀನು ಅಡಮಾನದ) ಬ್ಯಾಂಕಿನ ಕಟ್ಟಡಕ್ಕೂ ಶ್ರೀ ಆಂಜನೇಯ ಸ್ವಾಮಿಯ ಗುಡಿಗೂ ನಡುವೆ ಇರುವ ಸೀತಾರಾಮ ಮಂದಿರವೆಂಬ ಮನೆಯಲ್ಲಿ] ಇದ್ದ "ಮೈಸೂರು ಸ್ಟ್ಯಾಂಡರ್ಡ್" ಮುದ್ರಣಾಲಯಕ್ಕೆ ಅವರು ಬರುತ್ತಿದ್ದರು. ಅಲ್ಲಿ ಅವರಿಗೂ ನನಗೂ ಮೊದಲು ಪರಿಚಯವಾದದ್ದು. ನನಗೆ ಅದು ಉದ್ಯೋಗಾನ್ವೇಷಣೆಯ ಕಾಲ. ಅಲ್ಲಿಂದ ಸ್ವಲ್ಪ ದಿವಸಗಳಲ್ಲಿಯೇ ಶ್ರೀಮಾನ್ ಕೆ. ಎಚ್. ರಾಮಯ್ಯನವರ ಮೂಲಕ ನಮಗಿಬ್ಬರಿಗೂ ಸ್ನೇಹ ಮೊದಲಾಯಿತು. ಶ್ರೀಮಾನ್ ಕೆ. ಎಚ್. ರಾಮಯ್ಯನವರು ಮೈಸೂರು ದೇಶದ ಸಾರ್ವಜನಿಕ ಜೀವನದಲ್ಲಿ ಹೆಸರಾದವರು; ಒಕ್ಕಲಿಗರ ಸಂಘದ ಮೂಲಸ್ಥಾಪಕರು; ಥಿಯೊಸಾಫಿಕಲ್ ಸೊಸೈಟಿ, ರಾಮಕೃಷ್ಣ ಮಿಷನ್ ಮೊದಲಾದ ಸಂಸ್ಥೆಗಳಲ್ಲಿ ಉತ್ಸಾಹದಿಂದ ಕೆಲಸ ಮಾಡುತ್ತಿದ್ದವರು. ಅವರ ಸ್ನೇಹಿತರು ನೂರಾರು ಮಂದಿ. ರಾಮಯ್ಯನವರ ಸ್ವಜಾತಿ ಪ್ರೀತಿಯು ಅವರಿಗೆ ಅನ್ಯಜಾತಿಯ ಸ್ನೇಹಿತರಲ್ಲಿದ್ದ ಸ್ನೇಹಕ್ಕೆ ಕುಂದಕ ತರುವಂಥಾದ್ದಾಗಿರಲಿಲ್ಲ. ರಾಮಯ್ಯನವರಿಗೂ ನನಗೂ ಇದ್ದ ಸ್ನೇಹ ಕಡೆಯವರೆಗೂ ಒಂದೇ ತೆರದ್ದಾಗಿತ್ತು. ನಮ್ಮ ಸ್ನೇಹದ ಸೂರ್ಯ

ನನ್ನ ರಾಜಕೀಯದ ರಾಹು ಎಂದೂ ಹಿಡಿಯಲೇ ಇಲ್ಲವೆಂದ. ಹೇಳಿದರೆ ಅಬದ್ಧವಾದೀತು; ಆದರೆ ಆ ಗ್ರಹಣಗಳು ಬಂದಿದ್ದದ್ದು ಒಂದೆರಡು ಸಲ ಮಾತ್ರ; ಮತ್ತು ಬಂದಾಗಲೂ ಅವು ಬಹುಕಾಲ ಇರಲಿಲ್ಲ. ನನಗಂತೂ ರಾಮಯ್ಯನವರ ವಿಷಯದಲ್ಲಿ ಇದ್ದ ಮೆಚ್ಚಿಕೆ ಇಂದಿಗೂ ಹಾಗೆಯೇ ಇದೆ. ಒಟ್ಟಿನ ಮೇಲೆ ಅವರು ಸರಳ ಸ್ವಭಾವಿಗಳು, ಬಿಚ್ಚಿದ ಮನಸ್ಸಿನವರು, ಸ್ನೇಹಪರರು ಮತ್ತು ಕಷ್ಟಕ್ಕೀಡಾದವರಲ್ಲಿ ಕನಿಕರವುಳ್ಳವರು. ಅವರೊಡನೆ ಆದ ಜಗಳ ಎರಡು ನಿಮಿಷದ ವಿನೋದ. ಮೂರನೆಯ ನಿಮಿಷ ಹುಬ್ಬು ಗಂಟಿಕ್ಕಲು ಅವರ ಮೈಗೆ ಆಗುತ್ತಿರಲಿಲ್ಲ. ಊರೂರನ್ನೇ ನಗಿಸುವಂತೆ ಅವರು ನಗುತ್ತಿರಬೇಕು. ಅವರಿಗೆ ಶ್ರೀ ಪುಟ್ಟಯ್ಯನವರಲ್ಲಿ ಸಹೋದರ ಸದೃಶ ವಾದ ಪ್ರೀತಿ. ಶ್ರೀಮಾನ್ ಪುಟ್ಟಯ್ಯನವರ ಮದುವೆಯ ದಿವಸದಲ್ಲೂ, ಅವರ ಮೊದಲ ಮಗು ಹುಟ್ಟಿದಾಗ—ಶ್ರೀ ರಾಮಕೃಷ್ಣ ಪರಮಹಂಸರ ಪೂರ್ವಾಶ್ರಮದ ಸಹಧರ್ಮಿಣಿ ಶ್ರೀ ಶಾರದಾಮಣಿ ದೇವಿಯವರು ಬೆಂಗ ಳೂರಿಗೆ ದಯಮಾಡಿಸಿದ್ದ ಆ ಶುಭ ದಿವಸದಲ್ಲೂ—ರಾಮಯ್ಯನವರು ಪಟ್ಟ ಸಂಭ್ರಮ ಸಡಗರಗಳ ದೃಶ್ಯ ಈಗಲೂ ನನ್ನ ಕಣ್ಣಮುಂದೆ ನಿನ್ನೆ ಮೊನ್ನೆ ನಡೆದ ಸಂಗತಿಗಳಂತೆ ನಿಂತಿದೆ.

ರಾಮಯ್ಯನವರು ಎಷ್ಟು ಮಾತುಗಾರರೋ ಪುಟ್ಟಯ್ಯನವರು ಅಷ್ಟು ಮಿತಭಾಷಿಗಳು. ಹತ್ತು ಪ್ರಶ್ನೆಗಳುಳ್ಳ ಹತ್ತು ವಾಕ್ಯಗಳಿಗೆ ಒಂದೇ ವಾಕ್ಯ ದಲ್ಲಿ ಉತ್ತರ ಹೇಳುವುದು ಪುಟ್ಟಯ್ಯನವರ ಸ್ವಭಾವ. ಯಾವುದರಲ್ಲೂ ಅವರು ಅತಿರೇಕ ತೋರುತ್ತಿದ್ದವರಲ್ಲ. ಯಾರನ್ನೂ ಬಹು ಬೇಗ ಹತ್ತಿರ ಸೇರಿಸುತ್ತಿದ್ದವರಲ್ಲ. ಪುಟ್ಟಯ್ಯನವರಂಥವರೊಡನೆ ಸ್ನೇಹ ಬೆಳೆಯಲು ಕೊಂಚಕಾಲ ಹಿಡಿಯುತ್ತದೆ ಆದರೆ ಅದು ಬೆಳೆಯಲಾರಂಭಿಸಿದ ಮೇಲೆ ಬೆಳೆಯುತ್ತಿದ್ದದ್ದೇ ಹೊರತು ಎಂದೂ ಕುಂದಿದ್ದಲ್ಲ.

ಶ್ರೀಮಾನ್ ಪುಟ್ಟಯ್ಯನವರು ಬಿ.ಎ. ಪದವಿಯನ್ನು ಸಂಪಾದಿಸಿದ್ದವ ರಾದರೂ ಕನ್ನಡ ಬರೆಯುವುದಕ್ಕೆ ಹೊರಟಿದ್ದರಲ್ಲಾ ಎಂಬುದು ನನಗೆ ಅವರ ವಿಷಯದಲ್ಲಿ ಆದ ಮೊದಲನೆಯ ಮೆಚ್ಚಿಕೆ. ಈಗ್ಗೆ ಸುಮಾರು ನಲವತ್ತು ವರ್ಷಗಳ ಹಿಂದೆ ಇಂಗ್ಲಿಷ್ ವಿದ್ಯಾವಂತರಲ್ಲಿ, ಕನ್ನಡಕ್ಕೆ ಗಣನೆ ಎಷ್ಟು

ಮಾತ್ರವಿತ್ತು ಎಂಬುದನ್ನು ಇಂದಿನ ಯುವಕರು ಊಹಿಸಲಾರರೋ ಏನೋ! ಆ ಕಾಲದ ಸಭೆ ಸಮಾರಂಭಗಳಲ್ಲಿ ಇಂಗ್ಲಿಷ್ ಕಲಿತವರು ಕನ್ನಡ ಬರೆಯುವುದು, ಕನ್ನಡ ಮಾತನಾಡುವುದು, ಎಂದರೆ ಆನೆಯ ಮೇಲೆ ಅಂಬಾರಿಯಲ್ಲಿ ಕುಳಿತವರು ಬೀದಿ ನೆಲದಮೇಲೆ ಬಡವರೊಡನೆ ಓಡಾಡಿದಂತೆ ಎಂಬ ಭಾವನೆ ಆಗ ಸಾಮಾನ್ಯವಾಗಿತ್ತು. ಅದು ಸರಿಯಾದ ಭಾವನೆಯೆಂದು ಇಂಗ್ಲಿಷ್ ಬಾರದವರೂ ಒಪ್ಪಿಕೊಂಡಿದ್ದರು. ಅಂಥಾ ಕಾಲದಲ್ಲಿ ರಾಮಯ್ಯನವರೂ ಪುಟ್ಟಯ್ಯನವರೂ ಕನ್ನಡಕ್ಕೆ ಬಂದದ್ದು ನನಗೂ ಒಂದು ತರದ ಪ್ರೋತ್ಸಾಹವೇ ಆಯಿತು. ಆ ಮೇಲೆ ಪುಟ್ಟಯ್ಯ ನವರು ಇಂಗ್ಲೆಂಡಿಗೆ ಹೋಗಿ ಅಲ್ಲಿಂದ ಆ ದೇಶದ ಪ್ರಗತಿ ನಾಗರಿಕತೆಗಳನ್ನು ಕುರಿತು ಕನ್ನಡದಲ್ಲಿ "ಒಕ್ಕಲಿಗರ ಪತ್ರಿಕೆ"ಗೆ ಲೇಖನಗಳನ್ನು ಕಳುಹಿಸುತ್ತಿದ್ದದ್ದು ನನಗೆ ಅವರಲ್ಲಿದ್ದ ಮೆಚ್ಚಿಕೆಯನ್ನು ಇಮ್ಮಡಿಗೊಳಿಸಿತು. ಕಡೆ ಕಡೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ಸಂಬಂಧದಲ್ಲಿಯೂ, ಮೈಸೂರು ವಿಶ್ವ ವಿದ್ಯಾಲಯದ ಇಂಗ್ಲಿಷ್-ಕನ್ನಡ ನಿಘಂಟಿನ ಸಂಬಂಧದಲ್ಲಿಯೂ ಅವರೂ ನಾನೂ ಹಲವು ವರ್ಷ ಸಹೋದ್ಯೋಗಿಗಳಾಗಿದ್ದೆವು. ಕನ್ನಡದ ವಿಷಯ ದಲ್ಲಿಯೂ ದೇಶದಲ್ಲಿ ಜ್ಞಾನಪ್ರಸಾರ ಮಾಡಬೇಕೆಂಬ ವಿಷಯದಲ್ಲಿಯೂ ಅವರಿಗಿದ್ದ ಉತ್ಸಾಹ ಮೇರೆಯಿಲ್ಲದುದು.

ಅವರು ನಿಘಂಟು ಸಮಿತಿಯ ಕೆಲಸಗಳನ್ನು ಎಂಥ ಶ್ರದ್ಧೆಯಿಂದ ಮಾಡುತ್ತಿದ್ದರೆಂಬುದನ್ನು ಕಣ್ಣಾರ ಕಂಡದ್ದು ನನಗೆ ಅವರ ವಿಷಯದಲ್ಲಿ ಪೂಜ್ಯಬುದ್ಧಿಯನ್ನುಂಟುಮಾಡಿತು. ಒಂದು ದಿನವಾದರೂ ಅವರು ತಾವು ನೋಡಬೇಕಾಗಿದ್ದ ಕರಡು ಬರಹವನ್ನು ನೋಡದೆ, ಅದರಲ್ಲಿ ತಿದ್ದಬೇಕೆಂದು ತೋರಿದ್ದನ್ನು ಆಲೋಚನೆ ಮಾಡಿ ತಿದ್ದದೆ, ಮೀಟಿಂಗಿಗೆ ಬಂದವರಲ್ಲ. ಇಂಥಾ ಮೀಟಿಂಗುಗಳು ತಿಂಗಳಿಗೆರಡುಸಲ ನಡೆಯುತ್ತಿದ್ದದ್ದರಿಂದ ಆ ಕೆಲಸದ ಪ್ರಯಾಸ ಹೆಚ್ಚಾಗಿತ್ತು. ಅದು ಬಹು ತಾಳ್ಮೆಯನ್ನೂ ಜಾಗರೂ ಕತೆಯನ್ನೂ ಅಪೇಕ್ಷಿಸುವ ಮುಜಗರದ ಕುಸುರಿಯ ಕೆಲಸ. ಪುಟ್ಟಯ್ಯ ನವರು ಮೈಗೆ ಅಲಸಿಕೆಯಾಗಿದ್ದಾಗಕೂಡ ಚರ್ಚಾರ್ಹವೆಂದು ತೋರಿದ ಯಾವ ಅಂಶದಲ್ಲಿಯೂ ಉದಾಸೀನರಾಗಿದ್ದವರಲ್ಲ; ಯಾವ ಉತ್ತರವನ್ನೂ

ಪರೀಕ್ಷೆ ಮಾಡದೆ ಅಂಗೀಕರಿಸಿದವರಲ್ಲ. ನಿಘಂಟು ಪ್ರಮಾಣಭೂತವಾಗ ಬೇಕೆಂಬ ಉದ್ದೇಶದಿಂದ ಅವರು ಪಡುತ್ತಿದ್ದ ಶ್ರಮವು ಅವರ ವಿಷಯ ದಲ್ಲಿ ನಮಗಿದ್ದ ಗೌರವವನ್ನು ವೃದ್ಧಿಪಡಿಸಿತು.

ಅದೇ ಸಂದರ್ಭದಲ್ಲಿ ನಮಗೆ ಚೆನ್ನಾಗಿ ತೋರಿಬಂದದ್ದು ಇಂಗ್ಲಿಷ್ ಸಾಹಿತ್ಯ ವಿಚಾರದಲ್ಲಿ ಅವರಿಗಿದ್ದ ಶ್ರದ್ಧೆ ಮತ್ತು ಸಂಸ್ಕೃತದಲ್ಲಿ ಅವರಿಗಿದ್ದ ಭಕ್ತಿ. ಇಂಗ್ಲಿಷ್ ಪದಗಳ ಮತ್ತು ಭಾಷಾ ಮರ್ಯಾದೆಯ ಸ್ವಭಾವವನ್ನು ತಿಳಿದುಕೊಳ್ಳಬೇಕೆಂಬ ಕುತೂಹಲ ಅವರಲ್ಲಿ ಎದ್ದು ಕಾಣುತ್ತಿತ್ತು. ಸಂಸ್ಕೃತದ ವಿಷಯದಲ್ಲಾದರೋ ಅವರ ಮಮತೆಯು ಅವರ ಕನ್ನಡದ ಅಭಿಮಾನಕ್ಕಿಂತ ಮಿಂಚಿದ್ದೋ ಎಂದು ಶ್ರೀ ಬಿ. ಎಂ. ಶ್ರೀಕಂಠಯ್ಯನವರೂ ನಾನೂ ಅಂದುಕೊಳ್ಳುವಷ್ಟುಮಟ್ಟಿಗೆ ತೋರುತ್ತಿತ್ತು. ಸಂಸ್ಕೃತ ಭಾಷೆಯ ವಿಷಯ ದಲ್ಲಿ ಮಾತ್ರವೇ ಅಲ್ಲ, ಸಂಸ್ಕೃತ ಸಾಹಿತ್ಯ, ಶಾಸ್ತ್ರ, ಚರಿತ್ರೆ, ಪ್ರಾಚೀನ ಸಂಪ್ರದಾಯ, ಪೂರ್ವಿಕರ ಕಲಾ ಸಂಸ್ಕೃತಿ, ಪೂರ್ವದ ಧರ್ಮವ್ಯವಸ್ಥೆ— ಈ ಎಲ್ಲ ಪುರಾತನ ವಿದ್ಯಾವೈದುಷ್ಯಗಳ ವಿಷಯದಲ್ಲಿಯೂ ಅವರ ಮಮತೆ ಶ್ರದ್ಧೆಗಳು ಅಂತರಂಗದೊಳಗಿನಿಂದ ಉಕ್ಕಿಬರುತ್ತಿದ್ದವು.

ಅವರು ಸಮಾಜ ಸೇವೆಯ ರೂಪದಲ್ಲಿಯೂ ಲೋಕ ಮೈತ್ರಿಯ ದಾರಿಯಲ್ಲಿಯೂ ಮಾಡಿದ ಕಾರ್ಯಗಳನ್ನು ಪ್ರಶಂಸೆ ಮಾಡುವ ಯತ್ನಕ್ಕೆ ಇಲ್ಲಿ ನಾನು ಕೈ ಹಾಕಲಾರೆ. ಅವರು ಎಷ್ಟೆಷ್ಟು ಸಂಸ್ಥೆಗಳಲ್ಲಿ ಹೇಗೆ ಹೇಗೆ ಕೆಲಸ ಮಾಡಿದರೆಂಬುದನ್ನು ಈ ಗ್ರಂಥ ತಿಳಿಸುತ್ತದೆ. ಒಂದಾನೊಂದು ಆಪ್ತಮಿತ್ರ ಗೋಷ್ಠಿಯಲ್ಲಿ ಅವರೂ ನಾನೂ ಬಹು ವರ್ಷಗಳಕಾಲ ಸಹ-ಸದಸ್ಯರಾಗಿದ್ದೆವು. ಆಗ ಅವರಿಗೂ ನನಗೂ ಬಳಕೆ ಬಹಳ ಹೆಚ್ಚಾಯಿತು. ಆ ಗೋಷ್ಠಿಯ ಹಣಕಾಸುಗಳ ವ್ಯವಸ್ಥೆಯನ್ನೆಲ್ಲ ಆ ಸ್ನೇಹಿತರು ಪುಟ್ಟಯ್ಯನವರ ಪಾಲಿಗೆ ಬಿಟ್ಟಿದ್ದರು. ಆಗ ಗೊತ್ತಾಯಿತು ನಮಗೆ,—ಅವರ ನಿಷ್ಕರ್ಷೆ ಎಂಥಾದ್ದು, ಅವರ ಜಾಗರೂಕತೆ ಎಂಥಾದ್ದು ಮತ್ತು ಅವರ ನಿಯಮ ನಿಷ್ಠೆ ಎಂಥಾದ್ದು ಎಂಬುದು. ಪುಟ್ಟಯ್ಯನವರು ಸಾವಿರಾರು ರೂಪಾಯಿಗಳ ಲೆಕ್ಕವನ್ನು ಒಂದು ಕಾಸೂ ಹೆಚ್ಚು ಕಡಮೆಯಾಗದಂತೆ, ಮತ್ತು ಒಂದು ದಿವಸ ಹೆಚ್ಚುಕಡಮೆಯಾಗದಂತೆ, ಬರೆದಿಟ್ಟು ಒಪ್ಪಿಸುತ್ತಿದ್ದರು.

ಒಟ್ಟಿನ ಮೇಲೆ ನಮ್ಮ ಜನದಲ್ಲಿ ಸರ್ವತ್ರ ಎಂಥ ಗುಣಗಳು ಹರಡಿರ ಬೇಕೆಂದು ನಾವು ಆಶೆ ಪಡಬಹುದೋ ಅಂಥ ಗುಣಗಳನ್ನು ಪುಟ್ಟಯ್ಯನವರು ಸಂಪಾದಿಸಿಕೊಂಡಿದ್ದರು. ಮನೆತನದ ಹಿರಿಮೆಯಾಗಲಿ, ಸಿರಿಯಾಗಲಿ, ಮತ್ತಾವ ಹೊರಗಣ ಸಂದರ್ಭವಾಗಲಿ ಸಹಾಯಕ್ಕೆ ದೊರೆಯದೆ ಇದ್ದಾತ ನೊಬ್ಬನು ಕೇವಲ ಸ್ವಪ್ರಯತ್ನದಿಂದ ಜೀವನಾನುಕೂಲತೆಯನ್ನು ಸಂಪಾದಿಸಿ ಕೊಂಡು ಹೇಗೆ ನಾಲ್ಕು ಮಂದಿಗೆ ಪ್ರಯೋಜನಕಾರಿಯೂ ಗಣ್ಯನೂ ಆಗ ಬಹುದೆಂಬುದಕ್ಕೆ ಪುಟ್ಟಯ್ಯನವರ ಜೀವನ ನಿದರ್ಶನವಾಗಿದೆ. ಅವರಲ್ಲಿ ನಾವು ಯಾವ ಯಾವುದನ್ನು ಮೆಚ್ಚಿ ಸಂತೋಷಿಸಬಹುದೋ ಅದೆಲ್ಲ ಅವರ ಸ್ವಂತ ಕೃಷಿಯ, ಸ್ವಂತ ನಿಷ್ಠೆಯ, ಸ್ವಂತ ಶ್ರಮದ ಫಲ. ಅವರು ದೈನ್ಯ ದಿಂದ ಒಬ್ಬರಲ್ಲಿ ಹೋಗಿ ಬೇಡಿದವರಲ್ಲ. ಆತ್ಮಗೌರವವನ್ನು ಎಂದೂ ತೊರೆ ದವರಲ್ಲ. ಆದರೆ ಆತ್ಮಗೌರವವೆಂಬ ಹೆಸರಿನಿಂದ ದರ್ಪ ಅಟ್ಟಹಾಸಗಳನ್ನು ತೋರಿದವರೂ ಅಲ್ಲ. ಕಟುಮಾತೂ ಅಹಂಕಾರದ ನಡತೆಯೂ ಅವರಲ್ಲಿ ರಲಿಲ್ಲ. ವಿನಯ ಸರಸತೆಗಳು ಅವರ ಹುಟ್ಟು ಗುಣ. ಆದ್ದರಿಂದಲೇ ಅವರ ಮಿತ್ರಮಂಡಲಿ ಅಷ್ಟು ವಿಸ್ತಾರವಾಗಿದ್ದದ್ದು.

ಅವರ ಗೃಹಜೀವನವನ್ನು ಕುರಿತು ಒಂದು ಮಾತನ್ನಾದರೂ ಹೇಳ ಬೇಕೆನ್ನಿಸುತ್ತದೆ. ಅವರೂ ಶ್ರೀ ಕೆ. ಎಚ್. ರಾಮಯ್ಯನವರೂ ಸಂಸಾರಿಗಳಿಗೆ ಆದರ್ಶಪ್ರಾಯರೆಂದು ನನ್ನ ತಿಳಿವಳಿಕೆ. ಇಬ್ಬರೂ ಒಂದೇರೀತಿ ಕುಟುಂಬ ವಾತ್ಸಲ್ಯವುಳ್ಳವರು. ಅವರ ಸಂತೋಷ ಸ್ಥಲಗಳು ಬೇರೆ ಎಷ್ಟಿದ್ದರೂ ಮನೆ ಅವರಿಗೆ ಎಲ್ಲಕ್ಕಿಂತಲೂ ಮೇಲಾದದ್ದು. ಕ್ಲಬ್ಬುಗಳಲ್ಲಿಯೂ ನಾಟಕ ಶಾಲೆ ಗಳಲ್ಲಿಯೂ ಸುಖವನ್ನರಸುವ ದೊಡ್ಡಮನುಷ್ಯರ ಸಂಖ್ಯೆ ಹೆಚ್ಚುತ್ತಿರುವ ಈ ಕಾಲದಲ್ಲಿ ಪುಟ್ಟಯ್ಯ ರಾಮಯ್ಯನವರಂಥವರ ಸ್ಮರಣೆ ಮನಸ್ಸಿಗೆ ಆಪ್ಯಾ ಯನಕಾರಿಯಾಗುತ್ತದೆ.

ಪುಟ್ಟಯ್ಯನವರ ಮನೆಗೆ ಹೋಗಿ ಕೂತಿರುವುದೇ ನನಗೊಂದು ಸಂತೋಷ. ಮನೆಯಲ್ಲಿ ಎತ್ತ ಕಡೆ ನೋಡಿದರೂ ಚೊಕ್ಕಟ; ಎಲ್ಲಿ ನೋಡಿ ದರೂ ಬೆಳಕು; ಎಲ್ಲವೂ ನಾಜೂಕು. ಜಮಖಾನ, ಕುರ್ಚಿ, ಮೇಜು ಎಲ್ಲವೂ ನಯವಾಗಿ ಅಂದವಾಗಿ ಇರುತ್ತಿದ್ದುವು. ಗೋಡೆಯ ಮೇಲಣ

ಪಟಗಳು, ಕೆತ್ತನೆಯ ಕೆಲಸದ ಬಾಗಿಲುತಡೆ (Screen), ಚಾಚು ಹಲಗೆಯುಮೇಲಿನ ಗಡಿಯಾರ–ಎಲ್ಲವೂ ಸೊಗಸು. ಯಾವುದನ್ನು ನೋಡಿದರೂ ಒಂದು ಕಣ ದೂಳು ಇರುತ್ತಿರಲಿಲ್ಲ; ಮತ್ತು ಎಲ್ಲವೂ ಯೋಚನೆಯಿಂದ ಆರಿಸಿ ಅಣಿಮಾಡಿಟ್ಟಹಾಗೆ ಇರುತ್ತಿದ್ದುವು. ಜಂಬವಿಲ್ಲದ ಸೊಗಸು, ಆಡಂಬರವಿಲ್ಲದ ಸಂಪತ್ತು, ಅವರ ಏರ್ಪಾಟು. ಅವರ ಆದರಣೆಯೂ ಹಾಗೆಯೇ. ಮಿತ್ರರನ್ನು ಆಗಾಗ ಮನೆಗೆ ಕರೆದು ಔತಣ ಮಾಡಿಸುತ್ತಿದ್ದರು. ಅದರಲ್ಲಿಯೂ ನಾಟಕ ಪ್ರದರ್ಶನವಿಲ್ಲದ ವಿಶ್ವಾಸ; ಅದು ನಮ್ಮ ಕಿವಿಗಳಿಗೆ ಗೋಚರವಾಗುತ್ತಿದ್ದದ್ದಕ್ಕಿಂತ ನಮ್ಮ ಮನಸ್ಸಿಗೆ ಹೆಚ್ಚು ಗೋಚರವಾಗುತ್ತಿತ್ತು. " ಮನೆಯಲ್ಲಿ ಅಂಥಾ ನಿರ್ಮಲ ಸಂತೋಷದ ವಾತಾವರಣವನ್ನು ತುಂಬಿಡಬಲ್ಲ ಸಹಧರ್ಮಿಣಿಯನ್ನು ಕಂಡುಹಿಡಿದು ತಂದದ್ದೇ ನಿಮ್ಮ ಬುದ್ಧಿವಂತಿಕೆ!''—ಎಂದು ಅವರನ್ನು ನಾವು ವಿನೋದಕ್ಕೀಡು ಮಾಡಿ ನಕ್ಕದ್ದು ನನಗೆ ಚನ್ನಾಗಿ ಜ್ಞಾಪಕವಿದೆ.

ಸ್ವಜನ ಸ್ವಭಾಷೆ ಸ್ವಕೀಯ ಸಂಸ್ಕೃತಿಗಳಲ್ಲಿ ಭಕ್ತಿ, ಜೀವನಕ್ರಮದಲ್ಲಿ ನಿಯಮ ನಿಷ್ಕರ್ಷೆಗಳು, ಸಂತತವಾದ ವ್ಯವಸಾಯ, ಕಾರ್ಯತತ್ಪರತೆ, ಎಲ್ಲದರಲ್ಲೂ ವಿವೇಕ, ಜಾಗರೂಕತೆ, ಸದ್ವಿಷಯೋತ್ಸಾಹ, ಸದಾ ಸಂತೋಷ, ನಮ್ರತೆಯಿಂದ ಕೂಡಿದ ಆತ್ಮವಿಶ್ವಾಸ, ಸ್ನೇಹದಲ್ಲಿ ವಿಶ್ವಾಸಾರ್ಹತೆ, ದೈವದಲ್ಲಿಯೂ ಧರ್ಮದಲ್ಲಿಯೂ ನಂಬಿಕೆ—ಇವು ಪುಟ್ಟಯ್ಯನವರನ್ನು ಅವರ ಮಿತ್ರರಿಗೆಲ್ಲ ಪ್ರಿಯರನ್ನಾಗಿ ಮಾಡಿವೆ. ಅವರ ಮೃತಿಯಿಂದ,—ಆ ಮೃತಿಯ ರೀತಿಯಿಂದ,–ನಮಗಾದ ದುಃಖವನ್ನು ಹೇಳಲು ನನಗೆ ಬಾಯಿಲ್ಲ. ಭಗವಂತನು ಅವರ ಕುಟುಂಬದವರಿಗೆಲ್ಲ ನಿರ್ಮಲವಾದ ಸಂತೋಷವನ್ನು ಕೊಡಲೆಂದು ಪುಟ್ಟಯ್ಯನವರ ಸ್ನೇಹಿತರೆಲ್ಲರೂ ಪ್ರಾರ್ಥಿಸುತ್ತಾರೆ. ಅವರ ಜೀವನ ಚರಿತ್ರೆಯನ್ನು ನಮ್ಮ ಜನರೆಲ್ಲ ಓದಿ ಸಂತೋಷಿಸುವರೆಂದು ನಾನು ನಂಬಿದ್ದೇನೆ.

ಶ್ರೀ ರಾಧಾಕೃಷ್ಣ ಅವರು ಬ್ರಾಹ್ಮಣ-ಬ್ರಾಹ್ಮಣೇತರ ವಿವಾದವನ್ನು ಕುರಿತು ಒಂದೆರಡು ಕಡೆ ಪ್ರಸ್ತಾವಿಸಿದ್ದಾರೆ. ಅದು ಈ ಗ್ರಂಥಕ್ಕೆ ಅಪ್ರಸಕ್ತವೆಂದು ನಾನು ಹೇಳಲಾರೆ; ಮತ್ತು ಶ್ರೀ. ರಾಧಾಕೃಷ್ಣ ಅವರ ಮಾತಿನಲ್ಲಿ

ನ್ಯಾಯವಿಲ್ಲವೆಂದೂ ಹೇಳಲಾರೆ. ಆ ವಿವಾದವನ್ನು ಕುರಿತು ನಾನು ಇಲ್ಲಿ ಏನಾದರೂ ಹೇಳುವುದು ಯುಕ್ತವೆ ? ಎಂಬ ವಿಷಯದಲ್ಲಿ ನನಗೆ ಸಂದೇಹ ವಿಲ್ಲದೆ ಇಲ್ಲ. ಆ ಕಹಿ ವಿವಾದ ಜನಕ್ಕೆ ಎಷ್ಟುಬೇಗ ಮರೆತುಹೋದರೆ ಅಷ್ಟು ಒಳ್ಳೆಯದೆಂದು ನಾನು ತಿಳಿದುಕೊಂಡಿದ್ದೇನೆ. ಆ ಉದ್ದೇಶದ ದೃಷ್ಟಿಯಿಂದ ಒಂದೆರಡು ಮಾತನ್ನು ಹೇಳಬಹುದೆಂದು ತೋರುತ್ತದೆ. ಹಿಂದುಳಿದ ಪಂಗಡಗಳವರಿಗೆ ವಿದ್ಯಾಸೌಲಭ್ಯಗಳನ್ನೂ ಸರಕಾರದ ಉದ್ಯೋಗಗಳನ್ನೂ ದೊರಕಿಸುವ ವಿಚಾರದಲ್ಲಿ ಮುಂದೆ ಬಂದಿದ್ದ ಪಂಗಡಗಳವರಿಂದ ಆ ಕಾಲ ದಲ್ಲಿ ಎಂಥ ಪ್ರತಿಬಂಕಧವಾಗುತ್ತಿತ್ತೆಂಬುದನ್ನು ಶ್ರೀ ರಾಧಾಕೃಷ್ಣ ಅವರು ಪ್ರಸ್ತಾವಿಸಿದ್ದಾರೆ; ಹಾಗೆಯೇ ಒಕ್ಕಲಿಗರ ಸಂಘದ ಅಭಿವೃದ್ಧಿಗೂ ಪುಟ್ಟಯ್ಯ ನವರ ಅಭಿವೃದ್ಧಿಗೂ ಆ ಕಾಲದ ಬ್ರಾಹ್ಮಣ ಅಧಿಕಾರಿಗಳಿಂದ ಹೇಗೆ ಸಹಾಯ ಪ್ರೋತ್ಸಾಹಗಳು ದೊರಕಿದವೆಂಬುದನ್ನೂ ಅವರೇ ಸ್ಪಷ್ಟವಾಗಿ ವಿವರಿಸಿದ್ದಾರೆ. ಇದರಿಂದ ಶ್ರೀ ರಾಧಾಕೃಷ್ಣ ಅವರ ಮನಸ್ಸಿನಲ್ಲಿ ನ್ಯಾಯ ಪ್ರೀತಿಯುಂಟೆಂಬುದು ಸಿದ್ಧವಾಯಿತು. ಅವರು ಹೇಳಿರುವಂಥ ಸಂದರ್ಭದ ವಿಷಯದಲ್ಲಿ ನನ್ನ ಮನಸ್ಸಿಗೆ ತೋರುವುದೇನೆಂದರೆ ತಪ್ಪಾದಕಡೆ ಎಲ್ಲರದೂ ತಪ್ಪಲ್ಲ; ತಪ್ಪಿನ ಜೊತೆಗೆ ಗುಣವೂ ಸೇರಿಕೊಂಡಿರಬಹುದು ಎಂದು.

ನಮ್ಮ ದೇಶದಲ್ಲಿ ವರ್ಣಾಶ್ರಮ ವ್ಯವಸ್ಥೆ ಮೊದಲಾದದ್ದು ಯಾವಾಗ ? ಅದು ಹುಟ್ಟಿದ್ದು ಹೇಗೆ—ಏತಕ್ಕೆ ? ಎಂಬ ವಿಚಾರಗಳು ಬಹಳ ವಿಸ್ತಾರ ವಾದವು ಮತ್ತು ಗಹನವಾದವು. ಎಂದಿನಿಂದಲೋ ಯಾವ ಕಾರಣ ದಿಂದಲೋ ಜಾತಿಭೇದವೆಂಬುದು ರೂಢಿಯಾಗಿ ಬಂದು ನಿಂತಿದೆ. ಈ ವ್ಯವಸ್ಥೆ ಇಷ್ಟು ಸಹಸ್ರವರ್ಷಗಳ ಕಾಲ ನಿಂತಿರಬೇಕಾದರೆ ಅದರಲ್ಲಿ ಗುಣ ವೇನೂ ಇಲ್ಲದೆ, ಎಲ್ಲವೂ ಮೋಸವೂ ಅನ್ಯಾಯವೂ ಆದದ್ದಾಗಿಯೇ ಇದ್ದಿರ ಬಹುದೆ ? ಹಿಂದೆ ನ್ಯಾಯವಿಮರ್ಶಕರೂ ಸೂಕ್ಷ್ಮದರ್ಶಿಗಳೂ ಯಾರೂ ಹುಟ್ಟಿರಲಿಲ್ಲವೆ ? ಸಮಾಜವೆಲ್ಲ ಆ ಸಂಪ್ರದಾಯವನ್ನು ಹೇಗೆ ಅಂಗೀಕರಿ ಸಿತು ? ಈ ಪ್ರಶ್ನೆಗಳನ್ನು ನಾವು ಆಲೋಚಿಸಬೇಕಾಗುತ್ತದೆ. ಬ್ರಾಹ್ಮಣ ಜಾತಿಯ ಮಾತು ಹಾಗಿರಲಿ; ಉಳಿದ ಹಿಂದೂ ಪಂಗಡಗಳಲ್ಲಿ ಛತ್ತಾರು ಒಳ ಪಂಗಡಗಳು ಹುಟ್ಟಿಕೊಂಡಿರುವುದೇಕೆ ? ಒಕ್ಕಲಿಗರಲ್ಲಿ ನಾಲ್ಕಾರು ಒಳ ಪಂಗಡ ಬುಡಕಟ್ಟುಗಳಾಗಿರುವುದೇತಕ್ಕೆ ?

ಈ ಹೊತ್ತು ನಮ್ಮ ಮನಸ್ಸನ್ನು ಕಲಕುತ್ತಿರುವುದು ಜಾತಿವರ್ಣಗಳ ಭೇದದ ಏರ್ಪಾಟಲ್ಲ; ಆ ಭೇದದಲ್ಲಿ ಅಡಗಿರುವ ಉಚ್ಚನೀಚಗಳೆಂಬ ಅಸಮಾನತೆಯ ಏರ್ಪಾಟು. ಬ್ರಾಹ್ಮಣರಲ್ಲಿ ಬಡಗನಾಡು, ಮುಲಕನಾಡು, ವೆಲನಾಡು, ಸೀರನಾಡು, ಕಮ್ಮೆ, ದ್ರಾವಿಡ ಮೊದಲಾದ ನಾಲ್ಕಾರು ಪ್ರಭೇದಗಳಿದ್ದರೂ ಅವರವರಲ್ಲಿ ಮೇಲುಕೀಳೆಂಬ ಕಾರಣದ ತಕರಾರಿಲ್ಲ. ಒಬ್ಬರು ಮತ್ತೊಬ್ಬರಲ್ಲಿ ಭೋಜನ ವಿವಾಹಾದಿ ವ್ಯವಹಾರಗಳನ್ನಿಟ್ಟುಕೊಳ್ಳದಿದ್ದರೂ ಒಟ್ಟಿನಲ್ಲಿ ಎಲ್ಲರೂ ಸಮಾನರೆಂಬ ಭಾವನೆಯುಂಟು. ಒಕ್ಕಲಿಗರಲ್ಲಿಯೂ ಹಾಗೆಯೇ ಕುಂಚಿಟಿಗರು, ಗಂಗಡಿಕಾರರು, ಮರಸೊಕ್ಕಲಿಗರು, ರೆಡ್ಡಿಗಳು ಎಂದು ನಾನಾ ಗುಂಪುಗಳಿದ್ದಾಗ್ಗೂ ಅವರವರಲ್ಲಿ ಸಮಾನತೆಯ ಗಣನೆಯಿದೆ. ಗುಂಪು ಬೇರೆ ಬೇರೆ ಎಂಬಷ್ಟು ಕಾರಣದಿಂದ ಅವರಲ್ಲಿ ಒಳಜಗಳವೇನೂ ಇಲ್ಲ. ಆದರೆ ಎಲ್ಲ ಪಂಗಡಗಳ ಒಕ್ಕಲಿಗರನ್ನೂ ಒಟ್ಟಿಗೆ ತೆಗೆದುಕೊಂಡರೆ ಅವರಿಗೆ ಬ್ರಾಹ್ಮಣರು ತಮ್ಮನ್ನು ಕೀಳೆಂದು ಕಾಣುತ್ತಿದ್ದಾರೆ ಎಂಬುದೊಂದು ಅಸಮಾನತೆಯ ಆಕ್ಷೇಪಕಾರಣ; ಇನ್ನೊಂದು ಜಾತಿಯವರು (ಉದಾಹರಣೆಗಾಗಿ, ಪಂಚಮರು) ತಮಗಿಂತ ಕೀಳೆಂಬುದೊಂದು ಅಸಮಾನತೆಯ ಅಭಿಮಾನಕಾರಣ. ಹೀಗೆ ಎಲ್ಲಿ ನೋಡಿದರೂ ಆಗ್ರಹಕ್ಕೆ ಕಾರಣವಾಗಿರುವುದು ಬರಿಯ ಬೇರೆತನವಲ್ಲ; ಆ ಬೇರೆ ವಿಂಗಡಿಕೆಯ ಕೂಡ ಕಾಣುವ ಮೇಲುಕೀಳೆಂಬ ಎಣಿಕೆ ಅಥವಾ ಅಸಮಾನತೆ.

ಈ ಅಸಮಾನತೆಯ ಭಾವನೆಯನ್ನು ಉಂಟುಮಾಡಿದವರು ಯಾರು? ಬಲಗೈ ಎಡಗೈಗಿಂತ ಶ್ರೇಷ್ಠವೆಂದು ಮೊದಲು ಎಣಿಸಿದವರು ಯಾರು? ಆ ತಾರತಮ್ಯ ನ್ಯಾಯವಾದದ್ದೆ? ಎಡಗೈ ನಿಕೃಷ್ಟವೆಂಬಪಕ್ಷಕ್ಕೆ ಅದು ತನಗಾದ ಅಪಮಾನವನ್ನು ಹೇಗೆ ತಾಳಿಕೊಂಡಿದೆ? ಮೈಯ ಎಡಪಕ್ಕವೆಲ್ಲ ಅಸಹಕಾರ ಮಾಡಿದರೆ ಹೇಗಿರುತ್ತದೆ? ಹೀಗೆ ನಾವು ನೀತಿಯ ಮೂಲತತ್ವವನ್ನು ಹುಡುಕುತ್ತ ಹೋದರೆ ಅಸಂಗತ ಕಾಣುವುದು ಜಾತಿ ವಿಂಗಡಿಕೆಯೊಂದರಲ್ಲೇ ಅಲ್ಲ; ಇನ್ನೂ ಎಷ್ಟೋ ಸಂಪ್ರದಾಯಗಳಲ್ಲಿ ಅಸಂಬದ್ಧಗಳು ಕಾಣಬರುತ್ತವೆ. ಹೀಗೆ ಬಹುಕಾಲದಿಂದ ನಮ್ಮ ಗಮನಕ್ಕೆ ಬಾರದಂತೆಯೇ, ನಮ್ಮ ದೃಷ್ಟಿಗೆ ಬೀಳದಂತೆಯೇ, ನಮ್ಮಲ್ಲಿ ಬೆಳೆದುಕೊಂಡು ಬಂದಿರುವ ಸಾಮಾಜಿಕ

ದೋಷಗಳ ವಿಷಯದಲ್ಲಿ ನಾವು ಕೋರಬೇಕಾದ ಭಾವನೆ ಈಕಡೆ ಸಮ್ಮತಿ ಉಪೇಕ್ಷೆಗಳಲ್ಲ; ಆಕಡೆ ರೋಷ ನಿಷ್ಠುರಗಳೂ ಅಲ್ಲ. ನಾವು ಅಭ್ಯಾಸ ಮಾಡಬೇಕಾದದ್ದು ಸ್ನೇಹಪೂರ್ವಕವಾದ ನ್ಯಾಯ ವಿವೇಚನೆಯನ್ನು— ಸಕಾರಣ ತರ್ಕದ ನ್ಯಾಯವಿವೇಚನೆಯನ್ನು ಮತ್ತು ಆ ವಿವೇಚನೆಯಿಂದ ಸಿದ್ಧವಾದಂಥ ಸಂಪ್ರದಾಯ ಪರಿಷ್ಕಾರವನ್ನು. ಇಂಥ ವಿವೇಚನೆ ಸುಲಭ ವೆಂದು ನಾನು ಹೇಳುವುದಿಲ್ಲ. ಅದು ಬೇಗ ಆಗತಕ್ಕದ್ದೆಂದೂ ನಾನು ಹೇಳು ವವನಲ್ಲ. ಅದು ಸಾವಧಾನದ ದಾರಿಯೇ. ಆದರೆ ಸಮಾಜದಲ್ಲಿ ಗಣ್ಯರಾಗಿ ಪ್ರಮುಖರೆನಿಸಿಕೊಂಡಿರುವವರಾದರೂ ಆ ಸಾವಧಾನದ ಸಕಾರಣ ವಿಚಾರದ ಮತ್ತು ಸಕ್ರಮಪರಿಷ್ಕಾರದ ದಾರಿಯನ್ನು ದೃಷ್ಟಿಯಲ್ಲಿರಿಸಿಕೊಂಡಿರಬೇಕು. ಸಾಮಾನ್ಯ ಜನರು ರೋಷಾವೇಷಗಳಿಂದಲೂ ಅಸೂಯೆ ಲೋಭಗಳಿಂದಲೂ ನಡೆಯುವುದು ಸ್ವಾಭಾವಿಕ. ಅಭಿಮಾನ ಉದ್ವೇಗಗಳು ತುಂಬಿರುವ ಕಣ್ಣಿಗೆ ನ್ಯಾಯದ ಸೂಕ್ಷ್ಮ ರೇಖೆಗಳು ಸ್ಪಷ್ಟವಾಗಿ ಕಾಣದೆ ಹೋಗುವುದೂ ಸ್ವಾಭಾವಿಕವೇ. ಆದರೆ ಆವೇಶಭರದಲ್ಲಿ ತಪ್ಪಿಹೋದ ನ್ಯಾಯವು ಆ ಕ್ಷಣದ ಲ್ಲಲ್ಲದಿದ್ದರೂ ಪರಿಣಾಮ ಪರಂಪರೆಯಲ್ಲಿ ಸಮಾಜಕ್ಕೆ ಅಪಕಾರವೇ ಆದೀತು. ಬ್ರಾಹ್ಮಣ-ಬ್ರಾಹ್ಮಣೇತರ ವಿವಾದದಲ್ಲಿ ನ್ಯಾಯವೆಲ್ಲವೂ ಒಂದೇ ಕಡೆ, ಅನ್ಯಾಯವೆಲ್ಲವೂ ಅದರೆದುರಿನಲ್ಲಿ ಒಂದೇ ಕಡೆ ಇದೆಯೆಂದು ಹೇಳಲಾಗು ವುದಿಲ್ಲ. ಎಲ್ಲ ಮನುಷ್ಯ ವ್ಯವಹಾರಗಳಲ್ಲೂ ಇರುವಂತೆಯೇ ಇಲ್ಲಿಯೂ ನ್ಯಾಯಾನ್ಯಾಯಗಳು ಎರಡು ಪಕ್ಕಗಳಲ್ಲಿಯೂ ಬೆಳಕು ನೆರಳುಗಳಂತೆ ಬೆರೆತು ಕೊಂಡಿರುತ್ತವೆ. ಧರ್ಮ ಸೂಕ್ಷ್ಮವನ್ನು ಗೌರವಿಸುವವರು ಇಂಥ ಸಂದ ರ್ಭಗಳಲ್ಲಿ ಆತುರ ತೋರಲಾರರು. ತಪ್ಪಿತ ತೋರಿದ ಕಡೆಯವರನ್ನು ಅತಿಯಾಗಿ ಹೀಯಾಳಿಸಲಾರರು. ಆಗಬೇಕಾದ ನ್ಯಾಯ ಶೋಧನೆಯನ್ನು ದ್ವೇಷದ ಮೂಲಕ ಸಾಧಿಸಹೊರಡದೆ ಸ್ನೇಹದ ಮೂಲಕ ಆಗಮಾಡಿಸಲು ಹೊರಟಾರು. ಒಟ್ಟಿನಮೇಲೆ ಪುಟ್ಟಯ್ಯನವರು ದ್ವೇಷದ ದಾರಿಗೆ ಹತ್ತಿರ ಸುಳಿದವರಲ್ಲವೆಂದು ನಾನು ನಿಸ್ಸಂದೇಹವಾಗಿ ಹೇಳುತ್ತೇನೆ.

ಬ್ರಾಹ್ಮಣರು ತಾವೂ ಮನುಷ್ಯಮಾತ್ರದವರು; ಆದಕಾರಣ ಮನುಷ್ಯ ಸಾಮಾನ್ಯವಾದ ದೋಷಗಳು ತಮಗೂ ತಪ್ಪಿದುವಲ್ಲ ಎಂಬುದನ್ನು ಮರೆಯ ಬಾರದು. ಎಂದು ಅವರು "ಭೂಸುರ" ಎಂಬ ವಿಶೇಷಣ ಪದವನ್ನು ತಮ್ಮ

ವಿಷಯದಲ್ಲಿ ಯಥಾರ್ಥವಾಚಕವೆಂದು ತಿಳಿದುಕೊಳ್ಳಲಾರಂಭಿಸಿದರೋ ಅಂದು ಅವರು ಜಾರಿದರು. ಚಿಕ್ಕನಾಯಕನ ಹಳ್ಳಿಯ ಬೆಳ್ಳಿಯ ಬಟ್ಟಲಿನ ಬೆಳ್ಳಿ ಹೇಗೋ, (ಡಚ್ ಗೋಲ್ಡ್) ಗುನ್ನಾಂಪಟ್ಟಿಯ ಅಥವಾ ಕಾಕಿ ಬಂಗಾರದ ಬಂಗಾರ ಎಷ್ಟುಮಾತ್ರದ್ದೋ, ನಮ್ಮ ಕಾಲದಲ್ಲಿ ಭೂಮಿಯ ಮೇಲಿನ ಸುರತ್ವವೂ ಅಷ್ಟೇಮಾತ್ರದ್ದು. ಬ್ರಾಹ್ಮಣರಿಗೆ ಅಧಿಕಾರ ಬೇಡವೆ? ಐಶ್ವರ್ಯ ಬೇಡವೆ ? ಅಟ್ಟಹಾಸ ಬೇಡವೆ ? ಹೊಗಳಿಕೆ ಬೇಡವೆ ? ಬಲ ಬೇಡವೆ ? ಭೋಗ ಬೇಡವೆ ? ಬ್ರಾಹ್ಮಣೇತರರಿಗೆ ಬೇಕಾದ ಯಾವುದು ಬ್ರಾಹ್ಮಣರಿಗೆ ಬೇಡವಾಗಿದೆ ? ಬ್ರಾಹ್ಮಣೇತರರು ಅನುಸರಿಸುವ ಯಾವ ಸಾಧನೋಪಾಯವನ್ನು ಬ್ರಾಹ್ಮಣರು ಅನುಸರಿಸದೆ ಬಿಡುವವರಾಗಿದ್ದಾರೆ ? ಶಾಸ್ತ್ರಪುರಾಣಗಳಲ್ಲಿ ಕಾಣಲಾಗುವ ಬ್ರಾಹ್ಮಣನ ವೈರಾಗ್ಯ, ಧರ್ಮಶ್ರದ್ಧೆ, ವ್ರತನಿಷ್ಠೆಗಳು ಯಾವ ಬ್ರಾಹ್ಮಣರಲ್ಲಿ ಈ ಹೊತ್ತು ಉಳಿದಿವೆಯೋ ಅವನಿಗೆ ನಮ್ಮ ಈ ರಾಜಕೀಯದ ತರ್ಕ ಸಂಬಂಧಪಡತಕ್ಕದ್ದೇ ಅಲ್ಲ. ಲೋಕದ ಸಂಪತ್ತು ಬಹುಮಾನಗಳಲ್ಲಿ ಭಾಗ ಬೇಕೆನ್ನುವ ಬ್ರಾಹ್ಮಣರು ಲೋಕದ ಗುದ್ದಾಟಕ್ಕೆ ಸಿದ್ಧರಾಗಿರಲೇಬೇಕು. ಗುದ್ದಾಟದಲ್ಲಿ ಒಂದು ನ್ಯಾಯವಿಲ್ಲವೆ? —ಎಂದರೆ, ಅದಕ್ಕೆ ಲೋಕ ಕೊಡುವ ಉತ್ತರ ನಾನಾವಿಧವಾಗಿರುತ್ತದೆ ಸಂಖ್ಯಾಧಿಕ್ಯದಲ್ಲಿಯೂ ಒಂದು ನ್ಯಾಯವುಂಟು. ಮುಷ್ಟಿಯ ಗಾತ್ರದಲ್ಲಿಯೂ ಒಂದು ನ್ಯಾಯವಿರಬಹುದು.

ಪುರಾತನ ದೋಷಗಳು ಪರಿಷ್ಕಾರ ಪಡುವುದಕ್ಕೆ ಸ್ವಲ್ಪ ಕಾಲಾವಕಾಶ ಬೇಕು. ಪರಿಷ್ಕಾರವೆಂದರೆ ಬಹುಕಾಲದಿಂದ ಬಂದಿರುವ ಒಂದಾನೊಂದು ಮನೋವೃತ್ತಿಯ ಬದಲಾವಣೆ. ಮನಸ್ಸು—ಬ್ರಾಹ್ಮಣನದೇ ಆಗಲಿ ಇತರನದೇ ಆಗಲಿ—ಅಭ್ಯಾಸವಶವಾದದ್ದು. ಒಂದು ಬಿದಿರನ್ನು ಸ್ವಲ್ಪ ಕಾಲ ಒಂದು ಪಕ್ಕಕ್ಕೆ ಬಗ್ಗಿಸಿಟ್ಟಿದ್ದರೆ ಆ ಮೇಲೆ ಅದನ್ನು ನೇರವಾಗಿಸುವುದಕ್ಕೆ ಎಷ್ಟು ಪ್ರಯತ್ನ ಬೇಕು ? ಒಂದು ಕಾಗದವನ್ನು ಒಂದುಸಲ ಮಡಿಸಿದರೆ ಆ ಮೇಲೆ ಅದನ್ನು ಹಿಂದಿನಂತೆ ಹರಡಿ ಮಡಿಕೆಯ ಸುಕ್ಕು ಕಾಣದಂತೆ ಮಾಡಲು ಎಷ್ಟು ಪ್ರಯತ್ನ ಬೇಕು ? ಮನಸ್ಸಿಗಾದ ಅಭ್ಯಾಸದ ಸುಕ್ಕೂ ಹಾಗೆಯೇ. ಅದನ್ನು ಒಂದು ಪಕ್ಕದಿಂದ ಮತ್ತೊಂದು ಪಕ್ಕಕ್ಕೆ ತಿರುಗಿಸಲು ಬ್ರಾಹ್ಮಣರಿಗೂ ಬ್ರಾಹ್ಮಣೇತರರಿಗೂ ಸಹ ಒಂದೇ ರೀತಿಯಾಗಿ ಬಹುಕಾಲದ

ಪ್ರಯತ್ನ ಅವಶ್ಯ. ಮೇಲೆ ವಿಜ್ಞಾಪಿಸಿದಂತೆ, ಆ ಪ್ರಯತ್ನ ಸ್ನೇಹಧ್ವನಿಯದಾಗಿ ವಿಚಾರಮಾರ್ಗದ್ದಾಗಿದ್ದರೆ ಅದರಿಂದ ಒಳ್ಳೆಯದೇ ಆದೀತು. ಹಾಗಿಲ್ಲದೆ ಬರಿಯ ದ್ವೇಷಾಸೂಯೆಗಳು ಆ ಪ್ರಯತ್ನಕ್ಕೆ ಕಾರಣವಾಗಿದ್ದರೆ, ಒಂದೆರಡುಕ್ಷಣ ಹಿಂದುಳಿದ ಕೋಮುಗಳಿಗೆ ಜಯವಾದಂತೆ ತೋರಿದರೂ ಕ್ರಮೇಣ ಅದು ಒಟ್ಟು ಸಮಾಜಕ್ಕೆ ಹಾನಿಕಾರಿಯೇ ಆದೀತು. ಅಧಿಕಾರ ಸ್ಥಾನಕ್ಕೆ ಬಂದ ಮೇಲೆ ಬ್ರಾಹ್ಮಣೇತರ ವರ್ಗಗಳವರು ಹಿಂದೆ ಬ್ರಾಹ್ಮಣರು ಯಾವ ನೀತಿಯನ್ನು ಅಥವಾ ಅನೀತಿಯನ್ನು ಅನುಸರಿಸಿ ನಿಂದೆಗೀಡಾದರೋ ಅದೇ ಸಂಕುಚಿತ ನೀತಿಯನ್ನೇ ಅನುಸರಿಸಬಹುದೆಂಬುದು ಈಗ ಸ್ಪಷ್ಟವಾಗಿದೆ. ಅಧಿಕಾರಸ್ಥಾನದ ಮಹಿಮೆ ಅಂಥಾದ್ದು. ಅದರ ಅಮಲು ಹಿಂದೆ ಬ್ರಾಹ್ಮಣನನ್ನು ಹಿಡಿದಿದ್ದದ್ದಾದರೆ ಅದು ಈಗ ಬ್ರಾಹ್ಮಣೇತರನನ್ನೇನೂ ಬಿಡತಕ್ಕದ್ದಾಗಿಲ್ಲ. ಶ್ರೀ. ರಾಧಾಕೃಷ್ಣ ಅವರು ಒಂದು ದೊಡ್ಡ ಮಾತನ್ನು ಹೇಳಿದ್ದಾರೆ: ಯಾವ ಜನಾಂಗದವರೂ ನಾವು ಹಿಂದುಳಿದವರು ಹಿಂದುಳಿದವರು ಎಂಬ ನೆಪವನ್ನೇ ಮುಂದುಮಾಡಿಕೊಂಡು ಉದ್ಯೋಗ ಲಾಭಗಳಿಗಾಗಿ ಮುಂದೆ ಬರುವವರಾಗಬಾರದು. ನಾವು ಹಿಂದುಳಿದವರು ಎಂದು ಹೇಳಿಕೊಳ್ಳಲು ಜನ ನಾಚುವಂಥ ಸ್ಥಿತಿ ಬೇಗ ಬರಬೇಕು. ಎಲ್ಲರೂ —ನಮ್ಮ ಯೋಗ್ಯತೆಗೆ ತಕ್ಕಂತೆ ನಮಗೆ ಉದ್ಯೋಗ ಬರಲಿ—ಎಂದು ಕೇಳುವವರಾಗಬೇಕು.

ಶ್ರೀ ರಾಧಾಕೃಷ್ಣರ ವಾಕ್ಯಗಳಿಂದ ಸ್ಪಷ್ಟವಾಗಿ ಮೇಲಕ್ಕೇಳದಿದ್ದರೂ ಆ ತೊಡಕಿನ ವಿಚಾರಕ್ಕೆ ಸಂಬಂಧಪಟ್ಟಿರುವ ಪ್ರಶ್ನೆಗಳು ಇನ್ನೆರಡಿವೆ:—(೧) ನ್ಯಾಯವೆಂಬುದು ಬ್ರಾಹ್ಮಣನಿಗೂ ಸಹ ಸಲ್ಲಬೇಕಾದದ್ದೋ, ಅಥವಾ ಅವನಿಗೆ ಮಾತ್ರ ಅದಕ್ಕೆ ಹಕ್ಕಿಲ್ಲವೋ ? ಎಲ್ಲ ಬ್ರಾಹ್ಮಣರೂ, ಬ್ರಾಹ್ಮಣೇತರರ ವಿಚಾರದಲ್ಲಿ ಅನ್ಯಾಯ ಮಾಡಿದ್ದಾರೆಂದು ಯಾರೂ ಹೇಳಿಲ್ಲ. ದೊಡ್ಡ ದೊಡ್ಡ ಉದ್ಯೋಗಗಳಲ್ಲಿದ್ದ ನಾಲ್ಕುಮಂದಿ ಬ್ರಾಹ್ಮಣರಿಂದ ಅವರ ಜಾತಿಗೆಲ್ಲ ಏನುಪಕಾರವಾಗಿದೆ ? ಬ್ರಾಹ್ಮಣರಲ್ಲಿ ಇಪ್ಪತ್ತು ಪಂಗಡಗಳುಂಟಲ್ಲವೆ ? ಆ ಎಲ್ಲ ಪಂಗಡಗಳಿಗೂ ಪ್ರಯೋಜನವಾಗಿದೆಯೆ ? ನಾಲ್ಕೈದು ಮನೆತನಗಳವರು ಹತ್ತಿಪ್ಪತ್ತು ವರ್ಷಕಾಲ ಅಧಿಕಾರದಲ್ಲಿದ್ದ ಕಾರಣದಿಂದ ಸಮಸ್ತ ಬ್ರಾಹ್ಮಣ ವರ್ಗಕ್ಕೂ ಇನ್ನು ಎಂದೆಂದಿಗೂ ಸಾಕಾಗುವಷ್ಟು ಸುಖಸಂಪತ್ತು

ಗಳು ಬಂದಿವೆಯೆ ? ಬೇರೆ ಸಂಪಾದನೆಯ ಯೋಚನೆ ಅವರಲ್ಲಿ ಯಾರಿಗೂ ಎಂದಿಗೂ ಅವಶ್ಯವಿಲ್ಲದಂತೆ ಆಗುವಷ್ಟು ಮಟ್ಟಿನ ಆಸ್ತಿ ಸ್ವತ್ತುಗಳು ಬ್ರಾಹ್ಮಣರಲ್ಲೆಲ್ಲ ಸೇರಿ ಹರಡಿಕೊಂಡಿದೆಯೇ ? ಬಡವರೂ ಹಿಂದುಳಿದವರೂ ಸಹಾಯಕ್ಕೆ ಅರ್ಹರಾದವರೂ ಬ್ರಾಹ್ಮಣರಲ್ಲಿ ಇಲ್ಲವೆ ? (೨) ಆಮೇಲೆ, ಬ್ರಾಹ್ಮಣ ವರ್ಗದ ಮಾತು ಹಾಗಿರಲಿ. ಬ್ರಾಹ್ಮಣ-ಬ್ರಾಹ್ಮಣೇತರ ಭೇದದಿಂದ ಬೇರೆಯಾಗಿ, ಆ ಎರಡು ವರ್ಗಗಳಿಗಿಂತ ಮೇಲ್ಪಟ್ಟಿರುವ ಅಖಂಡ ದೇಶವೆಂಬುದರ ದೃಷ್ಟಿಯೊಂದು ಉಂಟೆ ? ಇಲ್ಲವೆ ? ಸರಕಾರದ ಉದ್ಯೋಗಗಳೂ ಅಧಿಕಾರ ಪದವಿಗಳೂ ದೇಶ ಸಮಸ್ತಕ್ಕೂ ಸೇರಿದವು. ಆ ಉದ್ಯೋಗ ಪದವಿಗಳ ಕರ್ತವ್ಯ ನಿರ್ವಾಹದಲ್ಲಿ ತೋರುವ ವಿಚಕ್ಷಣೆ ಅವಿಚಕ್ಷಣೆಗಳ ಫಲಾಫಲಗಳನ್ನು ದೇಶೀಯರೆಲ್ಲರೂ ಅನುಭವಿಸಬೇಕಾಗುತ್ತದೆ. ಆದ ಕಾರಣ ಅಧಿಕಾರಗಳ ಹಂಚಿಕೆಯಲ್ಲಿ ಯಾವ ಯಾವ ಜಾತಿಗೆ ಎಷ್ಟೆಷ್ಟು ಸೇರಿತು ಎಂಬ ಪ್ರಶ್ನೆ ಎಷ್ಟೇ ನ್ಯಾಯವಾದದ್ದಾದರೂ, ಅದಕ್ಕಿಂತ ಮುಖ್ಯವಾದದ್ದು ದೇಶಕಾರ್ಯಗಳ ನಿರ್ವಾಹ ಹೇಗೆ ಸಾಗುತ್ತಿದೆ ಎಂಬುದು. ಬ್ರಾಹ್ಮಣೇತರರ ಹಿತ ಹಕ್ಕುಗಳು ಊರ್ಜಿತವಾಗಬೇಕೆಂಬುದು ಎಲ್ಲರೂ ಒಪ್ಪುವ ತತ್ತ್ವವೇ ಸರಿ. ಆದರೆ ಬೇರೆ ಬೇರೆ ಜಾತಿ ಕೋಮುಗಳ ಹಕ್ಕು ಹಿತಗಳ ಯೋಚನೆಯಲ್ಲಿ ದೇಶಕಾರ್ಯದ ವಿಚಕ್ಷಣೆ ಕೆಡುವಹಾಗಿದ್ದಲ್ಲಿ, ನಮ್ಮ ಮೊದಲನೆಯ ಗಮನ ಕಾರ್ಯದಕ್ಷತೆಯ ಕಡೆಗೇ ಹೋಗಬೇಕಲ್ಲವೆ ? ಸರಕಾರದ ಆಡಳಿತಗಳಲ್ಲಿ ಶಾಸ್ತ್ರಜ್ಞಾನ, ಕಾರ್ಯಸಾಮರ್ಥ್ಯ, ಅನುಭವ – ಇವುಗಳಿಗೆ ಬೆಲೆಯುಂಟೆ, ಇಲ್ಲವೆ ? ದೇಶದಲ್ಲಿಯ ಪ್ರಮುಖರು ಒಬ್ಬೊಬ್ಬರೂ—"ನಾನು ಈ ಜಾತಿಯ ಪ್ರತಿನಿಧಿ", "ನಾನು ಆ ಕೋಮಿನ ನಾಯಕ"—ಎಂದು ಹೊರಡುತ್ತಿರುವಾಗ, ಯಾರಾದರೂ "ನಾನು ಈ ಜಾತಿ ಆ ಜಾತಿಯವನಲ್ಲ. ನಾನು ಸಮಗ್ರ ದೇಶದವನು; ಕಾರ್ಯ ಯೋಗ್ಯತೆಯ ಪಕ್ಷದವನು"—ಎಂದು ಹೇಳುವವರು ಇರಬೇಕೆ ? ಬೇಡವೆ ? ಜಾತಿ ವಿಜಾತಿಗಳಿಂದ ಭಿನ್ನವಾದ ಸಾರ್ವಜನಿಕ ದೃಷ್ಟಿಯೊಂದು ಉಂಟೆ? ಇಲ್ಲವೆ ? ಸಾರ್ವಜನಿಕಕ್ಕೆ ನಾವು ಸಲ್ಲಿಸಬೇಕಾದ ನ್ಯಾಯವೊಂದು ಉಂಟೆ ? ಇಲ್ಲವೆ ?

ಒಟ್ಟಿನ ಮೇಲೆ ಈ ತೊಡಕಿನ ತರ್ಕವೆಲ್ಲ ಸರಕಾರಿ ಉದ್ಯೋಗಗಳ ಕಾರಣದಿಂದ ಉತ್ಪನ್ನವಾದದ್ದು. ಪ್ರಗತಿ ತತ್ಪರವಾದ ಜನ ಜೀವನದಲ್ಲಿ

ಸರಕಾರಿ ಉದ್ಯೋಗಗಳ ವಿಚಾರ ಬಹಳ ಮೇಲ್ಪಟ್ಟದ ಪ್ರಸಂಗವೇನೂ ಅಲ್ಲ. ದೇಶದಲ್ಲಿ ಕೃಷಿ ಯಂತ್ರ ಕಾರ್ಖಾನೆ ವಾಣಿಜ್ಯಗಳು ಬೆಳೆದು, ಜನ ಏಳಿಗೆ ಪಡೆದು, ಖಾಸಗಿ ಉದ್ಯೋಗಗಳು ಪ್ರವರ್ಧಮಾನವಾದಂತೆಲ್ಲ ಸರಕಾರಿ ಚಾಕರಿಗಳ ಆಕರ್ಷಣೆ ಕಡಮೆಯಾಗಿ ಜಾತಿಭೇದಗಳ ಕಲಹಕ್ಕೆ ಮೂಲ ಕಾರಣವನ್ನು ಒದಗಿಸುತ್ತಿರುವ ಇಂದಿನ ಸಂದರ್ಭ ಇಲ್ಲವಾಗಬಹುದು.

ಸರಕಾರಿ ಚಾಕರಿಗಳ ಜಗಳಕ್ಕೂ ಬ್ರಾಹ್ಮಣ ಬ್ರಾಹ್ಮಣೇತರ ವಿವಾದಕ್ಕೂ ನಾನು ಇದುವರೆಗೂ ಕೂಡಿದವನಲ್ಲ. ದೂರವಾಗಿ ನಿಂತಿದ್ದೇನೆ. ಅವೆರಡೂ ನನಗೆ ಪ್ರಿಯವಾದ ವಿಷಯಗಳಲ್ಲ. ಆದರೆ ಈಗ ಬ್ರಾಹ್ಮಣನೆನಿಸಿಕೊಂಡಿರುವ ನಾನು ಬ್ರಾಹ್ಮಣೇತರನೆನಿಸಿಕೊಂಡಿರುವ ಶ್ರೀ. ರಾಧಾಕೃಷ್ಣರ ಗ್ರಂಥವನ್ನು ಕುರಿತು ಬರೆಯುತ್ತಿದ್ದೇನೆ. ಆ ಗ್ರಂಥದಲ್ಲಿ ಅವರು ಎತ್ತಿರುವ ವಿವಾದವನ್ನು ಕುರಿತು ನಾನು ಬಾಯಿ ಬಿಡದಿದ್ದಲ್ಲಿ ನನ್ನ ಮೌನಕ್ಕೆ ಉಭಯ ಪಕ್ಷಗಳವರೂ ಅಪಾರ್ಥ ಕಲ್ಪಿಸಬಹುದು. ಆದಕ್ಕಾಗಿ ಇಷ್ಟುದೀರ್ಘವಾಗಿ ನನ್ನ ಸ್ವಂತ ಅಭಿಪ್ರಾಯವನ್ನು ವಿಸ್ತರಿಸಬೇಕಾಯಿತು. ಶ್ರೀ ರಾಧಾಕೃಷ್ಣ ಅವರೂ ಅವರ ವಾಚಕರೂ ನನ್ನನ್ನು ದಯಮಾಡಿ ಕ್ಷಮಿಸಿಯಾರೆಂದು ನಂಬಿದ್ದೇನೆ.

ಶ್ರೀ ರಾಧಾಕೃಷ್ಣ ಅವರ ಬರವಣಿಗೆ ಎಲ್ಲ ದೃಷ್ಟಿಗಳಿಂದಲೂ ಹೇಗಿರುವುದು ಯುಕ್ತವೋ ಹಾಗಿದೆ. ಪುಟ್ಟಯ್ಯನವರು ಎಲ್ಲ ವಿಷಯಗಳಲ್ಲಿಯೂ ಔಚಿತ್ಯವರಿತು ನಡೆಯುತ್ತಿದ್ದವರೆಂಬುದನ್ನು ಸೂಚಿಸಿದ್ದೇನೆ. ಆ ಗುಣ ಮಗನಿಗೆ ಬಂದಿದೆ. ಮಗನಿಗೆ ತಂದೆಯಲ್ಲಿ ಸಹಜವಾಗಿರುವ ಭಕ್ತಿ ಪುಟ ಪುಟದಲ್ಲಿಯೂ ಕಾಣುತ್ತದೆ; ಆದರೆ ಅತ್ಯುಕ್ತಿ ಉತ್ಪ್ರೇಕ್ಷೆಗಳು ಎಲ್ಲಿಯೂ ಇಲ್ಲ. ತಂದೆಯನ್ನು ಮೆಚ್ಚಿಕೊಳ್ಳುವುದರಲ್ಲಿ ಯಾರನ್ನೂ ಕೆಳಕ್ಕಿಳಿಸಿಲ್ಲ. ನಿರೂಪಣ ಕ್ರಮ ಸರಳವಾಗಿ ಸಹಜವಾಗಿದೆ; ಮಾತು ಎಲ್ಲಿ ಹೇಗಿದ್ದರೆ ಚೆನ್ನವೋ ಅಲ್ಲಿ ಹಾಗಿದೆ. ಎಲ್ಲೆಲ್ಲೂ ಒಂದು ಉನ್ನತದ ದೃಷ್ಟಿ, ಒಂದು ಆದರ್ಶಪ್ರೀತಿಯ ಗಮನ ಕಾಣುತ್ತಿದೆ. ಶ್ರೀ ಪುಟ್ಟಯ್ಯನವರು ಈ ಪುಸ್ತಕವನ್ನು ನೋಡಿದ್ದಿದ್ದರೆ ಮನಸಾರ ಮೆಚ್ಚಿಕೊಳ್ಳುತ್ತಿದ್ದರೆಂದು ನನಗೆ ನಂಬಿಕೆಯಿದೆ. ಅವರು ಒಪ್ಪಬಹುದೆನಿಸಿದ್ದನ್ನು ಎಲ್ಲ ಸಭ್ಯಜನರೂ ಅಂಗೀಕರಿಸುವರು.

**ಡಿ. ವಿ. ಜಿ.**

# ಅರಿಕೆ

ನನ್ನ ತಂದೆಯ ಜೀವನವನ್ನು ಚಿತ್ರಿಸಿ, ಹಿರಿಯರಾದವರೊಬ್ಬರಿಂದ ಮುನ್ನುಡಿಯನ್ನು ಬರೆಸಿ, ಚಿತ್ರವನ್ನು ಆ ಚೌಕಟ್ಟಿನಲ್ಲಿಟ್ಟು ನಮ್ಮ ಜನರ ಮುಂದಿಡಬೇಕೆಂದಿದ್ದ ನನ್ನ ಆಸೆ ಇಂದು ಫಲಕಾರಿಯಾಗಿದೆ. ನನ್ನ ಕೋರಿಕೆಯನ್ನು ಮನ್ನಿಸಿ ಕನ್ನಡದ ಹಿರಿಯರೂ, ನನ್ನ ತಂದೆಯನ್ನು ಬಹುಕಾಲದಿಂದ ಬಲ್ಲವರೂ, ಅವರೊಂದಿಗೆ ಅನೇಕ ಕಾರ್ಯಗಳಲ್ಲಿ ಸಹಕರಿಸಿದವರೂ ಆದ ಶ್ರೀ ಡಿ. ವಿ. ಗುಂಡಪ್ಪನವರು ಧೀರ್ಘವಾದ ಮುನ್ನುಡಿಯನ್ನು ಬರೆದು ಈ ಕೃತಿಗೆ ಮರ್ಯಾದೆ ಮಾಡಿದ್ದಾರೆ. ಅದಕ್ಕಾಗಿ ನಾನು ಅವರಿಗೆ ಋಣಿಯಾಗಿದ್ದೇನೆ.

ತಂದೆಯ ಜೀವನವನ್ನು ಚಿತ್ರಿಸುತ್ತ ಪ್ರಾಸಂಗಿಕವಾಗಿ ಒಂದೆರಡು ಕಡೆ ವಾದಗ್ರಸ್ಥವಾದ ವಿಷಯಗಳ ಪ್ರಸ್ತಾಪ ಮಾಡಿದ್ದೇನೆ. ವಿಶಾಲದೃಷ್ಟಿಯುಳ್ಳ ನನ್ನ ತಂದೆ ಬ್ರಾಹ್ಮಣೇತರರ ಪರವಾಗಿ ಕೆಲಸ ಮಾಡಲು ಕಾರಣ ಅನೇಕವಾಗಿತ್ತು ಎಂದು ತೋರಿಸಲು ಬ್ರಾಹ್ಮಣ ಬ್ರಾಹ್ಮಣೇತರರ ವಾದದ ವಿಷಯ ಎರಡು ಮಾತು ಹೇಳಿದ್ದೇನೆ. ಈ ಪ್ರಸಂಗವನ್ನೆ ಶ್ರೀ ಗುಂಡಪ್ಪನವರು ಎತ್ತಿಕೊಂಡು ಚರ್ಚೆಗೆ ಗುರಿಮಾಡಿದ್ದಾರೆ. ಇಂಥ ವಿಷಯಗಳಲ್ಲಿ ಯಾವ ದಾರಿ ಹಿಡಿದರೆ ಉತ್ತಮ ಎನ್ನುವುದನ್ನು ಸೂಚಿಸಿದ್ದಾರೆ. ನನ್ನ ತಂದೆ ಹಿಡಿದ ಮಾರ್ಗ—ಸ್ನೇಹಪೂರಿತವಾದ ನ್ಯಾಯ ವಿವೇಚನೆಯ ಮಾರ್ಗ ಸರಿಯಾದ್ದೆಂದು ಒಪ್ಪಿಕೊಂಡಿದ್ದಾರೆ. "ಸಾಮಾಜಿಕ ದೋಷಗಳ ವಿಷಯದಲ್ಲಿ ನಾವು ತೋರಬೇಕಾದ ಭಾವನೆ ಈಕಡೆ ಸಮ್ಮತಿ ಉಪೇಕ್ಷೆಗಳಲ್ಲ; ಆಕಡೆ ರೋಷ ನಿಷ್ಠುರಗಳೂ ಅಲ್ಲ. ನಾವು ಅಭ್ಯಾಸ ಮಾಡಬೇಕಾದ್ದು ಸ್ನೇಹಪೂರ್ವಕವಾದ ನ್ಯಾಯವಿವೇಚನೆಯನ್ನು, ಸಕಾರಣ ತರ್ಕದ ನ್ಯಾಯ ವಿವೇಚನೆಯನ್ನು, ಮತ್ತು ಆ ವಿವೇಚನೆಯಿಂದ ಸಿದ್ಧವಾದ ಸಂಪ್ರದಾಯ ಪರಿಷ್ಕಾರವನ್ನು" ಎಂದು ಶ್ರೀ ಗುಂಡಪ್ಪನವರು ಹೇಳಿರುವ ಮಾತನ್ನೆ ಮತ್ತೆ ಒತ್ತಿ ಹೇಳಬಯಸುತ್ತೇನೆ.

ಈ ಪುಸ್ತಕವನ್ನು ಸುಂದರವಾಗಿ ಅಚ್ಚುಮಾಡಿ ಸಿದ್ಧಗೊಳಿಸುವುದರಲ್ಲಿ ಶ್ರೀ ಬಿ. ಎಸ್. ಅಯ್ಯಂಗಾರ್ಯರ ಮಕ್ಕಳಾದ ಶ್ರೀ ಗರುಡಾಚಾರ್ಯರು ವಿಶೇಷ ಆಸಕ್ತಿ ವಹಿಸಿದ್ದಾರೆ. ನನ್ನ ತಂದೆಯಲ್ಲಿ ಅವರಿಗಿದ್ದ ವಿಶ್ವಾಸದಿಂದಲೊ ಏನೊ, ಹೋದಾಗಲೆಲ್ಲ ನನ್ನನ್ನು ಅಕ್ಕರೆಯಿಂದ ಕಂಡು ನನ್ನ ಕೆಲಸವನ್ನು ಆಗಮಾಡಿಕೊಟ್ಟಿದ್ದಾರೆ. ಅವರಿಗೂ ಅವರ ಅಚ್ಚುಕೂಟದ ಕೆಲಸಗಾರರಿಗೂ ನನ್ನ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

ಚಾಮರಾಜಪೇಟೆ,<br>4-3-1949

ರಾಧಾಕೃಷ್ಣ.

# ಮೊದಲ ಮಾತು

ನನ್ನ ತಂದೆ ಶ್ರೀಯುತ ಬೆಂಗಳೂರು ಪುಟ್ಟಯ್ಯನವರು ೧೮೭೯ನೆಯ ಇಸವಿಯಲ್ಲಿ ಹುಟ್ಟಿ, ಅರುವತ್ತೈದು ವರ್ಷಕಾಲ ಬದುಕಿ ಬಾಳಿ ೧೯೪೪ನೆ ಇಸವಿಯ ಕೊನೆಯ ದಿನ (31 ಡಿಸೆಂಬರು) ಕೀರ್ತಿಶೇಷರಾದರು. ಬಡತನದಲ್ಲಿ ಹುಟ್ಟಿ, ಬಡತನದಲ್ಲಿ ಬೆಳೆದು, ಸ್ವಂತ ವ್ಯವಸಾಯದಿಂದ ಮುಂದಕ್ಕೆ ಬಂದು, ತಮ್ಮ ಜೀವಮಾನದ ಬಹುಭಾಗವನ್ನು ಹಿಂದುಳಿದವರ ಬಡವರ ಅನಾಥರ ಸೇವೆಗಾಗಿ ವಿನಿಯೋಗಿಸಿ, ಅಂಥವರ ಉದ್ಧಾರಕ್ಕಾಗಿ ಸ್ಥಾಪಿತವಾದ ಸಂಸ್ಥೆಗಳಲ್ಲಿ ದುಡಿದು, ಬಹುಜನರಿಗೆ ಬಹುಸಂಸ್ಥೆಗಳಿಗೆ ಬೇಕಾದವರಾಗಿ ಬಾಳಿದ ನನ್ನ ತಂದೆಯ ಜೀವನ ಚಿತ್ರಿಸಲು ಅರ್ಹವಾದುದೆಂದು ತಿಳಿದು ಆ ಜೀವನವನ್ನು ಇಲ್ಲಿ ಚಿತ್ರಿಸಲು ತೊಡಗಿದ್ದೇನೆ. ಒಂದು ರೀತಿಯಲ್ಲಿ ನೋಡಿದರೆ ನನ್ನ ತಂದೆಯ ಜೀವನ ಚಿತ್ರ ಬೆಂಗಳೂರು ನಗರದ ಕಳೆದ ಐವತ್ತು ವರ್ಷದ ನಾಗರಿಕ ಜೀವನದ ಚಿತ್ರವಾಗಿ ಪರಿಣಮಿಸುತ್ತದೆ. ಅದರಿಂದಲೇ ನನ್ನ ತಂದೆಯ ಜೀವನ ಮನೆಯವರಾದ ನಮಗೇ ಅಲ್ಲದೆ ಇತರರಿಗೂ ರುಚಿಸೀತೆಂದು ತಿಳಿದು, ಆ ಜೀವನವನ್ನು ಇಲ್ಲಿ ಚಿತ್ರಿಸತೊಡಗಿದ್ದೇನೆ.

ಚಿಕ್ಕಂದಿನಿಂದ ತಂದೆಯ ಕಾರ್ಯಗಳನ್ನು, ಅವರ ಬರವಣಿಗೆ ನಡವಳಿಕೆಗಳನ್ನು ನೋಡಿ ಮೆಚ್ಚಿದ್ದ ನನಗೆ ಒಂದಲ್ಲ ಒಂದುದಿನ ಅವರ ಜೀವನವನ್ನು ನನಗೆ ತಿಳಿದಂತೆ ಚಿತ್ರಿಸಬೇಕೆನ್ನುವ ಆಸೆ ಬಹುದಿನದಿಂದ ಇತ್ತು. ಅವರು ಮೊದಲು ಬಡತನದ ಬೇಗೆಯಲ್ಲಿ ಪಟ್ಟ ಕಷ್ಟ; ಆಮೇಲೆ ಕಂಡ ಸುಖ; ಮನೆಯವರೊಡನೆ, ಬಂಧುಗಳೊಡನೆ, ತಮ್ಮ ಅಸಂಖ್ಯಾತ ಸ್ನೇಹಿತರೊಡನೆ ನಡೆದುಕೊಳ್ಳುತ್ತಿದ್ದ ರೀತಿ; ನಾಗರಿಕರ, ಪೌರರ, ಸಾಮಾಜಿಕ ಏಳಿಗೆಗಾಗಿ ಹುಟ್ಟಿಕೊಂಡ ಸಂಸ್ಥೆಗಳಲ್ಲಿ ಅವುಗಳ ಹುಟ್ಟು ಮೊದಲುಗೊಂಡು ತಮ್ಮ ಜೀವಿತದ ಕೊನೆಯ ಗಳಿಗೆಯವರಿಗೆ ಶ್ರಮಿಸಿದ ಬಗೆ; ತಮ್ಮ ಸ್ನೇಹಿತರಿಗೆ, ಸಹ ಕೆಲಸಗಾರರಿಗೆ, ಬಂಧುಗಳಿಗೆ ಬರೆದ ಪತ್ರಗಳಿಂದ ಕಂಡುಬರುವ ಅವರ ವ್ಯಕ್ತಿತ್ವ; ಇವುಗಳನ್ನೆಲ್ಲ ಚಿತ್ರಿಸಬೇಕೆಂದು, ಅವರು ಉಳಿಸಿಹೋಗಿರುವ ನೆನಪುಗಳನ್ನು ಅಳಿಸದೆ ಚಿರಕಾಲ ಉಳಿಸಬೇಕೆಂದು ಅವರ ಜೀವನ ಚರಿತ್ರೆಯನ್ನು ಮುಂದಿನ ಪುಟಗಳಲ್ಲಿ ಚಿತ್ರಿಸುತ್ತ ಹೋಗುತ್ತೇನೆ.

# ತಂದೆ ತಾಯಿ, ಬಾಲ್ಯ

ನಮ್ಮ ಮನೆತನದ ಪೂರ್ವದ ಇತಿಹಾಸ ನನಗೆ ಹೆಚ್ಚು ತಿಳಿಯದು. ನನ್ನ ತಂದೆಯ ತಂದೆಯ ಹೆಸರು ಮರಿಚಿನ್ನಪ್ಪ; ತಾಯಿಯ ಹೆಸರು ತಿಮ್ಮಮ್ಮ. ಹಿಂದೆ ಬೆಂಗಳೂರು ಜೈಲು ತುಮಕೂರು ಜೈಲುಗಳನ್ನು ಕಟ್ಟಿಸಿ ಪ್ರಸಿದ್ಧಿಯಾಗಿದ್ದ ಮುನಿಯ ಮೇಸ್ತ್ರಿಗಳು ನಮ್ಮ ಅಜ್ಜಿಯ ಸಾಕು ತಂದೆ. ಮುನಿಯ ಮೇಸ್ತ್ರಿಗಳ ಹೆಂಡತಿ ನಂಜಮ್ಮನಿಗೆ ಮಕ್ಕಳಾಗಲಿಲ್ಲವಾದ ಕಾರಣ ಹತ್ತಿರದ ಬಂಧುವಾದ ತಿರುಮಲಪ್ಪನನ್ನು ದತ್ತು ಮಗನನ್ನಾಗಿ ಮಾಡಿಕೊಂಡರು. ತಿರುಮಲಪ್ಪನಿಗೆ ಚಿಕ್ಕಣ್ಣನೆಂಬ ಗಂಡುಮಗನೂ, ತಿಮ್ಮಮ್ಮ, ಪಚ್ಚಮ್ಮ ಎಂದು ಇಬ್ಬರು ಹೆಣ್ಣುಮಕ್ಕಳೂ ಹುಟ್ಟಿದರು. ಹೆಣ್ಣುಮಕ್ಕಳಲ್ಲಿ ಹಿರಿಯರಾದ ತಿಮ್ಮಮ್ಮನೆ ನಮ್ಮ ಅಜ್ಜಿ. ಒಂದೊಂದು ಸಲ ಮುನಿಯ ಮೇಸ್ತ್ರಿಗಳ ಮನೆಯ ಸಂಪತ್ತನ್ನೂ ಮನೆಯಮೇಲೆ ಹಾರಾಡುತ್ತಿದ್ದ ಬಾವುಟವನ್ನೂ, ಆ ಮನೆಯಲ್ಲಿ ತಾನು ಬೆಳೆದ ಬಗೆಯನ್ನೂ ಅಜ್ಜಿ ಮೊಮ್ಮಕ್ಕಳಿಗೆ ವರ್ಣಿಸಿ ಹೇಳಿದುದುಂಟು. ಚಿಕ್ಕಂದಿನಿಂದ ಈ ದೊಡ್ಡ ಮನೆತನದ ಸಹವಾಸ ನಮ್ಮ ಅಜ್ಜಿಗೆ ದೊರೆಯಿತು. ಈ ಕಾರಣ ವಾಗಿಯೊ ಏನೊ ಕೊನೆಯವರೆಗೂ ಅವರ ನಡವಳಿಕೆಯಲ್ಲಿ ಒಂದು ಬಗೆಯ ದೊಡ್ಡತನ ಕಂಡುಬರುತ್ತಿತ್ತು. ಬಡತನ ಬಂದು ಕಿತ್ತುತಿನ್ನುವ ಕಾಲ ಬಂದಾಗ ಅವರು ಕುಗ್ಗಲಿಲ್ಲ, ಎದೆಗುಂದಲಿಲ್ಲ. ತಾವು ಹಿಂದುಳಿದವರೆಂದು ತಿಳಿಯಲಿಲ್ಲ. ಯಾರಿಗೂ ಯಾವ ವಿಷಯದಲ್ಲೂ ತಾವು ಕಡಿಮೆಯಲ್ಲ ಎಂದೇ ತಿಳಿದಿದ್ದರು. ಅದನ್ನೇ ಮಕ್ಕಳಿಗೆ ಮೊಮ್ಮಕ್ಕಳಿಗೆ ಉಪದೇಶ ಮಾಡಿದರು. ಮುನಿಯ ಮೇಸ್ತ್ರಿಗಳ ಹೆಂಡತಿ ನಂಜಮ್ಮನವರಿಗೆ ಈ ಮಗಳನ್ನು ಕಂಡು ಅತಿಯಾದ ಪ್ರೀತಿ ಆದರವಂತೆ. ಅದೇಕಾರಣ ಈ ಮಗಳನ್ನು ತನ್ನ ತಮ್ಮನಿಗೇ ಕೊಟ್ಟು ಮದುವೆಮಾಡಿ, ಇಬ್ಬರನ್ನೂ ಮನೆಯಲ್ಲಿಯೇ ಸಾಕುತ್ತ ಬಂದರು. ಮುನಿಯ ಮೇಸ್ತ್ರಿಗಳ ವಿಶಾಲವಾದ ಮನೆಯಲ್ಲಿಯೇ ನನ್ನ ಅಜ್ಜ ಅಜ್ಜಿಯರ ಬಾಲ್ಯವೆಲ್ಲ ಕಳೆಯಿತು.

ನನ್ನ ಅಜ್ಜ ಮರಿಚಿನ್ನಪ್ಪನವರ ವಿಷಯ ನನಗೆ ಹೆಚ್ಚು ತಿಳಿಯದು. ಅವರನ್ನು ನಾನು ನೋಡಿರಲಿಲ್ಲ. ನಾನು ಹುಟ್ಟುವುದಕ್ಕೆ ಮುಂಚೆಯೇ

ಅವರು ತೀರಿಹೋಗಿದ್ದರು. ನಮ್ಮ ತಾತ ಅತಿ ಮೃದುಸ್ವಭಾವದ ಮನುಷ್ಯ ರೆಂದು ಕೇಳಿದ್ದೇನೆ. ಮೊದಲಿಂದಲೂ ಅವರು ತಮಗಾಗಿ ಚಿಂತಿಸಿದವರಲ್ಲ. ಮನೆಯ ಕಡೆ ಕೆಲಸವನ್ನು ನೋಡದೆ ಹೋದರೂ ಕಷ್ಟದಲ್ಲಿದ್ದ ಹೆರವರಿ ಗಾಗಿ ಶ್ರಮಿಸುತ್ತಿದ್ದರಂತೆ. ಸಮಾಜ ಸೇವೆಯ ದೀಕ್ಷೆಯನ್ನು ನನ್ನ ತಂದೆ ಇವರಿಂದಲೇ ಪಡೆದಂತೆ ಕಾಣುತ್ತದೆ. ೧೯೦೦ ರ ಸುಮಾರಿಗೆ ಬೆಂಗಳೂರು ದಂಡಿನಲ್ಲಿ ಮೊದಲಿಗೆ ಸ್ಥಾಪಿತವಾದ ಬ್ರಹ್ಮಸಮಾಜಕ್ಕೆ ಅವರು ಸದಸ್ಯರಾಗಿ ಸೇರಿದ್ದರು. ಅಲ್ಲಿ ನಡೆಯುತ್ತಿದ್ದ ಪ್ರಾರ್ಥನಾ ಸಭೆಗಳಿಗೆ ತಪ್ಪದೆ ಹೋಗು ತ್ತಿದ್ದರು. ಹೋಗುವಾಗ, ಆಗ್ಗೆ ಇನ್ನೂ ಹುಡುಗಿಯರಾಗಿದ್ದ ನನ್ನ ಸೋದ ರತ್ತೆಯರನ್ನು ಕರೆದುಕೊಂಡು ಹೋಗುತ್ತಿದ್ದರು. ಇದೆಲ್ಲದರ ಫಲವಾಗಿ ನಮ್ಮ ತಂದೆಯ ಮತ್ತು ಸೋದರತ್ತೆಯರ ತರುಣದಲ್ಲಿ, ರಾಜಾ ರಾಮ ಮೋಹನರಾಯ, ಕೇಶವಚಂದ್ರಸೇನ, ಮಹರ್ಷಿ ದೇವೇಂದ್ರನಾಥ ಠಾಕೂರ ಈ ಹೆಸರುಗಳು ಬಳಕೆಯಾಗಿದ್ದುವು. ಕ್ರೈಸ್ತರ ಪದ್ಧತಿಯಂತೆ ಮನೆ ಯಲ್ಲಿಯೂ ಪ್ರಾರ್ಥನೆಗಳು ಗೊತ್ತಾದವೇಳೆಗೆ ನಡೆಯುತ್ತಿದ್ದವು. 'ಬ್ರಾಹ್ಮ ಧರ್ಮಾನುಸಾರ' ಎಂಬ ಉಪಾಸನಾ ಪುಸ್ತಕದಲ್ಲಿ ಕಾಣಿಸಿದ ರೀತಿಗನು ಸಾರವಾಗಿ ಉಪಾಸನೆ ನಡೆಯುತ್ತಿತ್ತು. ಇಂಥ ಪ್ರಾರ್ಥನೆಗಳಿಂದ ಹೊಂದ ಬಹುದಾದ ಸಂಸ್ಕಾರ ನಮ್ಮ ಮನೆಯವರಿಗೆಲ್ಲ ಈ ಮೂಲಕ ದೊರಕಿತು.

ಆಂಧ್ರರ ಜಾಗೃತಿಗೆ ಕಾರಣರಾಗಿದ್ದ, ಸಮಾಜ ಸುಧಾರಕ ವೀರೇಶ ಲಿಂಗಂ ಪಂತಲು ಅವರೂ ನಮ್ಮ ತಾತನವರೂ ಸ್ನೇಹಿತರು. ಪ್ರಾಯಶಃ ಈ ಸ್ನೇಹ ಬ್ರಹ್ಮಸಮಾಜದ ಮೂಲಕವೆ ಬಲಿಯಿತೆಂದು ತೋರುತ್ತದೆ. ವೀರೇಶಲಿಂಗಂ 'ಮಿತ್ರುಡಾ' ಎಂದು ಸಂಬೋಧಿಸಿ ತಾತನವರಿಗೆ ಬರೆದ ಕಾಗದಗಳು ಕೆಲವು ನನಗೆ ದೊರೆತಿವೆ. ನನ್ನ ತಂದೆಯನ್ನೂ ವೀರೇಶ ಲಿಂಗಂ ಬಾಲ್ಯದಿಂದಲೂ ಬಲ್ಲರು. ತಂದೆ ಇಂಗ್ಲೆಂಡಿಗೆ ಹೋದಾಗ ಅತಿ ಯಾದ ಸಂತೋಷವನ್ನು ಒಂದು ಕಾಗದದಲ್ಲಿ ವ್ಯಕ್ತಪಡಿಸಿದಾರೆ. ವೀರೇಶ ಲಿಂಗಂ ಅವರು ಚಾಮರಾಜಪೇಟೆಯ ಮೊದಲನೆಯ ಬೀದಿಯಲ್ಲಿದ್ದ ತಮ್ಮ ಮನೆಯನ್ನು ನೋಡಿಕೊಳ್ಳುವ ಜವಾಬುದಾರಿಯನ್ನು ತಾತನವರಿಗೆ ವಹಿ ಸಿದ್ದರು. ಅದಕ್ಕೆ ಸುಣ್ಣಬಣ್ಣಗಳನ್ನು ತೊಡಿಸಿ ಕೆಡದಂತೆ ನೋಡಿಕೊಳ್ಳು

ವುದು, ಮನೆಯನ್ನು ಬಾಡಿಗೆಗೆ ಕೊಟ್ಟು ಬಾಡಿಗೆಯ ಹಣವನ್ನು ಕಾಲ ಕಾಲಕ್ಕೆ ವೀರೇಶಲಿಂಗಂ ಅವರಿಗೆ ತಲಪಿಸುವುದು ತಾತನವರ ಕೆಲಸ ವಾಗಿತ್ತು.

ತಾತನವರು ವೈದ್ಯವೃತ್ತಿಯನ್ನು ಸ್ವಲ್ಪ ಬಲ್ಲವರು. ಆದರೆ ಅವರ ಮದ್ದು ಗಿಡಮೂಲಿಕೆಗಳ ಮದ್ದಲ್ಲ. ಆ ಮದ್ದಿನಲ್ಲಿ ಅವರಿಗೆ ನಂಬಿಕೆಯೇ ಇಲ್ಲ. ಇಂಗ್ಲೀಷು ಔಷಧಗಳ ಉಪಯೋಗವನ್ನು ಅದು ಹೇಗೋ ತಿಳಿದು ಕೊಂಡು ತಪ್ಪದೆ ಪ್ರಯೋಗಿಸುತ್ತಿದ್ದರು. ವಿಧವಿಧವಾದ ಔಷಧಿಗಳಿಂದ ತುಂಬಿದ ಗ್ಲಾಸುಗಳು, ಔನ್ಸು ಬಟ್ಟಲುಗಳು, ತ್ರಾಸುಗಳು ಇವುಗಳನ್ನಿಟ್ಟು ಕೊಂಡು ವೈದ್ಯವೃತ್ತಿ ನಡೆಸುತ್ತಿದ್ದರು. ಅವರು ಔಷಧಗಳನ್ನು ತೂಗು ತಿದ್ದ ಹಳೆಯ ಕಾಲದ ತ್ರಾಸು ಬಟ್ಟುಗಳು, ಈಚೀಚಿನವರೆಗೂ ನಮ್ಮ ಮನೆ ಯಲ್ಲಿತ್ತು. ಕೈಗೆ ಸಿಕ್ಕಿದುದೆಲ್ಲವನ್ನೂ ಅದರಲ್ಲಿ ಹಾಕಿ ನಾವು ಚಿಕ್ಕಂದಿನಲ್ಲಿ ತೂಗಿನೋಡುತಿದ್ದುದು ಇನ್ನೂ ನನಗೆ ಜ್ಞಾಪಕವಿದೆ.

ಹಿರಿಯರಿಂದ ಬಂದ ವೃತ್ತಿಯೆಂದರೆ ಕಂಟ್ರಾಕ್ಟು ಕೆಲಸ ಆ ಕೆಲಸದಲ್ಲಿ ಕೈಸುಟ್ಟುಕೊಂಡು ಇದ್ದ ಬದ್ದ ಆಸ್ತಿಯೆಲ್ಲವನ್ನೂ ತಾತ ಕಳೆದುಕೊಂಡು ಬಿಟ್ಟರು. ಹೆಂಡತಿ, ತಮ್ಮ ಅಕ್ಕ ನಂಜಮ್ಮ ಇವರ ಮೈತುಂಬ ಇದ್ದ ಬೆಲೆ ಬಾಳುವ ನಗಗಳೆಲ್ಲ ಸಾಲಗಾರರ ಪಾಲಾಗಿ ನಿರ್ಗತಿಕರಾದರು. ನಮ್ಮ ಸೋದರತ್ತೆ ಹೇಳುತ್ತಾರೆ ಅವರು Jack of all trades ಎಂದು. ಅವರು ಮಾಡದೆ ಹೋದ ಕೆಲಸವೆ ಇರಲಿಲ್ಲವಂತೆ. ಅಂತೂ ಹಣ ಖರ್ಚುಮಾಡು ವುದರಲ್ಲಿ ನಿಸ್ಸೀಮರೆಂದು ತೋರುತ್ತದೆ. ಎಷ್ಟು ಹಣ ಬರಲಿ ಕೈಯಲ್ಲಿ ಕಾಸು ಮಾತ್ರ ಉಳಿಸುತ್ತಿರಲಿಲ್ಲ. ರಿಕ್ತದೆಸೆಯಲ್ಲಿದ್ದಾಗ ಹೆಣ್ಣುಮಕ್ಕಳು ತಮ್ಮ ಓದುಗಾರಿಕೆಯಲ್ಲಿ ಸಂಪಾದಿಸಿದ Scholarship ಹಣವನ್ನು ತಂದೆಗೆ ಸಂತೋಷವಾಗುವುದೆಂದು ಅವರ ಕೈಯಲ್ಲಿಟ್ಟರೆ, ಮಾರನೆಯದಿನದ ಹೊತ್ತಿಗೆ ಕೈ ಬರಿದಾಗುತ್ತಿತ್ತಂತೆ. ಎಷ್ಟು ಹಣ ಕೊಟ್ಟರೂ ಖರ್ಚುಮಾಡಿ ಬಿಡುವರಲ್ಲ ಎಂದು ನನ್ನ ತಂದೆಗೂ ಅವರನ್ನು ಕಂಡರೆ ಒಂದು ಬಗೆಯ ಬೇಸರ. ಅಂತೂ ಖರ್ಚುಮಾಡಿದುದೆಲ್ಲಕ್ಕೂ ಲೆಕ್ಕವೇನೊ ಇಡುವರು. ಅವರಿಟ್ಟುಹೋಗಿರುವ ಲೆಕ್ಕದ ಪುಸ್ತಕಗಳು ಕಟ್ಟುಗಟ್ಟಲೆ ಇವೆ.

ಮಕ್ಕಳನ್ನು ಕಂಡರೆ ಅವರಿಗೆ ಅತಿಯಾದ ಪ್ರೇಮವಂತೆ. ಅದರಲ್ಲೂ ಅವರ ಹಿರಿಯ ಮಗ ಪುಟ್ಟಪ್ಪನೆಂದರೆ ತೀರ ಅಚ್ಚುಮೆಚ್ಚು. ನನ್ನ ಮಗ ಮುಂದೆ ಬಂದನಲ್ಲ ಎಂದು ಅವರಿಗೆ ಏನೊ ಹಿಗ್ಗು. ಒಕ್ಕಲಿಗರಲ್ಲೆಲ್ಲ ಅತಿ ಜಿಸರುವಾಸಿಯಾಗಿ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿ ಬಂದ ತಮ್ಮ ಅಣ್ಣನ ಮಗ ಬಿ. ಎನ್. ಚೆನ್ನಿಗಪ್ಪನವರನ್ನು ಮನೆಯಲ್ಲಿ ಸಾಕಿ ಓದಿಸಿದವರು ಇವರೇ. ಚೆನ್ನಿಗಪ್ಪನವರು ಅಷ್ಟು ಯಶಸ್ವಿಯಾಗಿ ಉತ್ತೀರ್ಣರಾದುದನ್ನು ಕಂಡು ನನ್ನ ಮಗನೂ ಹೀಗೆಯೇ ಮುಂದೆ ಬಂದಾನು ಎಂದು ಬಗೆದು ಧೈರ್ಯಮಾಡಿ ಮುಂದೆ ಓದಿಸಿದರು. ಮಗನೂ ಅವರ ಆಸೆ ನಿರಾಸೆಮಾಡ ಲಿಲ್ಲ. ಮಗನಿಗೆ ಪ್ರೆಸ್ ಪ್ರೊಬೇಷನರ ಕೆಲಸವಾಗಿ, ಇಂಗ್ಲೆಂಡಿಗೆ ಉಚ್ಚ ಶಿಕ್ಷಣಕ್ಕೆ ಹೋಗಬೇಕೆಂದು ನಿಶ್ಚಿತವಾದಾಗ ಅವರ ಸಂತೋಷ ಹೇಳತೀರದು. ಕಂಡ ಕಂಡವರ ಹತ್ತಿರ ಹೋಗಿ ' ನನ್ನ ಮಗ ಇಂಗ್ಲೆಂಡಿಗೆ ಹೋಗುತ್ತಾನೆ ' ಎಂದು ಹಿಗ್ಗಿನಿಂದ ಹೇಳಿಕೊಂಡು ಬಂದರಂತೆ. ಆದರೆ ಮಗ ರೈಲು ಹತ್ತಿ ಹೊರಟು ನಿಂತಾಗ, ' ಹೊರಟು ಹೋಗುತಾನೆ ನನ್ನ ಮಗ, ನಾನು ಇನ್ನು ಅವನನ್ನು ನೋಡಲಾರೆ ' ಎಂದು ಬಿಕ್ಕಿ ಬಿಕ್ಕಿ ಅಳುತ್ತ ನಿಂತರಂತೆ. ಪ್ರೆಸ್ ಸೂಪರಿಂಟೆಂಡೆಂಟ್ ಏಟ್ಸ್‌ರವರು ಸಮಾಧಾನ ಹೇಳಿ ಕಳುಹಿಸಿಕೊಟ್ಟರಂತೆ. ಪಾಪ ! ಅವರು ಅಂದಂತೆಯೇ ಆಗಿಹೋಯಿತು. ಅವರು ಮಗನ ಮುಖ ವನ್ನು ಪುನಃ ನೋಡುವುದಾಗಲಿಲ್ಲ. ಮಗ ಮುಂದೆ ಬಂದು ಸಮಾಜದಲ್ಲಿ ಗಣ್ಯವ್ಯಕ್ತಿಯಾಗಿ ಯಶಸ್ಸುಗಳಿಸಿ ಬಾಳುವುದನ್ನು ಅವರು ನೋಡಲಿಲ್ಲ. ಸುಖದ ದಿನಗಳನ್ನು ನಮ್ಮ ಅಜ್ಜಿ ಕಂಡಂತೆ ಅವರು ಕಾಣಲಿಲ್ಲ. ಕಷ್ಟ ಕಾಲದಲ್ಲಿ ಮಕ್ಕಳನ್ನು ಕೈಹಿಡಿದು ನಡೆಸಿ, ಅವರನ್ನು ಮುಂದಕ್ಕೆ ತಂದು ಹಿರಿಯರನ್ನಾಗಿ ಮಾಡಿ, ತಮ್ಮ ಕಾಲಮೇಲೆ ತಾವು ನಿಂತು ಮುಂದೆ ಬರು ವುದನ್ನು ಕಂಡು, ಇನ್ನು ನನ್ನ ಕೆಲಸವಾಯಿತು ಎಂದೊ ಏನೊ ಕಣ್ಣು ಮರೆಯಾದರು. ನಮ್ಮ ಮನೆತನ ಇಷ್ಟು ಮುಂದೆ ಬಂದುದಕ್ಕೆ ಕಾರಣ ಪುರುಷರು ಅವರು. ಅವರಿಗೆ ನಮೋ.

ಇಂಥ ತಾಯಿ ತಂದೆಯರಿಗೆ ನನ್ನ ತಂದೆ ೧೮೭೭ ರಲ್ಲಿ ಹುಟ್ಟಿದರು. ಮನೆತನವನ್ನು ಉದ್ಧಾರಮಾಡುವ ವಂಶೋದ್ಧಾರಕ ಹುಟ್ಟಿದನೆಂದು ತಾಯಿ

ತಂದೆಯರಿಷ್ಟರೂ ಹಿಗ್ಗಿರಬೇಕು. ನನ್ನ ತಂದೆಯಾದಮೇಲೆ ಇನ್ನು ನಾಲ್ಕು ಹೆಣ್ಣುಮಕ್ಕಳು ಹುಟ್ಟಿದರು. ಹಿರಿಯ ಮಗಳಿಗೆ ಅಜ್ಜಿಯ ನೆನಪಾಗಿ ನಂಜಮ್ಮ ಎಂದು ಹೆಸರನ್ನಿಟ್ಟರು. ಇನ್ನು ಮೂವರು ಹೆಣ್ಣುಮಕ್ಕಳಲ್ಲಿ ಒಬ್ಬರು ೧೪ನೆಯ ವಯಸ್ಸಿನಲ್ಲಿಯೂ, ಇನ್ನೊಬ್ಬರು ೨೦ ನೆಯ ವಯಸ್ಸಿನಲ್ಲಿಯೂ ತೀರಿಹೋದರು. ನಾಲ್ವರಲ್ಲಿ ಉಳಿದ ಇಬ್ಬರು ತಂಗಿಯರೂ ಅಣ್ಣನೊಡನೆ ಸರಿಸಮನಾಗಿ ಬೆಳೆದು ಒಂದಿಗೇ ವಿದ್ಯಾಭ್ಯಾಸಮಾಡಿ, ಸರಕಾರದಲ್ಲಿ ಕೆಲಸಕ್ಕೆ ಸೇರಿ ವಿದ್ಯಾಭ್ಯಾಸದ ಇಲಾಖೆಯಲ್ಲಿ ಸೇವೆಸಲ್ಲಿಸುತ್ತ ಹೋದರು. ಇವರಲ್ಲಿ ಹಿರಿಯರು ಈಗ ನಿವೃತ್ತರಾಗಿ ವಿಶ್ರಾಂತಿ ಹೊಂದುತ್ತಿದ್ದಾರೆ. ಇನ್ನೊಬ್ಬರು ನಾಡಿನ ಹೆಣ್ಣುಮಕ್ಕಳಿಗೆ ವಿದ್ಯಾಭ್ಯಾಸಮಾಡಿಸುವುದರಲ್ಲಿ ನಿರತರಾಗಿದ್ದಾರೆ.

# ವಿದ್ಯಾಭ್ಯಾಸ

ಮಕ್ಕಳೆಲ್ಲರೂ ಅರಳೆಪೇಟೆಯ ಸಂದಿಯಲ್ಲಿರುವ ಮನೆಯೊಂದರಲ್ಲಿ ಬೆಳೆದರು. ಈಗಲೂ ರೈಲಿಗೆ ಹೋಗುವ ದಾರಿಯಲ್ಲಿ ಆ ಮನೆ ಕಾಣಿಸುತ್ತದೆ. ಚೆನ್ನಿಗಪ್ಪನವರು ಮುಂದಿನ ರೂಮೊಂದರಲ್ಲಿ ಕುಳಿತು ಅಭ್ಯಾಸಮಾಡುತ್ತಿದ್ದುದನ್ನು ಆಗ ಕಂಡವರು ಈಗಲೂ ನೆನಪುಮಾಡಿಕೊಳ್ಳುತ್ತಾರೆ. ಆಗಿದ್ದ ಮಿಷನ್ ಸ್ಕೂಲುಗಳಲ್ಲಿ ಮಕ್ಕಳೆಲ್ಲರಿಗೂ ವಿದ್ಯಾಭ್ಯಾಸ ನಡೆಯುತ್ತಿತ್ತು. ೧೮೭೦ ರ ಸುಮಾರಿನಲ್ಲಿ ವಿದ್ಯಾಭ್ಯಾಸಕ್ಕೆ ಬೆಂಗಳೂರಿನಲ್ಲಿದ್ದ ಅನನುಕೂಲತೆಗಳನ್ನು ಬಹು ಜನ ಬಲ್ಲರು. ಅಂಥ ಕಾಲದಲ್ಲಿ, ಗಂಡು ಹೆಣ್ಣು ಎಂದು ಭೇದವೆಣಿಸದೆ ಎಲ್ಲರಿಗೂ ಉತ್ತಮ ರೀತಿಯಾದ ವಿದ್ಯಾಭ್ಯಾಸ ಕೊಡಿಸುತ್ತ ಹೋದ ನಮ್ಮ ಅಜ್ಜ ಅಜ್ಜಿಯರ ದೃಢಸಂಕಲ್ಪವನ್ನು ಕಂಡು ನಾನು ಅತಿಯಾಗಿ ಆಶ್ಚರ್ಯಪಟ್ಟಿದೇನೆ ; ಹೆಮ್ಮೆಪಟ್ಟಿದೇನೆ. ಹೆಣ್ಣು ಹುಡುಗರು ಒಪ್ಪವಾಗಿ ಸೀರೆ ಉಟ್ಟುಕೊಂಡು ಹೆರಳನ್ನು ಚೆನ್ನಾಗಿ ಬಾಚಿಕೊಂಡು ಶಾಲೆಗೆ ಹೋದರೆಂದು ಅದಕ್ಕಾಗಿಯೇ ಅವರಿಗೆ ಇನಾಮುಗಳು ದೊರೆಯುತ್ತಿತ್ತಂತೆ. ಮಕ್ಕಳು ಹೋಗಿ ಕಲಿತು ಬಂದುದೆಲ್ಲವನ್ನೂ ತಾಯಿಯ ಮುಂದೆ ತಂದೆಯ ಮುಂದೆ ಒಪ್ಪಿಸುವರು. ತಾಯಿಗೆ ಹೇಳತೀರದ ಹಿಗ್ಗು. ಮಕ್ಕಳು ಕಲಿತು ಬಂದುದೆಲ್ಲವನ್ನು ತಾವೂ ಕಲಿಯುವರು. ಅವರು ಓದಿದನ್ನು ತಾವೂ ಓದುವರು. ಮಕ್ಕಳು ಕಲಿತ ಹಾಡುಗಳನ್ನು ಮತ್ತೂ ಇಂಪಾಗಿ ಹಾಡುವರು. ನಮ್ಮ ಅಜ್ಜಿಯದು ಬಲು ಇಂಪಾದ ಕಂಠ ಅವರ ಧ್ವನಿಯಲ್ಲಿ, ಹೇಳುತ್ತಿದ್ದ ರೀತಿಯಲ್ಲಿ, ಮನಮೋಹಕವಾದ ಶಕ್ತಿಯಿತ್ತು. ಕೇಳುವವರು ಮೈಮರೆಯುವಂತೆ ಆಗುತಿತ್ತು.

ಈ ಸುಮಾರಿನಲ್ಲಿ ಅಜ್ಜಿ ಬಟ್ಟೆ ಹೊಲಿದು ಅದರಿಂದ ಸ್ವಲ್ಪ ಹಣ ಸಂಪಾದನೆ ಮಾಡುತ್ತಿದ್ದರೆಂದು ತೋರುತ್ತದೆ. ತಮ್ಮ ಸುತ್ತಮುತ್ತಲಿನ ಮನೆಯವರು ತಂದುಕೊಟ್ಟ ಬಟ್ಟೆಗಳೆಲ್ಲವನ್ನೂ ಕತ್ತರಿಸಿ ಹೆಣ್ಣುಮಕ್ಕಳಿಗೆ ಹೊಲಿಯಲು ಕೊಡುವರು. ಮಕ್ಕಳು ಹಿಗ್ಗಿನಿಂದ ಅವುಗಳನ್ನೆಲ್ಲ ಒಪ್ಪವಾಗಿ ಹೊಲಿದು ರಾಶಿ ಹಾಕಿಬಿಡುವರು. ಸೋಮಾರಿಗಳಾಗಿ ಕಾಲ ಕಳೆಯುವಂತಿಲ್ಲ. ಬಡತನದಲ್ಲಿಯೇ ಸಂಸಾರ ಸಾಗಿತು.

ತಂದೆಯ ವಿದ್ಯಾಭ್ಯಾಸಕ್ಕೆ ಎಲ್ಲಿಯೂ ಅಡಚಣೆಯುಂಟಾದಂತೆ ತೋರ ಲಿಲ್ಲ. ತಾನು ಅರೆಹೊಟ್ಟೆಯಿದ್ದರೂ ಮಗ ಹಸಿಯದಿರಲಿ ಎಂದು ಊಟ ವಿಟ್ಟು ಕಳುಹಿಸುವರು ತಾಯಿ. ಲಂಡ್ರ್ ಮಿಷನ್ ಸ್ಕೂಲಿನಲ್ಲಿ ಮೆಟ್ರಿಕ್ ಪರೀಕ್ಷೆಗೆ ಕುಳಿತು ತಂದೆ ಅದರಲ್ಲಿ ಉತ್ತೀರ್ಣರಾದರು. ಈ ಕಾಲದಿಂದಲೇ ಅವರ ಮುಂದಿನ ಗುಣಗಳು ವಿಕಾಸವಾಗುತ್ತ ಹೋದುವು. ಅವರ ಜೊತೆ ಯಲ್ಲಿಯೇ ಓದುತಿದ್ದ ರಾಮಚಂದ್ರ ಎಂಬ ಬಡ ಬ್ರಾಹ್ಮಣ ವಿದ್ಯಾರ್ಥಿ ಯೊಬ್ಬನಿದ್ದ. ಆತ ತೀರ ಬಡವ. ಬಳೆಪೇಟೆ ಈಶ್ವರನ ಗುಡಿ ಎದುರಿನಲ್ಲಿದ್ದ ಲಾಂದ್ರದ ಕೆಳಗೆ ಕುಳಿತು ಆತ ನಿತ್ಯವೂ ಪಾಠ ಓದುತಿದ್ದನಂತೆ. ಇದನ್ನು ನೋಡಿದ ತಂದೆಗೆ ಕನಿಕರ ಹುಟ್ಟಿ, ತನ್ನ ಸ್ನೇಹಿತನನ್ನು ಅಪ್ಪನ ಹತ್ತಿರಕ್ಕೆ ಕರೆದುಕೊಂಡು ಹೋಗಿ ಹುಡುಗ ಪಡುತ್ತಿದ್ದ ಕಷ್ಟವನ್ನು ಹೇಳಿ ಸಹಾಯ ಮಾಡಲು ಕೇಳಿದರು. ಬಡವರಾದ ಅವರು ಇನ್ನು ಏತರ ಸಹಾಯ ಮಾಡಿಯಾರು? ಮನೆಯಲ್ಲಿಯೇ ಇರಲು ಒಂದು ಸ್ಥಳ ಮಾಡಿಕೊಟ್ಟರು. ಐದಾರು ತಿಳಿದಿದ್ದ ಬ್ರಾಹ್ಮಣರ ಮನೆಗಳಿಗೆ ಹೋಗಿ ವಾರವಾರ ಅವನಿಗೆ ಊಟ ದೊರೆಯುವಂತೆ ಮಾಡಿದರು. ಈ ರೀತಿಯಾಗಿ ರಾಮಚಂದ್ರನೂ ನನ್ನ ತಂದೆಯೂ ಮೆಟ್ರಿಕ್‌ವರೆಗೆ ಜೊತೆಜೊತೆಯಾಗಿ ಓದಿ ಬೆಳೆದರು. ಮೆಟ್ರಿಕ್ ಓದಿದಮೇಲೆ ರಾಮಚಂದ್ರ ಮುಂದೆ ಓದಲಿಲ್ಲವೆಂದು ತೋರು ತ್ತದೆ. ಹೆಣ್ಣುಕೊಡಲು ಬಂದ ಯಾರೋ ಪುಣ್ಯಾತ್ಮರು ಹುಡುಗನನ್ನು ತಮ್ಮ ಜೊತೆಗೆ ಹೈದರಾಬಾದಿಗೆ ಕರೆದುಕೊಂಡು ಹೋದರು. ಆಮೇಲೆ ಅವರನ್ನು ನಮ್ಮ ಮನೆಯವರಾರೂ ನೋಡಿದ ನೆನಪಿಲ್ಲ.

ರಾಮಚಂದ್ರನ ವೃತ್ತಾಂತವನ್ನು ಇಷ್ಟೆಲ್ಲ ನಾನು ಹೇಳುವುದಕ್ಕೆ ಕಾರಣ ಮುಂದೆ ಗೊತ್ತಾಗುತ್ತದೆ. ಮೆಟ್ರಿಕ್ ಪಾಸಾದನಂತರ ಕಾಲೇಜಿನಲ್ಲಿ ಎಫ್. ಎ. ಪರೀಕ್ಷೆಗೆ ಓದಲು ಮೊದಲು ಮಾಡಿದರು. ಅವರು ಪರೀಕ್ಷೆಗೆ ಕುಳಿತುಕೊಳ್ಳುವ ಕಾಲಕ್ಕೆ ಬೆಂಗಳೂರಿನಲ್ಲಿ ಅಧಿಕವಾದ ಪ್ಲೇಗು ಉಪದ್ರವ. ಪರೀಕ್ಷೆಗೆ ಓದುತ್ತಿದ್ದ ಮಗನನ್ನು ಮಾತ್ರ ಬೆಂಗಳೂರಿನಲ್ಲಿ ಬಿಟ್ಟು ಮನೆಯವ ರೆಲ್ಲ ಆನೆಕಲ್ಲಿಗೆ ಹೋದರು. ಈ ಸುಮಾರಿನಲ್ಲಿ ಎಫ್. ಎ. ಪರೀಕ್ಷೆಗೆ ಕೂಡು ವುದಕ್ಕಾಗಿ ಹಣ ಕೂಡಿಸಲು ಎಷ್ಟು ಕಷ್ಟಪಡಬೇಕಾಯಿತೆನ್ನುವುದು ರಾಮ

ಚಂದ್ರನಿಗೆ ತಂದೆ ಬರೆದ ಕಾಗದ ಒಂದರಿಂದ ತಿಳಿಯುತ್ತದೆ. ಬಡತನದ ಬೇಗೆಯಲ್ಲಿ ತಂದೆ ಎಷ್ಟು ಕಷ್ಟಪಟ್ಟರೆನ್ನುವುದಕ್ಕೆ ಈ ಒಂದು ಕಾಗದ ಸಾಕ್ಷಿಯಾಗಿ ಉಳಿದಿದೆ. ಅದನ್ನು ಪೂರ್ತಿಯಾಗಿ ಇಲ್ಲಿ ಕಾಣಿಸಿದ್ದೇನೆ.

*23* ಡಿಸೆಂಬರ್ *1898*

ಪ್ರಿಯ ರಾಮಚಂದ್ರ

" ನಾನು ಆರೋಗ್ಯವಾಗಿದೇನೆ. ನಾವಿಬ್ಬರೂ ಒಂದಿಗೆ ಮಾತನಾಡಿ ಬಹಳ ದಿನಗಳಾಗಿಹೋಯಿತು. ನನ್ನಷ್ಟು ನಿನಗೆ ಯಾರೂ ಕಷ್ಟಕೊಡಲಿಲ್ಲ. ನಾನು ಹಣಕ್ಕಾಗಿ ನಿನಗೆ ತಂತಿಕೊಟ್ಟುದರಿಂದ ನಿನಗೆಷ್ಟು ಕಷ್ಟವಾಯಿತೊ ಏನೊ ? ನೀನು ಕಳುಹಿಸಿಕೊಟ್ಟ ಒಂದುವರೆ ರೂಪಾಯಿ ನನಗೆ ಆನೆಕಲ್ಲಿನಲ್ಲಿ ಮಂಗಳವಾರ ಕೈಸೇರಿತು. ಮಾರನೆಯದಿನವೆ ಬೆಂಗಳೂರಿಗೆ ಪ್ರಯಾಣ ಮಾಡಿದೆ. ಯಾರಾದರೂ ಒಬ್ಬ ಜೊತೆಯಲ್ಲಿ ಓದಿದ ಗೆಳೆಯ ಸಿಗುತ್ತಾನೆಂದೂ, ಅವನೊಂದಿಗೆ ಇರಬೇಕೆಂದೂ ಮಾಡಿದ್ದೆ. ಆದರೆ ನಿರಾಶೆಯಾಗಿ ಹೋಯಿತು. ಕಾಲೇಜು ಗುಮಾಸ್ತನ ಹತ್ತಿರ ಹೋಗಿ ಪರೀಕ್ಷೆಗೆ Hall Ticket ಬೇಕೆಂದು ಕೇಳಿದೆ. 4½ ರೂಪಾಯಿ ಮೊದಲು ಕೊಡು ಎಂದು ಆತ ಹೇಳಿದ. " ನನ್ನ ಹತ್ತಿರ ಏನೂ ಇಲ್ಲ ಸಾರ್, 15 ನೆಯ ತಾರೀಖು ಕೊಡುತ್ತೇನೆ " ಎಂದು ಕೇಳಿಕೊಂಡೆ. " ಆಗುವುದಿಲ್ಲ, ತೊಲಗಾಚೆ. ನೀನು ಫೀಸ್ ತಂದುಕೊಡದಿದ್ದರೆ Hall Ticket ನಿನಗೆ ದೊರೆಯುವುದಿಲ್ಲ. ಫೀಸ್ ಕೊಡು, ಇಲ್ಲದಿದ್ದರೆ ನಿನ್ನ 24 ರೂಪಾಯಿ ಹೋದಂತೆಯೇ ಸರಿ " ಎಂದುಬಿಟ್ಟ. ' ಆಗಲಿ ಸರ್ ' ಎಂದು ಹೇಳಿ ಹೊರಟೆ. ಎರಡು ಗಂಟೆ ಮಧ್ಯಾಹ್ನವಾಗಿ ಹೋಗಿದ್ದರೂ ಆವರೆಗೆ ಇನ್ನೂ ಊಟವಿರಲಿಲ್ಲ. ಏನೂ ತೋರದೆ ಅಲೆದಾಡಿದೆ. ಎಲ್ಲ ಅಂಗಡಿಗಳೂ ಮುಚ್ಚಿಬಿಟ್ಟಿದ್ದುವು. ಎಲ್ಲ ಮನೆಗಳಿಗೂ ಬೀಗ ಹಾಕಿತ್ತು. ಆ ಸಮಯದಲ್ಲಿ ಅದು ಹೇಗೊ ತಿಳಿಯದು, ಎಲ್ಲರನ್ನೂ ಬಿಟ್ಟು ನಿನ್ನ ಜ್ಞಾಪಕ ಬಂದಿತು. ನಂಬಿಕೆಯುಳ್ಳ, ಸಹಾನುಭೂತಿಯುಳ್ಳ ಸ್ನೇಹಿತನೆ ಅಲ್ಲವೆ (ಈ ಲೋಕದಲ್ಲಿ) ದಿಕ್ಕೆಟ್ಟವನಿಗೆ ಕೊನೆಯ ಗತಿ. ಆಮೇಲೆ ರೈಲು ಸ್ಟೇಷನಿಗೆ ಬಂದೆ. ಅಲ್ಲಿ ಕಲ್ಲಮೇಲೆ ಕುಳಿತು ಯೋಚನೆಮಾಡಿದೆ. ಪುನಃ ಪುನಃ ನಿನಗೆಷ್ಟು ಕಷ್ಟ ಕೊಡುತ್ತಿದೇನೆಂದಂದು

ಕೊಂಡೆ. ಮೊನ್ನೆತಾನೆ ಹತ್ತಿರ ಕಾಸಿಲ್ಲವೆಂದು ಬರೆದ ನಿನಗೆ ಮತ್ತೆ ಎಷ್ಟುಕಷ್ಟ ಕೊಡುತ್ತೇನಲ್ಲಾ ಎಂದು ಚಿಂತಿಸಿದೆ. ಆದರೆ ನೀನು ನನಗಾಗಿ ಏನಾದರೂ ಮಾಡುತೀಯೆ ಎನ್ನುವ ಯೋಚನೆ ನನ್ನ ಮನಸಿನಲ್ಲಿ ಮೇಲುಕೈಯಾಗಿದ್ದಿತು. ನಾನು ತಂತಿ ಕೊಟ್ಟೆ. ಆದರೆ ದುರಾದೃಷ್ಟದಿಂದ ನಾನು ಕೊಟ್ಟ ತಂತಿಯು ಸಮಾಚಾರ ನಾನು ತಿಳಿಸಬೇಕಾದುದನ್ನು ಸರಿಯಾಗಿ ತಿಳಿಸಲಿಲ್ಲ. ತಕ್ಷಣವೇ ಐದು ರೂಪಾಯಿಗಳನ್ನು ಕಳುಹಿಸಿಕೊಡು ಎಂದು ಕೇಳಬೇಕೆಂದೇ ನನ್ನ ಉದ್ದೇಶ ಇದ್ದುದು. ಒಂದು ಗಂಟೆ ಕಾದು ಕುಳಿತಮೇಲೆ ಹಣಕ್ಕಾಗಿ ಕಾಯುವುದರಿಂದ ಉಪಯೋಗವಿಲ್ಲವೆಂದೂ, ಮನೆಗೆ ಹೋಗೆಂದೂ ನನಗೆ ಹೇಳಿಬಿಟ್ಟರು. ಸುತ್ತ ಮಬ್ಬು ಕವಿದು ಕೊಂಡಿತು. ಊಟವಿಲ್ಲದೆಯೆ ಅರಳೆಪೇಟೆಯ ಉದ್ದಕ್ಕೂ ನಡೆದೆ. ಪ್ಲೇಗಿನಿಂದ ನರಳುವನೆಂದು ಎಲ್ಲಿ ನನ್ನನ್ನು ಮಾಗಡಿ ಕ್ಯಾಂಪಿಗೆ ರವಾನಿಸುವರೊ ಎಂದು ಹೆದರಿಕೆಯಾಗುತಿತ್ತು. ಅಂಥ ಅವಸ್ಥೆಯಲ್ಲಿತ್ತು ನನ್ನ ಮುಖ. ಗೊತ್ತುಗುರಿಯಿಲ್ಲದೆ ಅಲೆದೆ. ನನ್ನ ತಂದೆಯು ಸ್ನೇಹಿತರೊಬ್ಬರು ಆ ಕಾಲಕ್ಕೆ ಸಿಕ್ಕಿದರು. ಅವರಿಗೆ ನನ್ನೆಲ್ಲ ಕಷ್ಟವನ್ನು ಹೇಳಿಕೊಂಡೆ. ನನಗೆ ಇಂಥ ಕಷ್ಟದ ಕಾಲದಲ್ಲಿ ಸಹಾಯಮಾಡಬೇಕೆಂದು ಬೇಡಿಕೊಂಡೆ. ಫಲಹಾರಕ್ಕಾಗಿ ಅವರು ಎರಡಾಣೆ ಕೊಟ್ಟರು. ಮಾರನೆಯದಿನ ಹತ್ತುಗಂಟೆಯ ಒಳಗೆ ಒಂದು ರೂಪಾಯಿ ಕೊಡಿಸಿಕೊಡುವುದಾಗಿ ಭರವಸೆ ಇತ್ತರು. ಮಿಕ್ಕ ಹಣಕ್ಕೆ ಯಾರ ಹತ್ತಿರ ಹೋಗಲಿ? ವಿಧಿಇಲ್ಲದೆ ಮತ್ತೊಬ್ಬರ ಹತ್ತಿರ ಹೋಗಿ ನಿಜವಾಗಿ ಕೈಯೊಡ್ಡಿ ಬೇಡಿದೆ. ಅಂತೂ ಗುರುವಾರ ೧೦-೨೦ರ ಒಳಗೆ ದುಡ್ಡನ್ನು ಕೂಡಿಹಾಕಿದೆ. ಊಟವಿಲ್ಲದೆ ಅವಸರವಾಗಿ ಕಾಲೇಜಿನ ಕಡೆ ಓಡಿದೆ. ಗುಮಾಸ್ತ ಮಹಾಶಯು ನನ್ನ ಕಡೆ ಕಣ್ಣೆತ್ತಿ ಕೂಡ ನೋಡದೆ ಹೋದ. F. A. ಪರೀಕ್ಷೆಯ ವಿದ್ಯಾರ್ಥಿಗಳು ನೆಮ್ಮದಿಯಾಗಿ ಕುಳಿತು ಒಳಗೆ ಉತ್ತರ ಬರೆಯುತಿದ್ದರು. ನಾನು ಗುಮಾಸ್ತ ಮಹಾಶಯು ಕಣ್ಣೆತ್ತಿ ನನ್ನ ಕಡೆ ನೋಡಿಯಾನೆ ಎಂದು ಅವನ ರೂಮಿನ ಹತ್ತಿರ ಕಾಯುತ್ತಿದ್ದೆ. ೧೦-೫೫ಕ್ಕೆ ಅವರು ಹೊರಗೆ ಬಂದರು. ‘ ಸಾರ್ ’ ಎಂದು ಕೂಗಿಕೊಂಡೆ ‘ ಏನದು, ಹೊರಗೆ ಹೊರಡು : ನಿನಗೆ Hall Ticket ಕೊಡುವುದಕ್ಕೆ ಆಗುವುದಿಲ್ಲ. ೧೦-೩೦ ಆಗಿಹೋಯಿತು ’ ಎಂದರು. ‘ ನನ್ನ ಮೇಲೆ ಕರುಣೆ

ಇಡಿ ಸಾರ್ ’ ‘ ಎಲ್ಲಿ ನಾಲ್ಕೂವರೆ ರೂಪಾಯಿ ಇಲ್ಲಿಡು ’ ‘ ಸಾರ್ ಮೂರು ರೂಪಾಯಿ ಮಾತ್ರವಿದೆ ’ ‘ ಹೊರಡಾಚೆ ಹಾಲಿನ ಒಳಗೆ ನೀನು ಹೋಗ ಕೂಡದು.’ ಬೇರೆದಾರಿಯಾವುದೂ ನನಗೆ ತೋರದೆ ಹೋಯಿತು. ಬೇಡಿ ತಂದ ಮೂರೂವರೆ ರೂಪಾಯಿಗೆ ನೀನು ಕೊಟ್ಟ ಒಂದು ರೂಪಾಯಿ ಯನ್ನು ಸೇರಿಸಿ ಸಲ್ಲಿಸಿದ್ದಾಯಿತು. ಸಾಯಂಕಾಲ ಹೆಸರಿಂದ ಮಾತ್ರ ಪರಿಚಯವಿದ್ದ ಮಹನೀಯರೊಬ್ಬರ ಮನೆಗೆ ಹೋದೆ. ಆ ಮಹನೀಯರು — ಅವರು ಸಾವಿರ ವರ್ಷಕಾಲ ಬದುಕಲಿ— ಪರೀಕ್ಷೆ ಮುಗಿಯುವವರೆಗೂ ತಿಂಡಿ ತೀರ್ಥಕೊಟ್ಟರು.

“ ನಾನು ಬೆಂಗಳೂರಲ್ಲಿ ಪಟ್ಟ ಕಷ್ಟ ಇವು. ನೀನು ಕಳುಹಿಸಿಕೊಟ್ಟ ಮೂರು ರೂಪಾಯಿಗಳು ಸೋಮವಾರ ಒಂದು ಸೇರಿತು. ಅವುಗಳಿಂದ ನನಗೆ ಅತಿಯಾದ ಸಹಾಯವಾಯಿತು. ಪರೀಕ್ಷೆ ಮುಗಿದಮೇಲೆ ನನ್ನ ತಂದೆ ತಾಯಿ ಇದ್ದೆಡೆಗೆ ಹೋದೆ. ನನ್ನ ದುರದೃಷ್ಟದಿಂದ ಒಂದುದಿನ ಮುಂಚಿತವಾಗಿಯೇ ಅವರು ಬೆಂಗಳೂರಿಗೆ ಹೊರಟುಹೋದುದಾಗಿ ಹೋದ ಮೇಲೆ ಗೊತ್ತಾಯಿತು. ಏನುಮಾಡುವುದು. ಮತ್ತೆ ಬೆಂಗಳೂರಿಗೆ ನಡೆದು ಬಂದುದಾಯಿತು. ಛತ್ರ ಒಂದರಲ್ಲಿ ತಂದೆ ತಾಯಿಯರನ್ನು ಕಂಡೆ. ಅಲ್ಲಿಂ ದಲೆ ಈ ಕಾಗದವನ್ನು ಬರೆಯುತ್ತಿದೇನೆ.”

## ಬಡತನದ ಕಷ್ಟಗಳು

ಜೀರ್ಣಶೀರ್ಣವಾಗಿದ್ದ ಹಳೆಯ ಕಾಗದಗಳ ಕಟ್ಟಿನಲ್ಲಿ ಸೇರಿಹೋಗಿದ್ದ ತಂದೆಯ ಈ ಕಾಗದವನ್ನು ಮೊದಲು ಓದಿದಾಗ ನನಗೆ ಬಹು ದುಃಖ ವಾಯಿತು. ಎಷ್ಟೊಂದು ಕಷ್ಟಪಟ್ಟಿದ್ದರು ತಂದೆ ಎಂದು ಅಂದು ಮನಗಂಡೆ. ಮನೆಯವರೊಡನಾಗಲಿ ಮಿಕ್ಕವರೊಡನಾಗಲಿ ಯಾರೊಡನೆಯೇ ಆಗಲಿ ತಾವು ಪಟ್ಟ ಕಷ್ಟವನ್ನು ಅವರು ಹೇಳಿಕೊಂಡ ನೆನಪು ನನಗಿಲ್ಲ. ಒಂದೆರಡು ರೂಪಾಯಿಗಳಿಗಾಗಿ ಕಂಡಕಂಡವರ ಹತ್ತಿರ ಕೈಯೊಡ್ಡಿ ಬೇಡುತ್ತ ಹಸಿವಿನಿಂದ ಕಂಗೆಟ್ಟು ಬೀದಿಬೀದಿ ಅಲೆಯುತ್ತಿದ್ದ ನನ್ನ ತಂದೆಯ ಚಿತ್ರವನ್ನು ನೆನಸಿಕೊಂಡರೆ ಅತಿ ಸಂಕಟವಾಗುತ್ತದೆ. ತಂದೆ ಇಷ್ಟು ಕಷ್ಟಪಟ್ಟುದರ ಸಲುವಾಗಿಯೇ ಏನೊ ಮಕ್ಕಳಿಗೆ ಕಷ್ಟದ ಸೋಂಕು ಸ್ವಲ್ಪವೂ ತಗಲದಂತೆ ನೋಡಿಕೊಂಡು ಬೆಳೆಸಿದರು. ತಂದೆ ಬದುಕಿರುವವರೆಗೂ ಮನೆಯಲ್ಲಿ ಯಾರಿಗೂ ಯಾವ ವಿಧವಾದ ಯೋಚನೆಯೂ ಇರಲಿಲ್ಲ.

ತಂದೆ ಈ ಸುಮಾರಿನಲ್ಲಿ ಯಾವರೀತಿ ಇದ್ದರೆನ್ನುವುದನ್ನು ತೋರಿಸುವ ಚಿತ್ರ ಒಂದು ಮನೆಯಲ್ಲಿದೆ. ಶೀರ ಹಳೆಯ ಕಾಲದ ಚಿತ್ರವಾದುದರಿಂದ ಅತಿಯಾಗಿ ಮಾಸಿ ಹೋಗಿದೆ. ತಲೆಯಮೇಲೆ ಮೂರು ಬೆರಳು ಅಗಲದ ಸಣ್ಣ ಮುಖಮಲಿನ ಟೋಪಿ, ಬಹುಕಾಲದಿಂದಲೂ ಅಗಸನ ಮುಖವನ್ನು ಕಾಣದೆ, ಸುಕ್ಕು ಸುಕ್ಕಾಗಿ ಮಾಸಲು ಮಾಸಲಾಗಿದ್ದ ಒಂದೇ ಬಣ್ಣದ ಕೋಟು ಷರಾಯಿಗಳು. ಕಾಲಿನಲ್ಲಿ ಒಂದು ಜೋಡು, ಕೈಯಲ್ಲಿ ಒಂದೆರಡು ಪುಸ್ತಕ, ಕಾಲಮೇಲೆ ಕಾಲು ಹಾಕಿಕೊಂಡು ಏನೊ ಯೋಚನೆ ಮಾಡುತ್ತ ಗೋಡೆ ಒರಗಿ ನಿಂತ ತಂದೆಯ ಚಿತ್ರ ನೋಡಿದವರಿಗೆ, ಈ ಚಿತ್ರ ನಿಜವಾಗಿ ಅವರದೇ ಎನ್ನುವಷ್ಟು ಸಂದೇಹ ಹುಟ್ಟುತ್ತದೆ.

ಗೆಳೆಯ ರಾಮಚಂದ್ರನಿಗೆ ತಾವು ಪಟ್ಟ ಕಷ್ಟವನ್ನೆಲ್ಲ ವಿವರಿಸಿ ಬರೆದ ಕಾಗದದಲ್ಲಿ ಬೆಂಗಳೂರು ಪ್ಲೇಗಿನ ಅವಸ್ಥೆಯಿಂದ ಪಾರಾದುದರ ಚಿತ್ರ ಕೂಡ ಇದೆ. ಆಗಿನ ಅವರ ಮನಸನ್ನು ಪ್ರತಿಬಿಂಬಿಸುತ್ತದೆ. ಅದನ್ನು ಇಲ್ಲಿ ಪೂರ್ತಿಯಾಗಿ ಕೊಡುವುದು ಸೂಕ್ತವಾಗಿ ಕಾಣುತ್ತದೆ :—

“ .........ಅದೃಷ್ಟಹೀನವಾಗಿದ್ದ ಬೆಂಗಳೂರು ಈಗೀಗ ಪ್ಲೇಗಿನಿಂದ ಮುಕ್ತವಾಗುತ್ತಿದೆ. ಈಗ ದಿನಕ್ಕೆ ಸರಾಸರಿ ಹತ್ತುಜನ ಮಾತ್ರ ಸಾಯುತ್ತಿದ್ದಾರೆ. ಊರಿಗೆ ಬಹುಜನ ಈಗಾಗಲೇ ಹಿಂತಿರುಗಿದ್ದಾರೆ; ಇನ್ನೂ ಬಹುಜನ ಬರುತ್ತಲಿದ್ದಾರೆ. ಹೆಲ್ತ್ ಆಫೀಸರಿಂದ ಮನೆಗಳಲ್ಲಿ ಸರಿಯಾಗಿ ಗಾಳಿ ಆಡುತ್ತಿದೆ ಇತ್ಯಾದಿಯಾಗಿ certificate ಪಡೆದ ಹೊರತು ಮನೆ ಮಠಗಳಿಗೆ ಹೋಗಗೊಡುತ್ತಿಲ್ಲ. ಅದಕ್ಕಾಗಿಯೇ ನಾವಿನ್ನೂ ಛತ್ರದಲ್ಲಿಯೇ ಉಳಿದುಕೊಂಡಿದೇವೆ. ಹಳೆಯದಾಗಿ ಜೀರ್ಣವಾಗಿದ್ದ ಮನೆಗಳನ್ನು ವಾರಸುದಾರರಿಗೆ ತಿಳಿಸದೆಯೇ ಕೆಡವಿಸಿಬಿಟ್ಟಿದ್ದಾರೆ. ಕೆಡವಿ ಹಾಕದೆ ಇನ್ನೂ ನಿಂತಿರುವ ಪಕೋಡ ಅಂಗಡಿಗಳು ಎಲ್ಲೋ ಕೆಲವು ಮಾತ್ರ ಇವೆ. ಸಿದ್ದಿಕಟ್ಟೆಯಲ್ಲಿರುವ ಮನೆಗಳನೇಕವನ್ನು ನೆಲಸಮಮಾಡಿದ್ದಾರೆ. ಮಂಡಿಗಳು ತೆರೆದಿವೆ. ವ್ಯಾಪಾರ ಈಚೀಚಿಗೆ ಮೊದಲಾಗುತ್ತಿದೆ. ಬೆಂಗಳೂರು ಈಗ ಹೊಸದೊಂದು ಬಣ್ಣ ಪಡೆದುಕೊಂಡಿದೆ. ಹೊಸ ಮುಖಗಳು, ಹೊಸ ಬೀದಿಗಳು, ಹೊಸ ಸಂದಿಗಳು ಇವುಗಳನ್ನು ನೀನು ನೋಡುತ್ತೀಯೆ. ದಂಡು ಇನ್ನೂ ಕಷ್ಟದಲ್ಲಿದೆ. ನಾವು ನಮ್ಮ ಮನೆಗೆ ಇನ್ನು ಎರಡು ಮೂರು ದಿನಗಳಲ್ಲಿ ಹೋಗುತ್ತೇವೆ. ಪ್ರಶ್ನಪತ್ರಿಕೆಗಳಿಗೆ ಉತ್ತರ ಸುಮಾರಾಗಿ ಬರೆದಿದೇನೆ. ಬರಿಯ ಒಣ ಪಾಸಾಗಬಹುದೆಂದು ಕಾಣುತ್ತದೆ. ಚರಿತ್ರೆಯ ಪೇಪರಿನಲ್ಲಿ ಅಷ್ಟು ಸಮಂಜಸವಾಗಿ ಉತ್ತರ ಬರೆದಿಲ್ಲ. ಆದರೆ ಅದರಲ್ಲೂ ಬೇಕಾಗುವಷ್ಟು ನಂಬರು ಬರಬಹುದು. ನಾನೊಂದು ಬಗೆಯುವುದು, ದೈವ ಒಂದು ಮಾಡುವುದು ಹೀಗಾದರೇನುಮಾಡುವುದು ? ಅದಕ್ಕಾಗಿ ಪರೀಕ್ಷೆಯ ಫಲಿತಾಂಶವನ್ನು ಎದುರು ನೋಡುತ್ತಿದೇನೆ.

ರಜಾಕಾಲದಲ್ಲಿ ಏನುಮಾಡಬೇಕೊ ತಿಳಿಯದು. ಪ್ರಾಯಶಃ ಕಾಲೇಜಿನ ಮುಖವನ್ನ ನೋಡುವುದಾಗಲಿ, ಒಂದು ಕಡೆ ಕುಳಿತು ಓದುವುದಾಗಲಿ ಅದಕ್ಕೆಲ್ಲ ಇದೇ ಕೊನೆಯೆಂದು ಕಾಣುತ್ತದೆ ಯಾರೊಬ್ಬರ ಹಂಗಿಗೆ ಒಳಗಾಗಿ ಬಾಳಬೇಕೋ ಏನೊ. ನನ್ನ ಮನಸು ಬೇಡ ಎನ್ನುವ ಕೆಲಸವನ್ನೆ ನಾನೀಗ ಮಾಡುತ್ತಿದೇನೆ. ನನ್ನ ಈಗಿನ ಸ್ಥಿತಿ ಅಂಥ ಕೆಲಸವನ್ನೇ ಮಾಡು ಎಂದು ಪ್ರೇರಿಸುತ್ತಿದೆ. ನಿನ್ನನ್ನು ನೋಡಲಾಗುವುದೊ? ನೋಡುವು

ದಾದರೆ ಯಾವಾಗ? ಇಲ್ಲಿಗೆ ಬಂದರೆ ಪ್ಲೇಗು ತಗಲೀತೆಂಬ ಹೆದರಿಕೆ ಇಲ್ಲ. ಒಮ್ಮೆ ಬಂದು ಹೋಗಬಹುದು. ಬದಲಾವಣೆಯಾದಂತಾಗುತ್ತದೆ. ಎಷ್ಟೇ ತೊಂದರೆ ಬರಲಿ ಈಸಲದ ಮದರಾಸು ಕಾಂಗ್ರೆಸಿಗೆ ಹೋಗಲೇ ಬೇಕು, ನಮ್ಮದೇಶದ ಪ್ರಸಿದ್ಧಿಯಾದ ಪುತ್ರರನ್ನು ದರ್ಶಿಸುವುದಕ್ಕಾದರೂ ಹೋಗಲೇ ಬೇಕು ಎಂದು ಆಶೆ ಇತ್ತು. ಮದರಾಸಿನಲ್ಲಿ ರಾಮಯ್ಯನೊಂದಿಗೆ ಇರ ಬೇಕೆಂದು ಸಹ ಮಾಡಿಕೊಂಡಿದ್ದೆ. ಆದರೆ ಸಂಸಾರದ ಗೋಳು ದೊಡ್ಡ ಅಡ್ಡಿಯಾಗಿದೆ. ಇಷ್ಟೆಲ್ಲ ಕಷ್ಟಗಳನ್ನು ಸಹಿಸಿಯೂ, ನೋವನ್ನು ನುಂಗಿಯೂ ಈ ದೇಹವನ್ನು ಸಾಕುತ್ತಲಿದ್ದೇನೆ........

"ನೀನಿರುವ ಕಡೆ ಒಳ್ಳೆಯ ನೌಕರಿಗಳೇನಾದರೂ ಸಿಕ್ಕುವುವೋ? ಹೈದರಾಬಾದಿನಲ್ಲಿ ಇಂಗ್ಲೀಷು ಬಲ್ಲವರನ್ನು ಸ್ವಲ್ಪ ಗೌರವಿಸುವರೆಂದು ಕೇಳಿದ್ದೇನೆ. ಅಲ್ಲಿ ಕೆಲಸಗಳೇನಾದರೂ ಇದ್ದರೆ ನನಗೆ ಬರೆಯುವೆಯಾ? ಬೇಗ ಬರಿ. ನನ್ನ ವಿಳಾಸ ಇಲ್ಲಿ ಕೊಟ್ಟಿದೇನೆ—ಬೆಂಗಳೂರು ಅರಳೇಪೇಟೆ, ಕೆಂಗೇರಿ Police Station ಹಿಂದುಗಡೆ ಇರುವ ಈರು ತಿಮ್ಮನಾಯ್ಕರ ರಂಗಣ್ಣನವರು ನೋಡಿಕೊಂಡು ಕೊಡುವುದು."

# ಮೈಸೂರಿನಲ್ಲಿ ಸಂಸಾರ

ಇನ್ನು ಕಾಲೇಜಿನ ಮುಖ ನೋಡಲಾರೆ, ನನ್ನ ಓದು ಇಲ್ಲಿಗೆ ಮುಗಿಯಿತು ಎಂದು ನಿರಾಶರಾಗಿದ್ದವರಿಗೆ ಮತ್ತೆ ಮುಂದೆ ಓದುವ ಅವಕಾಶ ಅದು ಹೇಗೋ ದೊರೆಯಿತು. ಸೆಂಟ್ರಲ್ ಕಾಲೇಜಿನಲ್ಲಿಯೇ ಅವರ ಓದು ಮುಂದುವರಿಯಿತು. ಬಿ. ಎ. ಪರೀಕ್ಷೆಗಾಗಿ ಅವರು ಚುನಾಯಿಸಿಕೊಂಡ ಪಾಠಗಳು ಇಂಗ್ಲೀಷು ಕನ್ನಡ ಮತ್ತು ಭೂಶಾಸ್ತ್ರ (Geology). ಹೀಗೆ ಬಿ. ಎ. ಓದುವಕಾಲಕ್ಕೆ ಮನೆಯವರ ಸಹವಾಸ ಅವರಿಗೆ ಇರಲಿಲ್ಲ. ಕಷ್ಟದಲ್ಲಿ ನಡೆಯುತ್ತಿದ್ದ ಸಂಸಾರ ಮೈಸೂರಿಗೆ ವರ್ಗವಾಗಬೇಕಾಯಿತು. ನಮ್ಮ ತಂದೆಯ ದೊಡ್ಡಪ್ಪನ ಮಗ ಚೆನ್ನಿಗಪ್ಪನವರು ನಮ್ಮ ಮನೆಯಲ್ಲಿಯೇ ಓದಿ ಮುಂದೆ ಬಂದರೆಂದು ಮುಂಚೆಯೇ ತಿಳಿಸಿದ್ದೇನೆ. ಚೆನ್ನಿಗಪ್ಪನವರು ಬಿ. ಎ. ಪರೀಕ್ಷೆಯಲ್ಲಿ ಪ್ರಥಮರಾಗಿ ತೇರ್ಗಡೆ ಹೊಂದಿ ಕೀರ್ತಿಗಳಿಸಿಕೊಂಡಿದ್ದರು. ಅವರಿಗೆ ಮೈಸೂರು ಮಹಾರಾಜ ಕಾಲೇಜಿನಲ್ಲಿ ಅಧ್ಯಾಪಕಪದವಿ ದೊರೆತಿತ್ತು. ಹಿಂದೆ ತಾನು ಚಿಕ್ಕಪ್ಪನಿಂದ ಪಡೆದ ಉಪಕಾರವನ್ನು ತೀರಿಸುವ ಸಲುವಾಗಿಯೊ ಏನೋ, ಅವರ ಸಂಸಾರದ ಭಾರವನ್ನು ತಾವು ಹೊರುವುದಾಗಿ ಭರವಸೆಯಿತ್ತರು. ಇದರ ಫಲವಾಗಿ ಬಿ. ಎ. ಗಾಗಿ ಬೆಂಗಳೂರಿನಲ್ಲಿ ಓದುತಿದ್ದ ನಮ್ಮ ತಂದೆಯನ್ನು ಬಿಟ್ಟು ಮಿಕ್ಕವರೆಲ್ಲರೂ ಚೆನ್ನಿಗಪ್ಪನವರ ಆಶ್ರಯದಲ್ಲಿ ಮೈಸೂರಿನಲ್ಲಿ ನೆಲಸಲು ಹೋದರು. ತಂದೆ ಹತ್ತಿರದ ಬಂಧು ಒಬ್ಬರ ಮನೆಯಲ್ಲಿ ಊಟಮಾಡಿಕೊಂಡು ಕಷ್ಟದಲ್ಲಿ ಹೇಗೋ ಓದುಮುಗಿಸಿ ೧೯೦೭ನೇ ಇಸವಿಯಲ್ಲಿ ಎರಡನೆ ತರಗತಿಯಲ್ಲಿ ಬಿ. ಎ. ಪರೀಕ್ಷೆ ಪಾಸು ಮಾಡಿದರು.

ಮೈಸೂರಿನಲ್ಲಿ ಇರಲು ಹೋದ ಸಂಸಾರ ಅಷ್ಟೇನೂ ಸುಖವಾಗಿರಲಿಲ್ಲ. ಕೆಲವೇ ತಿಂಗಳಲ್ಲಿ ಚೆನ್ನಿಗಪ್ಪನವರು ಇತ್ತ ಆಶ್ರಯ ತಪ್ಪಿಹೋಗಿ ಮತ್ತೆ ಆ ಊರಿನಲ್ಲಿ ತಮ್ಮ ಕಾಲಮೇಲೆಯೇ ತಾವು ನಿಲ್ಲಬೇಕಾಯಿತು. ಈ ಮಧ್ಯೆ ಮಹಾರಾಣಿ ಕಾಲೇಜಿನಲ್ಲಿ ಮುಂದೆ ಓದಬೇಕೆಂದು ಹೋದ ಇಬ್ಬರು ಹೆಣ್ಣು ಮಕ್ಕಳಿಗೂ ಅಲ್ಲಿ ಸ್ಥಳದೊರೆಯದೆ ಹೋಗಿ ತೀರ ಕಷ್ಟದ ದೆಸೆಯೇ ಬಂದಂತಾಯಿತು. ಮೊದಲು ಇವರನ್ನು ಶಾಲೆಗೆ ಸೇರಿಸಿದರಾದರೂ ಆಮೇಲೆ

ಇವರು ಶೂದ್ರರೆಂದು ಗೊತ್ತಾದಮೇಲೆ ಶಾಲೆಯಲ್ಲಿ ಇರಿಸಿಕೊಳ್ಳದೆ ಮನೆಗೆ ಕಳುಹಿಸಿಬಿಟ್ಟರು. ಆಗ ಮಹಾರಾಣಿ ಶಾಲೆಗೆ ಮಹಾರಾಣಿ High Caste Girls School ಎಂದೇ ಹೆಸರಿತ್ತಂತೆ. ಬ್ರಾಹ್ಮಣರಲ್ಲದವರಿಗೆ ಆ ಶಾಲೆಯಲ್ಲಿ ಸ್ಥಳ ಸಿಗುತ್ತಿರಲಿಲ್ಲ. ಸ್ಥಳ ಕೇಳಲು ಹೋದವರಲ್ಲಿ ನಮ್ಮ ತಂದೆಯ ತಂಗಿಯರೇ ಮೊದಲಿನವರು. ಅದುವರೆಗೆ ಯಾರಾದರೂ ಸ್ಥಳ ಕೇಳಲು ಹೋಗಿ ಇಲ್ಲವೆನ್ನಿಸಿಕೊಂಡು ಬಂದಿದ್ದರೊ ಇಲ್ಲವೊ ನನಗೆ ತಿಳಿಯದು. ನನ್ನ ಸೋದರತ್ತೆಯರಂತೂ ಇಲ್ಲ ಎನ್ನಿಸಿಕೊಂಡು ಬಂದು ಮನೆಯಲ್ಲಿ ಕುಳಿತರು. ಈ ಅನ್ಯಾಯವನ್ನು ತಡೆದುಕೊಂಡು ಸುಮ್ಮನಿರುವುದು ಅವರ ತಂದೆಗೆ ಆಗದೆಹೋಯಿತು. ಚೆನ್ನಿಗಪ್ಪನವರನ್ನು ಮುಂದೆಮಾಡಿಕೊಂಡು ಮುಖ್ಯರಾದವರನ್ನು ಕಂಡರು. ದೊಡ್ಡಗೊಂದಲವೆಬ್ಬಿಸಿದರು. ಬ್ರಾಹ್ಮಣರಲ್ಲದ ಹಿಂದುಳಿದವರ ಸ್ಥಾನಮಾನಗಳಿಗೆ ಹೊಡೆದಾಡಿ ಹೆಸರುಗಳಿಸಿದ್ದವರ ಸಹಾಯವನ್ನು ಪಡೆದುಕೊಂಡರು. ಈ ಎಲ್ಲ ಮಹನೀಯರುಗಳು ಶ್ರಮಿಸಿದುದರ ಫಲವಾಗಿ ಇತರ ಜಾತಿಯ ಹೆಣ್ಣು ಮಕ್ಕಳಿಗೂ ಮಹಾರಾಣಿ ಶಾಲೆ ಸೇರಲು ಅವಕಾಶ ದೊರೆಯಿತು. ಆಗಲೂ ಸಹ ಗೌರವಸ್ಥರಾದ ಹೆಣ್ಣುಮಕ್ಕಳನ್ನು ಮಾತ್ರ ಸೇರಿಸಬೇಕೆಂದು ಒಂದು ಷರಾ ಬೇರೆ ಸೇರಿಸಲಾಯಿತು. ನಮ್ಮ ಸೋದರತ್ತೆಯರನ್ನು ಗೌರವಸ್ಥರೆಂದು ಎಣಿಸಿದರೆಂದೇ ಕಾಣುತ್ತದೆ. ಅಂತೂ ಅಷ್ಟೆಲ್ಲ ಗಲಾಟೆಮಾಡಿದ ಮೇಲೆ ಶಾಲೆಯನ್ನು ಪ್ರವೇಶಿಸಿ ತಮ್ಮ ವಿದ್ಯಾಭ್ಯಾಸ ಮುಂದುವರಿಸಿದರು. ವಿದ್ಯಾರ್ಥಿವೇತನ ಕೂಡ ದೊರೆತುದರಿಂದ ಇದ್ದುದರಲ್ಲಿ ಸುಖಪಟ್ಟುಕೊಂಡು ಸಂಸಾರವನ್ನು ಹೇಗೊ ಸಾಗಿಸುತ್ತ ಹೋದರು. ತಂದೆ ಬೆಂಗಳೂರಿನಲ್ಲಿ ಓದು ಮುಗಿಸಿದಮೇಲೆಯೂ ಮೈಸೂರಿನಲ್ಲಿದ್ದ ಸಂಸಾರ ಕದಲಲಿಲ್ಲ. ಇನ್ನೂ ಆರು ವರ್ಷಗಳ ಕಾಲ ಆ ಊರಿನಲ್ಲಿಯೇ ವಿದ್ಯಾಭ್ಯಾಸಮಾಡುತಿದ್ದ ಹೆಣ್ಣುಮಕ್ಕಳನ್ನು ನೋಡಿಕೊಂಡು ಅಜ್ಜ ಅಜ್ಜಿಯರು ಕಾಲಕಳೆದರು. ತಂದೆ ಪ್ರೆಸ್ ಪ್ರೊಬೇಷನರಾಗಿ ನೇಮಕವಾಗಿ ಬೆಂಗಳೂರಿನಲ್ಲಿ ಮನೆ ಹೂಡುವವರೆಗೆ ಮೈಸೂರು ಬಿಟ್ಟು ಸಂಸಾರ ಕದಲಲಿಲ್ಲ.

## ನೌಕರಿಗಾಗಿ ಅಲೆದಾಟ-ಪೋಲೀಸು ಹೆಡ್ ಗುಮಾಸ್ತೆ

೧೯೦೨ ನೆ ಇಸವಿಯಲ್ಲಿ ಬಿ. ಎ. ಪರೀಕ್ಷೆಯಲ್ಲಿ ತಂದೆ ಉತ್ತೀರ್ಣರಾದ ರೆಂದು ಹಿಂದೆ ತಿಳಿಸಿದೆ ಅಲ್ಲಿಗೆ ಅವರ ವಿದ್ಯಾಭ್ಯಾಸದ ಒಂದು ಘಟ್ಟ ಮುಗಿಯಿತು. ಇನ್ನು ನೌಕರಿಗಾಗಿ ಅಲೆದಾಟ ಮೊದಲಾಯಿತು. ನೌಕರಿ ಸಿಕ್ಕರೆ ಸರಕಾರದಲ್ಲಿ ತಾನೆ ಸಿಗಬೇಕು. ನೌಕರಿ ಸಿಗುವುದು ಈಗಿನಂತೆ ಆಗ ಸುಲಭವಾಗಿರಲಿಲ್ಲ. ಆದರಲ್ಲೂ ಹಿಂದುಳಿದವರೂ ಬಡವರೂ ಆದ ಇವರ ಕೂಗು ಯಾರ ಕಿವಿಯನ್ನೂ ಮುಟ್ಟಲಿಲ್ಲ. ಆ ಕಾಲದಲ್ಲಿ ಹಿಂದುಳಿದ ಕೋಮಿನವರು ಮುಂದೆ ಬರುವುದೇ ಅತಿ ಪ್ರಯಾಸದ ಕೆಲಸವಾಗಿತ್ತು. ಲೋವರ್ ಸೆಕಂಡರಿ ಪರೀಕ್ಷೆ ಮೊದಲುಗೊಂಡು ಬಿ. ಎ ವರೆಗೂ ಪ್ರಥಮ ತರಗತಿಯಲ್ಲಿ ಉತ್ತೀರ್ಣರಾಗುತ್ತಾ ಬಂದು, ಆಟದಲ್ಲಿ ಪಾಠದಲ್ಲಿ ಸಂಸಮ ನಾಗಿ, ಪ್ರಿನ್ಸಿಪಾಲರುಗಳು ಪ್ರೊಫೆಸರುಗಳಿಂದ ಅತಿ ಹೆಚ್ಚಿನ ಪ್ರಶಸ್ತಿ ಪಡೆದು ಕೊಂಡು, ವಿದ್ಯಾವಂತರಾದ ಒಕ್ಕಲಿಗರಲ್ಲಿ ಎಲ್ಲಕ್ಕೂ ಮೊದಲಿನವರು ಎಂದು ಹೆಸರುಗಳಿಸಿಕೊಂಡಿದ್ದ ಬಿ. ಎನ್. ಚೆನ್ನಿಗಪ್ಪನವರೆ ಸರಕಾರದಲ್ಲಿ ನೌಕರಿ ಗಾಗಿ ಮನೆಮನೆ ಅಲೆಯಬೇಕಾಗಿ ಬಂದಮೇಲೆ, ಇನ್ನು ನನ್ನ ತಂದೆಗೆ ಸರಿಯಾದೊಂದು ಕೆಲಸ ಸಿಗದೆ ಹೋದುದು ಆಶ್ಚರ್ಯವಾಗೇನೂ ತೋರುವು ದಿಲ್ಲ ಅವರ ಮನಸಿನಲ್ಲಿ ಮೊದಲಿಂದ ಮೂಡಿದ್ದ ಆಸೆಗಳೆಲ್ಲ ಮಾಯ ವಾದುವು. ದಿನ ಕಳೆದಂತೆ ದೀನರಾಗುತ್ತ ಹೋದರು. ಅರ್ಜಿಗೆಳೆಲ್ಲದ ರಲ್ಲೂ ತಾವು ತೀರ ಹಿಂದುಳಿದ ಕೋಮಿಗೆ ಸೇರಿದವರೆಂದೂ, ಬಿ. ಎ. ಪರೀಕ್ಷೆ ಮಾಡಿದವರೆಂದೂ, ಅತಿ ಕಷ್ಟದ ಸ್ಥಿತಿಯಲ್ಲಿರುವವರೆಂದೂ, ದಯ ಮಾಡಿ ಕೆಲಸ ದೊರಕಿಸಿ ಕೊಡಬೇಕೆಂದೂ ಬೇಡಿಕೊಂಡರು. ಇವರೆಲ್ಲ ಬೇಡಿಕೆಯ ಫಲವಾಗಿ ಅದೇ ವರ್ಷದ ಕೊನೆಯಲ್ಲಿ ಪೋಲೀಸ್ ಇಲಾಖೆ ಯಲ್ಲಿ ಏಳನೆ ದರ್ಜೆ ಗುಮಾಸ್ತನ ಕೆಲಸ ದೊರೆಯಿತು. ಒಂದು ವರ್ಷ ಕಾಲ ಬೆಂಗಳೂರು ಇನ್ಸ್ಪೆಕ್ಟರ್ ಜನರಲ್ ರವರ ಕಚೇರಿಯಲ್ಲಿ ಕೆಲಸ ಮಾಡಿದರು. ೧೯೦೩ ರಲ್ಲಿ ಒಂದು ಬಡ್ತಿ ದೊರೆತು ಪೋಲೀಸು ಹೆಡ್ ಮುನ್ಷಿಯಾಗಿ ಚಿತ್ರದುರ್ಗಕ್ಕೆ ವರ್ಗವಾಗಿ ಹೋದರು. ತಂದೆ ತಾಯಿ ಯರ, ಅಕ್ಕರೆಯ ತಂಗಿಯರ ಸಹವಾಸವಿಲ್ಲದೆ ಒಬ್ಬಂಟಿಗರಾಗಿ ತಮಗೆ

ಇಷ್ಟವಿಲ್ಲದ ಕೆಲಸದಲ್ಲಿ ಊರೂರು ಅಲೆಯಬೇಕಾಯಿತು ಆರೋಗ್ಯ ಕೂಡ ಈ ಸುಮಾರಿಗೆ ಕೆಟ್ಟು ಹೊಟ್ಟೆನೋವಿನಿಂದ ನರಳಿದರು.

ಇಷ್ಟವಿಲ್ಲದ ಕೆಲಸವಾದರೂ ಮಾಡುವ ಕೆಲಸವನ್ನು ಮುತುವರ್ಜಿಯಿಂದ ಮಾಡಿದರು. ಚಿತ್ರದುರ್ಗದಲ್ಲಿ ಹೆಡ್‌ಮುನ್ಷಿಯಾಗಿ ಕೆಲಸಮಾಡುತಿದ್ದಾಗ ಪೋಲೀಸು ಕಚೇರಿಯಲ್ಲಿ ಅಸ್ತವ್ಯಸ್ತವಾಗಿದ್ದ ಹನ್ನೆರಡು ವರ್ಷ ಕಾಲದ ಲೆಕ್ಕವನ್ನು ಸರಿಪಡಿಸಿದರು. ಲೆಕ್ಕಗಳನ್ನೆಲ್ಲ ಪರಿಶೋಧಿಸಿ ಸಾರಾಂಶವನ್ನು ಬರೆದಿಟ್ಟ ರೀತಿ ನೋಡಿ ಮೇಲಿನ ಅಧಿಕಾರಿಗಳೆಲ್ಲರೂ ಮೆಚ್ಚಿದರು. ಡೆಪ್ಯುಟಿ ಕಮಿಷನರಾದ ಪೆಚ್. ರಾಮಯ್ಯಂಗಾರ್ಯರು 'The Head Munshi Puttiah has taken up great pains in clearing up the accounts which as remarked by the Assistant Superintendent were in a state of great confusion and much credit is due to him for his labour and unremitting application' ಎಂದು ಬರೆದರು. ಅದೇ ಇಲಾಖೆಯಲ್ಲಿ ತಂದೆ ಮುಂದುವರೆದಿದ್ದರೆ ದಕ್ಷರಾದ ಪೋಲೀಸು ಅಧಿಕಾರಿಯಾಗಿ ನಿವೃತ್ತಿ ಹೊಂದುತ್ತಿದ್ದರೊ ಏನೊ. ಹಾಗಾಗದೆ ಹೋದುದು ನಮ್ಮ ಪುಣ್ಯ. ವಿಧಿ ಎಲ್ಲೆಲ್ಲಿಯೊ ತೊಳಲಿಸಿ ಬಳಲಿಸಿ ಆಮೇಲೆ ಸರಿಯಾದ ದಾರಿಗೆ ತಂದುಬಿಡುತ್ತದೆಯೆಂದು ಕಾಣುತ್ತದೆ. ಮೇಲಿನವರ ಶಿಫಾರಿಸಿನ ಫಲವಾಗಿ ಹೆಡ್‌ಮುನ್ಷಿಯ ಕೆಲಸ ಮುಗಿದು English Deputy clerk ಆದರು. ಆಗ ಅವರಿಗೆ ಬರುತ್ತಿದ್ದ ಸಂಬಳ ನಲವತ್ತು ರೂಪಾಯಿ. ಆ ಸುಮಾರಿಗೆ ಪೋಲೀಸು ಇಲಾಖೆಯಿಂದ ಮುಕ್ತವಾಗುವ ಮುಹೂರ್ತ ಒದಗಿ ಬಂತು. ಬೆಂಗಳೂರಿನಲ್ಲಿ ಆ ವೇಳೆಗೆ ಒಕ್ಕಲಿಗರ ಸಂಘವೊಂದು ಸ್ಥಾಪಿತವಾಯಿತು. ಸಂಘ ಇವರನ್ನು ತನ್ನ ಕಡೆಗೆ ಬರಮಾಡಿಕೊಂಡಿತು.

## ಬಿ. ಎನ್. ಚೆನ್ನಿಗಪ್ಪನವರು

ಇದಕ್ಕೆ ಮುಂಚೆಯೇ ಶ್ರೀ ಚೆನ್ನಿಗಪ್ಪನವರ ವಿಷಯವನ್ನ ನಾನು ಒಂದೆರಡು ಸಾರಿ ಪ್ರಸ್ತಾಪಮಾಡಿದೇನೆ. ಒಕ್ಕಲಿಗರ ಸಂಘ ಹುಟ್ಟಿಕೊಳ್ಳುವುದಕ್ಕೆ ಕಾರಣರಾದ ಇವರ ಕತೆಯುನ್ನು ಇಲ್ಲಿ ತಿಳಿಸಬೇಕಾಗಿದೆ. ಚೆನ್ನಿಗಪ್ಪನವರು ನಮ್ಮ ತಂದೆಯು ದೊಡ್ಡಪ್ಪನ ಮಗ. ಆದರೆ ಮೊದಲಿನಿಂದಲೂ ನಮ್ಮ ತಾತನೇ ಅವರಿಗೆ ಆಶ್ರಯಕೊಟ್ಟು ಮುಂದೆತಂದು ಓದಿಸಿದರು.

ಚೆನ್ನಿಗಪ್ಪನವರು ಹುಟ್ಟಿದುದು ೧೮೭೫ನೇ ಇಸವಿಯಲ್ಲಿ. ನಮ್ಮ ತಂದೆಗಿಂತ ಅವರು ನಾಲ್ಕುವರ್ಷ ದೊಡ್ಡವರು. ಲೋವರ್ ಸೆಕೆಂಡರಿ ಪರೀಕ್ಷೆ ಮೊದಲುಗೊಂಡು ಕೊನೆಯ ಪರೀಕ್ಷೆ ಬಿ. ಎ. ವರೆಗೂ ಪ್ರತಿಯೊಂದರಲ್ಲೂ ಮೊದಲ ತರಗತಿಯಲ್ಲಿ, ಅದರಲ್ಲೂ ಸಂಸ್ಥಾನದಲ್ಲಿ ಉತ್ತೀರ್ಣರಾದ ಎಲ್ಲ ವಿದ್ಯಾರ್ಥಿಗಳಿಗೂ ಮೊದಲನೆಯವರಾಗಿ ಗೆದ್ದು ಬಂದರು. ೨೦ ವರ್ಷ ವಯಸ್ಸಿನಲ್ಲೆ ಬಿ. ಎ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ಕಾಲೇಜಿನ ಪ್ರಿನ್ಸಿಪಾಲರಾದ ಟೇಟ್ ಅವರಿಗೆ ಇವರ ಇಂಗ್ಲೀಷು ಪಾಂಡಿತ್ಯ, ಆಟ ಪಾಟದಲ್ಲಿ ನಿಪುಣತೆ ಕಂಡು ವಿಶೇಷ ಮಮತೆ. ಹಿಂದುಳಿದವರಾದ ಒಕ್ಕಲಿಗರಿಗೆ ರತ್ನಪ್ರಾಯರಾಗಿದ್ದರು.

ಇಷ್ಟು ಪ್ರತಿಭಾಶಾಲಿಗಳಾದವರು ಮುಂದೆಯೂ ಸರಕಾರದಲ್ಲಿ ಉನ್ನತ ಅಧಿಕಾರಿಗಳಾಗುವರೆಂದೂ ಅಮೂಲ್ಯವಾದ ಸೇವೆ ಸಲ್ಲಿಸುವರೆಂದೂ ಎಲ್ಲರ ನಂಬಿಕೆಯಾಗಿತ್ತು. ಆದರೆ ದುರ್ದೈವದಿಂದ ಹಾಗಾಗದೆ ಹೋಯಿತು. ಬಿ. ಎ. ಪರೀಕ್ಷೆ ಮುಗಿದ ಕೂಡಲೆ ತಾವು ಒಕ್ಕಲಿಗರಲ್ಲಿ ಮೊದಲನೆಯ ಪದವೀಧರರೆಂದೂ, ಬಹು ಯಶಸ್ವಿಯಾಗಿ ತೇರ್ಗಡೆ ಹೊಂದಿದವರೆಂದೂ, ಆಟಪಾಟ ವ್ಯಾಯಾಮಗಳಲ್ಲಿ ತುಂಬ ಪರಿಶ್ರಮಿಗಳೆಂದೂ ಮುಂತಾಗಿ ಅರ್ಜಿ ಬರೆದುಕೊಂಡು ತಮ್ಮ ಹಿತಚಿಂತಕರಾದ ಟೇಟ್ ಮತ್ತು ಕುಕ್ ಸಾಹೇಬರುಗಳಿಂದ ಶಿಫಾರಸು ಪತ್ರಗಳನ್ನು ಅದಕ್ಕೆ ಸೇರಿಸಿ, ಸರ್ಕಾರಕ್ಕೆ ಕಳುಹಿಸಿ ದಿವಾನರ, ಕೌನ್ಸಿಲರುಗಳ ಮನೆ ಬಾಗಿಲು ಕಾಯಲು ಆರಂಭಿಸಿದರು.

ತಾವು ಪಡೆದುಕೊಂಡ ಪ್ರಶಸ್ತಿಗೆ ತಕ್ಕಂತೆ ೫೦ ರೂಪಾಯಿ ರೆವಿನ್ಯೂ ಪ್ರೊಬೇಷನರ ಕೆಲಸ ದೊರೆತರೆ ತಾವು ತೃಪ್ತರಾಗುವುದಾಗಿ ಬೇಡಿದರು. ಒಂದು ವರ್ಷ ಕಾದರೂ ಇವರು ಬೇಡಿದ ಕೆಲಸ ಹೋಗಲಿ ಬೇರೆ ಯಾವ ಕೆಲಸವೂ ಸಿಗದೆ ಹೋಯಿತು. ಹೇಳಿಕೊಂಡುದೆಲ್ಲ ಅರಣ್ಯರೋದನವಾಯಿತು. ತಮ್ಮ ಗುರುಗಳ ಶಿಫಾರಸು ಪತ್ರವಲ್ಲದೆ ಅವರಿಗೆ ಬೇರೆ ಯಾರ ಸಹಾಯವೂ ಇರಲಿಲ್ಲ. ಅಧಿಕಾರಿಗಳ ಮನೆ ಕಾದು ಕಾದು ಬೇಸತ್ತರು. ಆಗ ಕೌನ್ಸಿಲರಾಗಿದ್ದ ಟಿ. ಆರ್. ಎ. ತಂಬುಚೆಟ್ಟಿಯವರು ಇವರಿಗೆ ಸಮಾಧಾನ ಹೇಳಿ ಸಹಾಯಮಾಡಲನುವಾದರು. ಇಷ್ಟು ದೊಡ್ಡ ಅಧಿಕಾರಿಗಳ ಬೆಂಬಲ ದೊರೆತರೂ ಅವರು ಅತಿಯಾಗಿ ಮೋಹಿಸುತ್ತಿದ್ದ ರೆವಿನ್ಯೂ ಪ್ರೊಬೇಷನರ ಕೆಲಸ ದೊರೆಯದೆ ಹೋಯಿತು. ಅದಕ್ಕೆ ಬದಲು ಮೈಸೂರು ಮಹಾರಾಜ ಕಾಲೇಜಿನಲ್ಲಿ ಐವತ್ತು ರೂಪಾಯಿ ಸಂಬಳದ ಮೇಲೆ ಉಪಾಧ್ಯಾಯನ ಪದವಿ ದೊರೆಯಿತು. ಆ ಕೆಲಸದಮೇಲೆ ಸ್ವಲ್ಪವೂ ಅಭಿಲಾಷೆ ಇಲ್ಲದೆ ಹೋದರೂ ವಿಧಿ ಇಲ್ಲದೆ ಒಪ್ಪಿಕೊಂಡು ೧೮೯೬ ರಿಂದ ಹಿಡಿದು ನಾಲ್ಕು ವರ್ಷಕಾಲ ಮಹಾರಾಜ ಕಾಲೇಜಿನಲ್ಲಿ ಕೆಲಸಮಾಡಿದರು.

ಕಾಲೇಜಿನಲ್ಲಿ ಒಳ್ಳೆಯ ವಾತಾವರಣದಲ್ಲಿ ಕೆಲಸಮಾಡುತ್ತಿದ್ದರೂ ಸಹ ರೆವಿನ್ಯೂ ಪ್ರೊಬೇಷನರ ಕೆಲಸದಮೇಲಿನ ಹಂಬಲ ಅವರಿಗೆ ಹೋಗಲಿಲ್ಲ. ಅದಕ್ಕೆ ಪಡುವ ಪ್ರಯತ್ನ ಅವರು ನಿಲ್ಲಿಸಲಿಲ್ಲ. ಕೊನೆಗೆ ೧೯೦೦ ರಲ್ಲಿ ಅವರ ಇಷ್ಟಾರ್ಥ ನೆರವೇರಿತು. ಡೆಪ್ಯುಟಿ ಅಮಲ್ದಾರರಾಗಿ ಅದೇ ವರ್ಷದ ಕೊನೆಯಲ್ಲಿ ನೇಮಕವಾಯಿತು. ಅವರಿಗೆ ಅಧಿಕಾರ ಮಾಡಬೇಕು, ದರ್ಪ ಚಲಾಯಿಸಬೇಕು ಎನ್ನುವ ಲಾಲಸೆ ಅತಿಯಾಗಿ ಇತ್ತೆಂದೇ ತೋರುತ್ತದೆ. ಅಮಲ್ದಾರ ವೃತ್ತಿಯಲ್ಲಿ ನಿರ್ಭಯವಾಗಿ ಕಾರ್ಯ ನಡೆಸಿದರು. ಅಧಿಕಾರದ ಮದದಲ್ಲಿ ಕೆಲವು ಅವಿಚಾರಗಳೂ ನಡೆದುಹೋದುವು. ತಪ್ಪೊಪ್ಪಿಕೊಂಡು ತಗ್ಗಿ ನಡೆಯುವವರು ಚೆನ್ನಿಗಪ್ಪನವರಲ್ಲ. ಇವರ ನಿರಂಕುಶ ಮನೋಭಾವ ಮೇಲಿನವರಿಗೆ ಸರಿಬೀಳಲಿಲ್ಲ. ೧೯೦೭ ರಲ್ಲಿ ಅಮಲ್ದಾರರುಗಳಿಗೆ ಅಸಿಸ್ಟೆಂಟ್ ಕಮಿಷನರ ಪದವಿಗೆ ಬಡತಿ ದೊರೆತಾಗ ಇವರನಂತರ ಕೆಲಸಕ್ಕೆ ಸೇರಿದವರಿಗೂ ಪದವಿದೊರೆತು ಇವರಿಗೆ ಮಾತ್ರ ದೊರೆಯದೆ ಹೋಯಿತು.

ಕೆಲಸದಲ್ಲಿ ಎಷ್ಟು ಗಟ್ಟಿಗರಾದರೂ ಅವರಮಾತು ನಡತೆಗಳಿಂದ ಅವರಿಗೇ ಅಪಚಾರವಾಯಿತು. ತಮಗೆ ಸರಕಾರ ದೊಡ್ಡ ಅನ್ಯಾಯಮಾಡಿತೆಂದು ತಿಳಿದರು. ಮೇಲಿನ ಅಧಿಕಾರಿಗಳನ್ನು ಕಂಡರು ಅರ್ಜಿ ಸಲ್ಲಿಸಿದರು. ಟೇಟ್ ಸಾಹೇಬರು ಮುಂತಾದ ಹಿತೈಷಿಗಳಿಂದ ಸರಕಾರಕ್ಕೆ ಹೇಳಿಸಿದರು. ಏನುಮಾಡಿದರೂ ಪರಿಹಾರ ಒದಗದೆ ಹೋಗಿ, ಕೆಲಸದಮೇಲೆ ಮನಸಿಲ್ಲದೆ ರಜ ಪಡೆದು ಊರಿಗೆ ಬಂದುಬಿಟ್ಟರು. ಹಿತಚಿಂತಕರು ಆಗಿಹೋದುದನ್ನು ಮರೆತು ಕೆಲಸಕ್ಕೆ ಸೇರು ಎಂದು ಎಷ್ಟು ಬುದ್ಧಿ ಹೇಳಿದರೂ ಕೇಳದೆ, ನನಗಾಗಿರುವ ಅನ್ಯಾಯ ಸರಿಪಡಿಸುವವರೆಗೂ ನಾನು ಕೆಲಸದಮೇಲೆ ಹೋಗುವುದಿಲ್ಲ ಎಂದು ಹಠತೊಟ್ಟು ಕೊನೆಗೆ ಪದವಿಗೆ ರಾಜೀನಾಮೆ ಕೊಟ್ಟರು. ತಮಗಾದ ಅನ್ಯಾಯವೇ ಮನಸ್ಸನ್ನು ಕೊರೆಯುತ್ತಿದ್ದುದರಿಂದ ಬುದ್ಧಿಯ ಸ್ವಾಧೀನವೂ ತಪ್ಪಿಹೋಗುತ್ತ ಬಂತು.

ಹೀಗೆ ಚೆನ್ನಿಂಗಪ್ಪನವರ ಬಾಳು ವ್ಯರ್ಥವಾಗಿ ಹೋಯಿತು. ತಮ್ಮ ಎಲ್ಲ ಪ್ರಯತ್ನ ವಿಫಲವಾದುದನ್ನು ಕಂಡು ಅವರಿಗೆ ಒಂದು ಯೋಚನೆ ಹೊಳೆಯಿತು. ಒಬ್ಬರೇ ನಿಂತು ಹೋರಾಡಿ ಸಾರ್ಥಕವಾಗಲಿಲ್ಲವಾದುದರಿಂದ ಒಕ್ಕಲಿಗ ಜನಾಂಗದ ಬೆಂಬಲವನ್ನು ಪಡೆದು ಹೊಡೆದಾಡಿದರೆ ಗೆಲುವು ಖಂಡಿತವೆಂದು ತೋರಿತು. ಆಗ ಅವರು ಒಕ್ಕಲಿಗರ ಸಂಘವೊಂದನ್ನು ಸ್ಥಾಪಿಸಿ, ಒಕ್ಕಲಿಗರನ್ನೆಲ್ಲಾ ಆ ಸಂಘದ ಮೂಲಕ ಒಟ್ಟುಗೂಡಿಸಿ, ಸಂಘದ ಪ್ರತಿನಿಧಿಗಳನ್ನು ಮುಂದೆ ಮಾಡಿಕೊಂಡು ಅವರ ಬೆಂಬಲದಿಂದ ತಮ್ಮ ಕರ್ತವ್ಯವನ್ನು ನೆರವೇರಿಸಿಕೊಳ್ಳಬೇಕೆಂದು ಸಂಕಲ್ಪಮಾಡಿಕೊಂಡು ಸಂಘವನ್ನು ಸ್ಥಾಪಿಸುವ ವಿಚಾರವನ್ನು ಕುರಿತು ಪ್ಲೀಡರ್ ಬಿ. ಕೆಂಪಣ್ಣ, ಲಾಲ್ ಬಾಗ್ ಸುಬ್ಬಯ್ಯ ಇವರುಗಳಲ್ಲಿ ಪ್ರಸ್ತಾಪಮಾಡಿದರು. ಸಂಘದ ಸ್ಥಾಪನೆಯ ಸೂಚನೆ ಥಟ್ಟನೆ ಎಲ್ಲರ ಮನಸ್ಸಿಗೂ ಹಿಡಿಯಿತು. ಈ ಮಹನೀಯರೆಲ್ಲ ಸೇರಿ ಐಶ್ವರ್ಯವಂತರಾಗಿದ್ದ ಉರಿಗದ ಬಯ್ಯಣ್ಣನವರು, ಹಲಸೂರು ಮಾರಪ್ಪನವರು, ಮುನಿಸ್ವಾಮಪ್ಪನವರು ಇವರನ್ನೆಲ್ಲ ಸೇರಿಸಿಕೊಂಡು ೧೯೦೬ನೇ ಏಪ್ರಿಲ್ ತಿಂಗಳಲ್ಲಿ ಒಕ್ಕಲಿಗರ ಸಂಘವನ್ನು ಸ್ಥಾಪಿಸಿದರು. ಹೀಗೆ ಒಕ್ಕಲಿಗರ ಸಂಘ ಚೆನ್ನಿಗಪ್ಪನವರ ಮನಸಿನಲ್ಲಿ ರೂಪು ಹೊಂದಿ ಅವರ ಕಷ್ಟಕಾಲದ ಶಿಶುವಾಗಿ ಜನ್ಮತಾಳಿತು.

ಶಿಶು ಬೆಳೆದು ಪ್ರವರ್ಧಮಾನವಾದುದನ್ನು ಚೆನ್ನಿಗಪ್ಪನವರು ನೋಡಿದರು. ಆದರೆ ತಮ್ಮ ಉದ್ದೇಶ ಸಫಲವಾಗುವುದಕ್ಕೆ ಸಂಘದಿಂದ ಯಾವ ನೆರವೂ ದೊರೆಯಲಿಲ್ಲವೆಂದು ನಿರಾಶರಾದರು. ಅವರು ಕೈಗೊಂಡ ಎಲ್ಲ ಕಾರ್ಯಗಳೂ ಈ ರೀತಿ ನಿಷ್ಫಲವಾದುದರಿಂದ ಮನಸಿನ ದುಗುಡ ಹೆಚ್ಚಿತು. ಅಂದಿನಿಂದ ಮಾನವ ವರ್ಗವನ್ನು ಕಂಡರೆ ಅವರಿಗೆ ಪ್ರೀತಿವಿಶ್ವಾಸವಿಲ್ಲದಂತಾಗಿ, ಅಧಿಕಾರಿ ಬಂಧು ಮಿತ್ರ ಯಾರೂ ಬೇಡವಾದರು. ಎಲ್ಲರನ್ನೂ ತೊರೆದು, ತನಗಾದ ಅನ್ಯಾಯವನ್ನೇ ಹಗಲಿರುಳು ಚಿಂತಿಸುತ್ತ, ಏಕಾಂಗಿಯಾಗಿ ಜೀವನವನ್ನು ಹೇಗೊ ತಳ್ಳಿದರು. ತಮ್ಮ ಅರವತ್ತಾರನೆಯ ವಯಸಿನಲ್ಲಿ (೧೯೪೧ನೇ ಇಸವಿ ಮಾರ್ಚಿ ಐದನೆಯ ತಾರೀಖು) ಬಹು ಮೂತ್ರ ರೋಗದಿಂದ ನರಳುತಿದ್ದವರು ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಕಾಲವಾದರು.

ಪ್ರತಿಭಾಸಂಪನ್ನರಾದ ಇವರ ಜೀವನ ಈ ರೀತಿ ವ್ಯರ್ಥವಾಗಿ ಹೋಯಿತು. ಯಾರು ರಾಜರಿಂದ, ರಾಜ್ಯದಿಂದ, ಜನಾಂಗದಿಂದ, ಸ್ವಜನರಿಂದ ಪೂಜ್ಯತೆ ಪಡೆದು ಕೀರ್ತಿಕಾಯರಾಗಿ ಇಹಲೋಕ ತ್ಯಜಿಸಬೇಕಾಗಿದ್ದಿತೋ ಅಂಥವರು ಯಾವೊಂದು ಸದ್ದೂ ಇಲ್ಲದೆ ಕಣ್ಣುಮರೆಯಾಗಿ ಹೋದರು. ತಮ್ಮ ಮನೆಯಲ್ಲಿಯೇ ಒಡನಾಡಿ ಬೆಳೆದು, ತಮ್ಮ ಹಿರಿಯಣ್ಣನಂತೆ ಇದ್ದ ಚೆನ್ನಿಗಪ್ಪನವರು ಸತ್ತಾಗ ತಂದೆಗೆ ವಿಪರೀತ ದುಃಖವಾಯಿತು. ಚೆನ್ನಿಗಪ್ಪನವರ ಜೀವನ ವ್ಯರ್ಥವಾದ ಬಗೆಯನ್ನು ಮಕ್ಕಳಿಗೆಲ್ಲ ಕಾಗದ ಬರೆದು ತಿಳಿಯಹೇಳಿದರು.

## ಒಕ್ಕಲಿಗರ ಸಂಘದ ಸ್ಥಾಪನೆ—ಕೆ. ಹೆಚ್. ರಾಮಯ್ಯನವರು

ಒಕ್ಕಲಿಗರ ಸಂಘ ಹುಟ್ಟಿಕೊಂಡುದು ಹೇಗೆ ಎನ್ನುವುದನ್ನು ಹಿಂದಿನ ಅಧ್ಯಾಯದಲ್ಲಿ ತಿಳಿಸಿದೇನೆ. ೧೯೦೬ನೇ ಇಸವಿ ಏಪ್ರಿಲ್ ತಿಂಗಳಲ್ಲಿ ಜನಾಂಗದ ಪ್ರಮುಖರಾದ ಶ್ರೀಗಳಾದ ಬಯ್ಯಣ್ಣನವರು, ಮಾರಪ್ಪನವರು, ಮುನಿಸ್ವಾಮಪ್ಪನವರು, ಸುಬ್ಬಯ್ಯನವರು ಇವರುಗಳ ನೇತೃತ್ವದಲ್ಲಿ ಒಕ್ಕಲಿಗರ ಮಹಾ ಸಭೆ ನೆರೆಯಿತು. ಮಹಾಸಭೆ ನೆರೆಯುವುದೆನ್ನುವ ಸುದ್ದಿ, ಮುಂದೆ ಸಂಘದಲ್ಲಿ ಅತಿಯಾಗಿ ಕೆಲಸಮಾಡಿ ಅದರ ಏಳಿಗೆಗೆ ಮುಖ್ಯ ಕಾರಣರಾದಂಥ ಇಬ್ಬರು ಮಹನೀಯರನ್ನು ತನ್ನ ಕಡೆಗೆ ಸೆಳೆದುಕೊಂಡಿತು. ಇವರಲ್ಲಿ ಒಬ್ಬರು ಕಲ್ಲುದೇವನಹಳ್ಳಿ ಹನುಮಯ್ಯ ಮೇಸ್ತ್ರಿಗಳ ಮಗ (ಕೆ. ಹೆಚ್.) ರಾಮಯ್ಯನವರು. ಇನ್ನೊಬ್ಬರು ನನ್ನ ತಂದೆ ಬೆಂಗಳೂರು ಪುಟ್ಟಯ್ಯನವರು.

ಒಕ್ಕಲಿಗರ ಸಂಘದ ಉನ್ನತಿಗೆ ಕಾರಣರಾದ ಶ್ರೀಯುತ ರಾಮಯ್ಯನವರು ನಮ್ಮ ತಂದೆಯ ಸಮೀಪದ ಬಂಧು. ಬಾಲ್ಯದಲ್ಲಿ ಆಟದ ಗೆಳೆಯರು. ರಾಮಯ್ಯನವರ ಹಿರಿಯರು ಪುಣ್ಯಾತ್ಮರಾಗಿ ದಾನಧರ್ಮಗಳಲ್ಲಿ ನಿರತರಾಗಿದ್ದವರು. ಅವರ ಮನೆಯಲ್ಲಿ ದಿನವೂ ನೂರಾರು ಜನರಿಗೆ ಸಂತರ್ಪಣೆ ನಡೆಯುತ್ತಲೇ ಇರುವುದು ದೇವತಾರಾಧನೆ ಹಬ್ಬ ಊಟ ಉಪಚಾರ ಇವೇ ಅವರ ಮನೆಯ ಸಂಪ್ರದಾಯ. ಇಂಥ ವಾತಾವರಣದಲ್ಲಿ ಬೆಳೆದ ರಾಮಯ್ಯನವರು ತಾವಿರುವರೆಗೂ ಪೂರ್ವದ ಸಂಪ್ರದಾಯವನ್ನೆ ನಡೆಸಿಕೊಂಡು ಬಂದರು.

ಚಿಕ್ಕಂದಿನಲ್ಲಿಯೇ ತಂದೆ ತೀರಿಕೊಂಡರಾದ್ದರಿಂದ ಹೇರಳವಾದ ಆಸ್ತಿಗೆಲ್ಲ ರಾಮಯ್ಯನವರೆ ಒಡೆಯರಾದರು. ತಂದೆಯ ಕಸುಬಾದ ಕಂಟ್ರಾಕ್ಟು ವೃತ್ತಿಯಲ್ಲಿ ಲೀನರಾಗದೆ ವಿದ್ಯಾಭ್ಯಾಸ ಮುಂದುವರಿಸುತ್ತ ಹೋದರು. Central Collegeನಲ್ಲಿ ಎಫ್. ಎ ಪರೀಕ್ಷೆ ಮಾಡಿಕೊಂಡು ಮದರಾಸಿಗೆ ಬಿ. ಎ. ಪರೀಕ್ಷೆ ಓದುವುದಕ್ಕೆ ಹೋದರು. ಅದರಲ್ಲಿ ಉತ್ತೀರ್ಣರಾಗಿ ಅದೇ ಊರಿನಲ್ಲಿ ಎಫ್. ಎಲ್. ಪರೀಕ್ಷೆಗೆ ಓದುತ್ತಿದ್ದರು. ಎಫ್. ಎಲ್.

ಪರೀಕ್ಷೆಗೆ ಓದುತಿರುವಾಗಲೆ ಅವರ ಜೀವನದಲ್ಲಿ ದೊಡ್ಡ ಬದಲಾವಣೆಯುಂಟಾಯಿತು. ೧೯೦೦ ರ ಸುಮಾರಿಗೆ ಸ್ವಾಮಿ ವಿವೇಕಾನಂದರು ಮದರಾಸಿನಲ್ಲಿ ಕೊಟ್ಟ ಭಾಷಣಗಳು, ಆದ್ಯಾರಿನಲ್ಲಿ ನೆಲೆಸಿದ್ದ ಆನಿಬಿಸೆಂಟರ ಉಪದೇಶಗಳು ರಾಮಯ್ಯನವರನ್ನು ನ್ಯಾಯಶಾಸ್ತ್ರದ ಅಭ್ಯಾಸದಿಂದ ತಮ್ಮ ಕಡೆಗೆ ಸೆಳೆದು ಬಿಟ್ಟವು. ನ್ಯಾಯಶಾಸ್ತ್ರ ಮೂಲೆಯಪಾಲಾಯಿತು. ಬ್ರಹ್ಮಜ್ಞಾನ ವೇದಾಂತ ಪುಸ್ತಕಗಳು ಪಠ್ಯಪುಸ್ತಕಗಳಾದುವು ೧೯೦೦ ರಿಂದ ೧೯೦೬ ರ ವರೆಗೂ ಬೇರೆ ಯಾವ ಹವ್ಯಾಸಕ್ಕೂ ಅವರು ಕೈಹಾಕಲಿಲ್ಲ. ಸ್ನಾನ ಧ್ಯಾನ ಭೋಜನ ತತ್ವಾಧ್ಯಯನ ಶಯನ ಇವೇ ಅವರ ದಿನಚರಿಯ ಕಾರ್ಯಕ್ರಮಗಳಾದುವು. ಬೆಂಗಳೂರಿನಲ್ಲಿರುವಾಗ ಪ್ರತಿ ಶನಿವಾರ ಭಜನೆಮಂದಿರಕ್ಕೆ ಹೋಗುವರು. ಅಂಥ ಸಮಯಗಳಲ್ಲಿ ನಮ್ಮ ತಂದೆ ಕೂಡ ಅವರ ಜೊತೆಯಲ್ಲಿರುವರು. ರಾತ್ರಿ ಭಜನೆ ಗುಂಪನ್ನು ಕಟ್ಟಿಕೊಂಡು ಬೆಂಗಳೂರು ಪೇಟೆಯ ಬೀದಿಗಳಲ್ಲಿ ದೇವರ ಧ್ಯಾನಮಾಡುತ್ತ ಹಾಡುತ್ತ ಸುತ್ತಾಡಿ ಮಧ್ಯರಾತ್ರಿಯ ಹೊತ್ತಿಗೆ ಮನೆಗೆ ಬರುವರು. ಅರಳೆಪೇಟೆ ಸೂರಪ್ಪನವರ ಭಜನೆಮಂದಿರದಲ್ಲಿ ಭಕ್ತ ಮಂಡಲಿಯ ಮಧ್ಯೆ ಕುಳಿತ ರಾಮಯ್ಯನವರ ಮತ್ತು ನನ್ನ ತಂದೆಯ ಚಿತ್ರ ಆ ದಿನಗಳ ನೆನಪನ್ನು ಮಾಡಿಕೊಡುತ್ತದೆ.

೧೯೦೬ ರಲ್ಲಿ ಒಕ್ಕಲಿಗರ ಸಂಘ ಸ್ಥಾಪಿತವಾಯಿತು. ರಾಮಯ್ಯನವರಿಗೆ ತಾವು ಬಯಸಿದಂಥ ಕೆಲಸವೆ ದೊರೆಯಿತು. ಹಳ್ಳಿಗಾಡಿನಲ್ಲಿ ಬರಿಯ ವ್ಯವಸಾಯಗಾರರಾಗಿ, ವಿದ್ಯೆಯಿಲ್ಲದೆ, ತಿಳಿವಿಲ್ಲದೆ, ದೇಶದ ಆಗುಹೋಗುಗಳಲ್ಲಿ ಬಾಯಿಲ್ಲದೆ, ಬರಿಯ ದುಡಿತಕ್ಕಾಗಿ ದುಡಿಯುತ್ತಿದ್ದ ಅಸಂಖ್ಯಾತ ಒಕ್ಕಲುಮಕ್ಕಳನ್ನು ಉದ್ಧಾರಮಾಡಬೇಕೆನ್ನುವ ಆಸೆ ಬಲಿಯಿತು. ಆ ಮಹತ್ಕಾರ್ಯಕ್ಕಾಗಿ ಮಾಡುತಿದ್ದ ಕೆಲಸವನ್ನೆಲ್ಲ ಮೂಲೆಗೆಸೆದು, ಕೆಲವು ದಿವಸಗಳಿಗೆ ಹಿಂದೆ ಸ್ನೇಹಿತರ ಬಲವಂತದಿಂದ ಸರಕಾರದಲ್ಲಿ ಒಪ್ಪಿಕೊಂಡಿದ್ದ ಕೆಲಸದಿಂದ ಬಿಡುಗಡೆ ಹೊಂದಿ ಸಂಘದ ಕೆಲಸದಲ್ಲಿ ತಲ್ಲೀನರಾದರು. ಭಿಕ್ಷಾಪಾತ್ರೆಯನ್ನು ಹಿಡಿದು ಹಳ್ಳಿಹಳ್ಳಿಯಲ್ಲಿ ಸಂಘಕ್ಕಾಗಿ ಹಣ ಬೇಡಿದರು. ದೇಶದಲ್ಲೆಲ್ಲಾ ಜಾಗೃತಿ ಉಂಟುಮಾಡಿದರು. ದಿವಾನರಾಗಿದ್ದ ಶ್ರೀ. ವಿ. ಪಿ. ಮಾಧವರಾಯರನ್ನು ಕಂಡು ತಮ್ಮ ಧ್ಯೇಯವನ್ನು

ತಿಳಿಸಿದರು. ಸಂಘದ ಆದರ್ಶಗಳನ್ನು ಕಂಡು ಮೆಚ್ಚಿದ್ದ ಮಾಧವರಾಯರು ಸರಕಾರ ಕೊಡಬಹುದಾದ ಎಲ್ಲ ಬೆಂಬಲವನ್ನು ರಾಮಯ್ಯನವರಿಗೆ ಕೊಟ್ಟರು. ರಾಮಯ್ಯನವರು ಯಾವ ತಾಲ್ಲೂಕಿಗೆ ಹೋದರೂ ನಿರಾತಂಕವಾಗಿ ಉಪನ್ಯಾಸಮಾಡಲು ಅವಕಾಶ ಕೊಡಬೇಕೆಂದು ಸಂಸ್ಥಾನದ ಎಲ್ಲ ಅಮಲ್ದಾರರಿಗೂ ನಿರೂಪಹೋಯಿತು. ರಾಮಯ್ಯನವರು ಅಥವಾ ಅವರ ಕಡೆಯವರು ಒಕ್ಕಲಿಗರ ಸಂಘಕ್ಕೋಸ್ಕರ ವಸೂಲುಮಾಡಿದ ಹಣವನ್ನು ತಾಲ್ಲೂಕು ಖಜಾನಿಗಳಲ್ಲಿ ತೆಗೆದುಕೊಂಡು ಸಂಘದ ಲೆಕ್ಕಕ್ಕೆ ವರ್ಗಮಾಡಬೇಕೆಂದು ಆಜ್ಞೆ ಮಾಡಿದರು. ಇಷ್ಟೇ ಅಲ್ಲದೆ ಅಕ್ಟೋಬರ್ ತಿಂಗಳಲ್ಲಿ ನಡೆದ ಒಕ್ಕಲಿಗರ ಮೊದಲನೆಯ ಮಹಾಸಮ್ಮೇಳನದ ಅಧ್ಯಕ್ಷತೆ ವಹಿಸಿ ಹೆಚ್ಚು ಸಹಾನುಭೂತಿಯುಳ್ಳ ಭಾಷಣ ಮಾಡಿದರು. ಈ ಮಹನೀಯರ ಪ್ರೋತ್ಸಾಹ ಬೆಂಬಲದಿಂದ, ಮುಖ್ಯವಾಗಿ ರಾಮಯ್ಯನವರ ನಿರಂತರ ಸೇವೆಯಿಂದ ಸಂಘ ಬೆಳೆಯುತ್ತ ಹೋಯಿತು.

## ಸಂಘದ ಕಾರ್ಯದರ್ಶಿಯಾಗಿ

ಒಕ್ಕಲಿಗರ ಸಂಘ ಮೊದಲಾದಾಗ ರಾಮಯ್ಯನವರು ವಹಿಸಿದ ಪಾತ್ರವನ್ನು ಹಿಂದಿನ ಅಧ್ಯಾಯದಲ್ಲಿ ವಿವರಿಸಿಯಾಯಿತು. ನನ್ನ ತಂದೆ ಕೂಡ ಸಂಘದ ಮೊದಲಲ್ಲಿ ತಮ್ಮ ಮೂಕಸೇವೆಯನ್ನು ಸಲ್ಲಿಸುತ್ತ ಹೋದರು. ಒಕ್ಕಲಿಗರ ಮಹಾಸಮ್ಮೇಳನ ನಡೆಯುವುದೆನ್ನುವ ಸಮಾಚಾರವನ್ನು ಕೇಳಿದ ತಂದೆ, ಚಿತ್ರದುರ್ಗದಲ್ಲಿ ಪೋಲೀಸ್ ಗುಮಾಸ್ತೆಯಾಗಿ ಕೆಲಸ ಮಾಡುತಿದ್ದವರು ರಜಪಡೆದುಕೊಂಡು ಬೆಂಗಳೂರಿಗೆ ಬಂದರು. ಯಾವ ರೀತಿ ಮಹಾಸಭೆಯ ಕಾರ್ಯದಲ್ಲಿ ಬೆರೆತರೊ ತಿಳಿಯದು; ಅಂತೂ ಮಹಾ ಸಭೆಗೆ ಸಂಬಂಧಿಸಿದ ಸಮಸ್ತ ಬರವಣಿಗೆಯ ಕಾರ್ಯ ಇವರ ಹೆಗಲಮೇಲೆ ಬಿತ್ತು. ಈ ಎಲ್ಲ ಕಾರ್ಯವನ್ನು ಹಗಲು ರಾತ್ರಿ ಎನ್ನದೆ ಒಬ್ಬರೇ ಕುಳಿತು ನಿರ್ವಹಿಸಿದರು. ಬರೆಯಲು ಅವರು ಕುಳಿತರೆ ಅವರಿಗೆ ಕಾಲದ ಜ್ಞಾನವೇ ಇರುತಿರಲಿಲ್ಲ. ಕೆಲವು ಸಲ ರಾತ್ರಿ ಕಳೆದು ಬೆಳಗಾದರೂ ಇನ್ನೂ ಬರೆಯುತ್ತಲೇ ಕುಳಿತಿರುತಿದ್ದರಂತೆ. ಕೆಲಸವೆಲ್ಲ ಮುಗಿದಮೇಲೆ ರಾಮಯ್ಯನವರೂ ಇತರ ಕುಲ ಮುಖಂಡರೂ ಇವರು ಸಲ್ಲಿಸಿದ ಸೇವೆಯನ್ನು ಮೆಚ್ಚಿ, ಸಂಘಕ್ಕೆ ಇಂಥವರ ಸೇವೆ ಅತ್ಯಗತ್ಯ ಎಂದು ಕಂಡುಕೊಂಡು ಅವರನ್ನು ಸಂಘದಲ್ಲಿಯೇ ಇರಿಸಿಕೊಳ್ಳುವ ಪ್ರಯತ್ನಮಾಡಿದರು. ಇದೇ ವಿಷಯವಾಗಿ ರಾಮಯ್ಯನವರು ಹೋಗಿ ದಿವಾನರನ್ನು ಕಂಡು ನನ್ನ ತಂದೆಯನ್ನು ಚಿತ್ರದುರ್ಗದಿಂದ ಬೆಂಗಳೂರಿಗೆ ವರ್ಗಮಾಡಿಸಿ, ಸೆಕ್ರಟೇರಿಯುಟಿನಲ್ಲಿ ಒಂದು ಸ್ಥಾನ ಕಲ್ಪಿಸಿಕೊಡಬೇಕಾಗಿ ಅರಿಕೆಮಾಡಿಕೊಂಡರು. ದಿವಾನರು ಅದೇ ಮೇರೆಗೆ ನಡೆಸಿಕೊಟ್ಟಮೇಲೆ ತಂದೆ ೧೯೦೭ ರಲ್ಲಿ ಬೆಂಗಳೂರಿಗೆ ವರ್ಗವಾಗಿ ಬಂದರು.

ಬೆಂಗಳೂರಿಗೆ ಬಂದಮೇಲೆ ರಾಮಯ್ಯನವರೊಡನೆ ನಡೆದ ಮಾತುಕತೆಯನ್ನು, ಹೇಗೆ ಇಬ್ಬರೂ ಒಕ್ಕಲಿಗರ ಸಂಘದ ಸೇವೆಗೆ ದೀಕ್ಷಾಬದ್ಧರಾದರೆನ್ನುವುದನ್ನು ಅವರೇ ಒಂದು ಸಂದರ್ಭದಲ್ಲಿ ಚಿತ್ರಿಸಿದ್ದಾರೆ:

" ನಾನು ಬೆಂಗಳೂರಿಗೆ ಬಂದಮೇಲೆ ರಾಮಯ್ಯನವರು ಒಂದು ಉತ್ತಮ ಸಲಹೆಯನ್ನು ಕೊಟ್ಟರು. ಅವರು ದೇಶವೆಲ್ಲ ಸಂಚರಿಸಿ, ಕುಲ ಸೇವೆಯನ್ನು ಮಾಡಿ ಸಭೆಗಳನ್ನು ನೆರೆಸುವುದೆಂದೂ, ನಾನು ಆಫೀಸಿನಲ್ಲಿ ಕೆಲಸಮಾಡುವುದೆಂದೂ ಹೀಗೆ ಮಾಡಿದರೆ ನಾವಿಬ್ಬರೂ ಸಂಘವನ್ನು ಸ್ಥಿರ ವಾದ ಅಸ್ತಿಭಾರದ ಮೇಲಿಟ್ಟು ಅದು ಅಭಿವೃದ್ಧಿಗೆ ಬರುವಂತೆ ಕೆಲಸ ಮಾಡಲು ಸಾಧ್ಯವಾಗುವುದೆಂದೂ ತಿಳಿಸಿದರು. ಈ ಸಲಹೆಯನ್ನು ಕೂಲಂ ಕಷವಾಗಿ ಪರ್ಯಾಲೋಚನೆ ಮಾಡಿದರು. ಕಡೆಗೆ ನಾನು ಒಪ್ಪಿದಮೇಲೆ ನನ್ನನ್ನು ತಮ್ಮ ಪ್ರಾರ್ಥನಾ ಮಂದಿರಕ್ಕೆ ಕರೆದು, ಹತ್ತಿರದಲ್ಲಿ ಕುಳ್ಳಿರಿಸಿ ತಮ್ಮ ಧ್ಯಾನವಾಣಿಯಿಂದ ಗಟ್ಟಿಯಾಗಿ ದೇವರನ್ನು ಸ್ತುತಿಸಿ, ಕುಲಸೇವೆ ಗಾಗಿ ದೀಕ್ಷಾಬದ್ಧರಾಗಿರುವ ನಮ್ಮಿಬ್ಬರನ್ನೂ ಕಾಪಾಡುವಂತೆ ಬೇಡಿ ಕೊಂಡರು. ಇವರ ಪ್ರಾರ್ಥನೆ ಆತ್ಮವನ್ನು ಹೊಕ್ಕು ಉಮ್ಮಳಿಸಿತು· ಕಂಬನಿ ನಮ್ಮಿಬ್ಬರ ಕೆನ್ನೆಯಲ್ಲಿ ಹನಿತುವು. ನಾವಿಬ್ಬರೂ ಸ್ತಬ್ಧರಾಗಿ ಪರ ಸ್ಪರ ತಬ್ಬಿಕೊಂಡು ಆನಂದದಿಂದ ಓಲಾಡಿದೆವು. ಅನಂತರ ಅವರು ನನ್ನನ್ನು ವಿ. ಪಿ. ಮಾಧವರಾಯರ ಬಳಿಗೆ ಕೊಂಡೊಯ್ದು ನಡೆದ ವಿಚಾರ ವನ್ನೆಲ್ಲ ತಿಳಿಸಿ, ನನಗೆ ದೀರ್ಘಕಾಲ ಸಂಬಳವಿಲ್ಲದ ರಜ ಕೊಡುವಂತೆಯೂ, ಆದರಿಂದ ನಾನು ಚಿಂತೆಯಿಲ್ಲದೆ ಒಕ್ಕಲಿಗರ ಸೇವೆಮಾಡಿ, ಒಕ್ಕಲಿಗರ ಪತ್ರಿ ಕೆಯ ಸಂಪಾದಕನಾಗಿಯೂ ಪ್ರೆಸ್ಸಿನ ಮೇಲ್ವಿಚಾರಕನಾಗಿಯೂ ಇರಬಹು ದೆಂದು ತಿಳಿಸಿದರು.

" ದಿವಾನರು ಈ ಕೂಡಲೆ ನಮ್ಮ ಬಿನ್ನಪವನ್ನು ಲಾಲಿಸಿದರು. ೧೯೦೭ನೆಯ ಯುಗಾದಿಯ ದಿನ ಒಕ್ಕಲಿಗರ ಪತ್ರಿಕೆಯ ಮೊದಲನೆಯ ಸಂಚಿಕೆ ನನ್ನ ಸಂಪಾದಕತ್ವದಲ್ಲಿ ಹೊರಟಿತು. ೧೯೦೮ ನೆಯ ಇಸವಿ ಯಲ್ಲಿ ಒಕ್ಕಲಿಗರ ಸಂಘದ ಪ್ರೆಸ್ ಸಂಸ್ಥಾಪಿತವಾಯಿತು. "

ದಿವಾನರ ಅನುಮತಿಯಮೇರೆಗೆ ತಂದೆಗೆ ದೀರ್ಘಕಾಲ ಸಂಬಳವಿಲ್ಲದ ರಜ ದೊರೆಯಿತು. ೧೯೦೭ ರ ಏಪ್ರಿಲ್ ತಿಂಗಳಿಂದ ಸರಕಾರದ ಕೆಲಸ ಬಿಟ್ಟು ಸಂಘದ ಸೇವೆಗಾಗಿ ನಿಂತರು. ಇಡೀ ಒಂದು ವರ್ಷ ಹತ್ತು ತಿಂಗಳ ಕಾಲ ಸಂಘಕ್ಕಾಗಿ ತಮ್ಮ ವ್ಯವಸಾಯದ ಎಲ್ಲ ಫಲವನ್ನ ದೊರಕಿಸಿ

ಕೊಟ್ಟರು. ಒಕ್ಕಲಿಗ ಜನತೆಯಲ್ಲಿ ತಿಳಿವನ್ನು ಹರಡುವುದಕ್ಕೆಂದೇ ಹೊರಟ ಒಕ್ಕಲಿಗರ ಪತ್ರಿಕೆ, ಇವರ ಸಂಪಾದಕತ್ವದಲ್ಲಿ ಬಹು ಜನ ವಾಚಕರನ್ನು ಪಡೆಯಿತು. ಆಗಿದ್ದ ವೃತ್ತಪತ್ರಿಕೆಗಳಲ್ಲಿ ಗಣ್ಯಸ್ಥಾನವನ್ನು ಗಳಿಸಿಕೊಂಡಿತು. ಪತ್ರಿಕೆಯನ್ನು ಮುದ್ರಿಸುವುದಕ್ಕೆ ಸ್ವಂತವಾದ ಮುದ್ರಣಶಾಲೆ ೧೯೦೮ ರಲ್ಲಿ ತಯಾರಾಯಿತು. ಈ ಮುದ್ರಣಶಾಲೆಯ ಮೇಲ್ವಿಚಾರಣೆ, ಒಕ್ಕಲಿಗರ ಪತ್ರಿಕೆಯ ಸಂಪಾದಕತ್ವ, ದಿನದಿನ ಏಳಿಗೆ ಹೊಂದುತಿದ್ದ ಸಂಘದ ಕಾರ್ಯ ದರ್ಶಿಯ ಪದವಿ, ಇವು ಅವರ ವೇಳೆಯನ್ನು ಸಂಪೂರ್ಣವಾಗಿ ಆಕ್ರಮಿಸಿ ಕೊಂಡುವು. ತಾರುಣ್ಯದ ಉತ್ಸಾಹದಲ್ಲಿ, ತಮ್ಮ ಜನಕ್ಕೆ ಸೇವೆ ಸಲ್ಲಿಸ ಬೇಕೆಂಬುವ ಉತ್ಕಟ ಆಕಾಂಕ್ಷೆಯಲ್ಲಿ ಹಸಿವು ನಿದ್ದೆ ತೊರೆದು ಕೆಲಸಮಾಡಿ ದರು. ಆ ಕಾಲದಲ್ಲಿ ರಾತ್ರಿಯೆಲ್ಲ ಎದ್ದು ಪತ್ರಿಕೆಗೆ ಪುಟಗಟ್ಟಲೆ ಲೇಖನ ಗಳನ್ನು ಬರೆಯುತ್ತಿದ್ದುದನ್ನು ಈಗಲೂ ನಮ್ಮ ಮನೆಯಲ್ಲಿ ನೆನಪುಮಾಡಿ ಕೊಳ್ಳುತಿರುತ್ತಾರೆ. ಆಗಿನ ಅವರ ವಿಶ್ರಾಂತಿಯಿಲ್ಲದ ದುಡಿತವನ್ನು ಬೆಲೆ ಕಟ್ಟುವುದು ಸಾಧ್ಯವಿಲ್ಲ.

ಈ ಸುಮಾರಿಗೆ ತಂದೆಗೆ ಇಪ್ಪತ್ತೆಂಟು ವರ್ಷಗಳಾಗಿತ್ತು. ಇನ್ನೂ ಮದುವೆಯಾಗಿರಲಿಲ್ಲ. ೧೯೦೭ ರ ಜೂನ್ ತಿಂಗಳು ಇಪ್ಪತ್ತೇಳನೆಯ ತಾರೀಖು ಮದುವೆ ನಿಶ್ಚಯವಾಯಿತು. ದೊಡ್ಡಬೆಲೆಗೆ ಆರುಮೈಲಿ ದೂರ ವಿರುವ ನೆಲಮಂಗಲ ತಾಲ್ಲೂಕು ಕೆಂಪಾಪುರ ಅಗ್ರಹಾರದ ಪಟೇಲ ಬೈರೇ ಗೌಡರ ಮಕ್ಕಳು ನಾರಾಯಣಗೌಡರ ಹಿರಿಯ ಮಗಳು ಕೆಂಪಮ್ಮನನ್ನು ಕೊಟ್ಟು ತಂದೆಗೆ ಮದುವೆಯಾಯಿತು. ಮದುವೆಯಾಗಿ ಅತ್ತೆಯಮನೆಗೆ ಬಂದಾಗ ತವರುಮನೆಯ ಹೆಸರು ಬದಲಾವಣೆ ಹೊಂದಿತು. ಮನೆಯಲ್ಲಿ ಕೆಂಪಮ್ಮ ಎಂಬ ಹೆಸರಿನವರು. (ರಾಮಯ್ಯನವರ ತಂಗಿ) ಇದ್ದುದರಿಂದ ನಮ್ಮ ತಾಯಿಯ ಹೆಸರು ವೆಂಕಮ್ಮ ಎಂದಾಯಿತು. ಮನೆಮಕ್ಕಳು ನಾವೆ ಲ್ಲರೂ ತಾಯಿಯನ್ನು ಹೆಸರು ಹಿಡಿದೇ ಕೂಗುತ್ತ ಬಂದಿದೇವೆ. ಅಮ್ಮ ಎಂಬ ಸಂಬೋಧನೆ ನಮ್ಮ ಅಜ್ಜಿಗೆ (ತಂದೆಯ ತಾಯಿಗೆ) ಮಾತ್ರ ಮೀಸ ಲಾಗಿತ್ತು.

## ಒಕ್ಕಲಿಗರ ಸಂಘದ ಮುನ್ನಡೆ

ಮೈಸೂರು ದೇಶದ ಜನತೆಯ ಮುಖ್ಯ ಅಂಗವಾದ ಒಕ್ಕಲಿಗರಲ್ಲಿ ವಿದ್ಯಾಭ್ಯಾಸ ತಿಳಿವು ಹೆಚ್ಚುವಂತೆ ಮಾಡುವುದು, ವಿದ್ಯೆಕಲಿಯಬೇಕೆಂದು ಬರುವ ಒಕ್ಕಲು ಮಕ್ಕಳಿಗೆ ವಿದ್ಯಾಭ್ಯಾಸ ಸೌಕರ್ಯಗಳನ್ನು ಒದಗಿಸಿಕೊಡ ವುದು, ಬಡವಿದ್ಯಾರ್ಥಿಗಳಿಗೆ ಉಚಿತ ವಸತಿ ಏರ್ಪಾಡುಮಾಡಿಕೊಡುವುದು, ವ್ಯವಸಾಯದಲ್ಲಿ ನೂತನವಾದ ವಿಧಾನಗಳನ್ನು ರೈತರು ಬಳಕೆಗೆ ತಂದು ಶ್ರೇಯಸ್ಸು ಹೊಂದುವಂತೆ ಮಾಡುವುದು, ಒಕ್ಕಲಿಗ ಜನರ ಸಾಮಾಜಿಕ ದುಸ್ಥಿತಿಯನ್ನು ಉತ್ತಮಪಡಿಸಿ, ಎಲ್ಲರೂ ಸಂಘದ ಅಡಿಯಲ್ಲಿ ಒಗ್ಗಟ್ಟಾಗಿ ನಿಂತು ದೇಶದ ಉನ್ನತಿಗಾಗಿ ಕೆಲಸಮಾಡುವಂತೆ ಮಾಡುವುದು, ಇವೇ ಮುಂತಾದುವನ್ನು ಸಂಘದ ಮುಖ್ಯ ಉದ್ದೇಶಗಳನ್ನಾಗಿಟ್ಟುಕೊಂಡು ಕೆಲಸ ಮಾಡತೊಡಗಿದರು.

ಸಂಘದ ಸೇವೆಗೆ ಭಗವಂತನ ಸನ್ನಿಧಿಯಲ್ಲಿ ದೀಕ್ಷೆ ತೆಗೆದುಕೊಂಡ ರಾಮಯ್ಯನವರೂ ನನ್ನ ತಂದೆಯೂ ಸಂಘದ ಕೆಲಸದಲ್ಲಿಯೇ ಲೀನ ವಾಗಿ ಹೋದರು. ಇಬ್ಬರಿಗೂ ಮನೆಯ ಕಡೆ ಸಂಸಾರದ ಕಡೆ ಯೋಚ ನೆಯೇ ಇಲ್ಲದೆ ಹೋಯಿತು. ನಮ್ಮ ತಂದೆಯ ಸಂಸಾರ ಮೈಸೂರಿನಲ್ಲಿ ತ್ತೆಂದು ಹಿಂದೆಯೇ ತಿಳಿಸಿದೇನೆ. ತಂದೆಯ ಊಟ ಉಪಚಾರ ಎಲ್ಲ ರಾಮಯ್ಯನವರ ಮನೆಯಲ್ಲಿಯೇ ನಡೆಯುತಿತ್ತು. “ ರಾಮಯ್ಯನವರು ನನಗೆ ತಮ್ಮ ಮನೆಯಲ್ಲಿಯೇ ಭೋಜನಕ್ಕೆ ಏರ್ಪಡಿಸಿ, ನಾನು ಜೀವನ ಕ್ಕಾಗಿ ಕೊರಗಿ ಮರುಗದಂತೆ ಮಾಡಿ ಏಕಮನದಿಂದ ಸಂಘದ ಕೆಲಸವನ್ನು ನಡೆಸಲು ಅಣಿಮಾಡಿದರು ” ಎಂದು ರಾಮಯ್ಯನವರ ಗುಣಕಥನಮಾಡುತ್ತ ಒಂದು ಸಂದರ್ಭದಲ್ಲಿ ರಾಮಯ್ಯನವರಿಂದ ತಮಗಾದ ಉಪಕಾರವನ್ನು ಸ್ಮರಿಸಿಕೊಂಡಿದಾರೆ.

ರಾಮಯ್ಯನವರು ಉಪನ್ಯಾಸ ಮಾಡುತ್ತ ಊರೂರು ತಿರುಗುತಿದ್ದರು. ನಮ್ಮ ತಂದೆ ಮಾತ್ರ ಹಿಂದೆ ನಿಂತು ಉಪನ್ಯಾಸ ಬರೆದುಕೊಡುವುದರಲ್ಲಿಯೂ, ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆದು ಜನತೆ ಎಚ್ಚರಗೊಳ್ಳುವಂತೆ ಮಾಡು

ತ್ರಲೂ ಇದ್ದರು. ರಾಮಯ್ಯನವರು ಉತ್ಸವಮೂರ್ತಿಯಾಗಿ ಹೊರಗೆ ಸುತ್ತಾಡುತಿದ್ದರು. ನಮ್ಮ ತಂದೆ ಮೂಲವಿಗ್ರಹವಾಗಿ ಸಂಘದ ಒಳಗೇ ಇದ್ದರು. ರಾಮಯ್ಯನವರ ಪ್ರವಾಸ, ಅವರ ಸಿಂಹಧ್ವನಿ ದೇಶದ ಹಳ್ಳಿಗಳಲ್ಲೆಲ್ಲಾ ಮೊಳಗಿತು. ಕುಲಸ್ಥರಲ್ಲಿ ಹೇರಳವಾದ ನಂಬಿಕೆ ಹುಟ್ಟಿತು. ಅವರ ಸ್ಫೂರ್ತಿದಾಯಕವಾದ ಉಪನ್ಯಾಸಗಳನ್ನು ಕೇಳಿ ಮುಗ್ಧರಾದ ಹಳ್ಳಿಗರು ಇವರು ದೇವಾಂಶಸಂಭೂತರೆಂದೇ ತಿಳಿದರು. ಎಷ್ಟೋ ಜನ ಕಾಲಿಗೆ ಬೀಳಲು ಹೋದರು. ಒಕ್ಕಲಿಗ ಜನಾಂಗಕ್ಕೇ ಹೊಸ ಚೈತನ್ಯ ಬಂದಂತಾಯಿತು. ಒಕ್ಕಲಿಗರಲ್ಲಿ ಸ್ವಗೌರವ ಹೆಚ್ಚಿತು. 'ಗೌಡ' ಎಂದು ಕರೆಸಿಕೊಳ್ಳುವುದಕ್ಕೆ ನಾಚುತಿದ್ದವರು ಗೌಡರೆಂದೇ ಹೆಸರಿಟ್ಟುಕೊಳ್ಳಬೇಕು, ಗೌಡರೆಂದೇ ಕರೆಸಿಕೊಳ್ಳಬೇಕು ಎನ್ನುವಂತಾದರು. ರಾಮಯ್ಯನವರು ತಮ್ಮ ಸ್ವಂತ ಮಕ್ಕಳಿಗೆ ಮರುದೇವಗೌಡ, ಕಾಶೀವಿಶ್ವನಾಥಗೌಡ, ಆದಿನಾರಾಯಣಗೌಡ ಎಂದು ಹೆಸರಿಟ್ಟು ಮಾರ್ಗದರ್ಶಕರಾದರು.

ಎಲ್ಲೆಲ್ಲಿಯೂ ಪುಣ್ಯವಂತರಾದ ಒಕ್ಕಲಿಗ ಮಹಾಜನರು ಬಂದು ಧನಸಹಾಯ ಮಾಡತೊಡಗಿದರು. ಸ್ವಂತವಾಗಿ ಹಲವು ಮಹನೀಯರು ಹತ್ತಾರು ಹುಡುಗರಿಗೆ ತಮ್ಮ ಮನೆಗಳಲ್ಲೇ ಊಟಹಾಕಿ ವಸತಿಕಲ್ಪಿಸಿಕೊಟ್ಟು, ಒಕ್ಕಲಮಕ್ಕಳು ವಿದ್ಯಾವಂತರಾಗುವಂತೆ ನೋಡಿಕೊಂಡರು. ಬೆಂಗಳೂರಿನಲ್ಲಿ ವಿದ್ಯಾರ್ಥಿಮಂದಿರ ಕಟ್ಟುವುದಕ್ಕೆ ಕೇಳಿದ ಕೂಡಲೆ ಹಣ ಒದಗಿ ಬಂತು. ಶ್ರೀಯುತರುಗಳಾದ ಉರಿಗದ ಬೈಯಣ್ಣನವರು, ಅಲಸೂರು ಮಾರಪ್ಪನವರು, ಮುನಿಸ್ವಾಮಪ್ಪನವರು, ಬ್ಯಾರಿಸ್ಟರ್ ನಾಗಪ್ಪನವರು ಸಾವಿರಾರು ರೂಪಾಯಿಗಳನ್ನು ಕೊಡುಗೈಯಿಂದ ದಾನವಾಗಿ ಎರೆದರು. ತಾಲ್ಲೂಕುಗಳಲ್ಲಿ ಡಿಸ್ಟ್ರಿಕ್ಟುಗಳಲ್ಲಿ ನೆರೆಯುತ್ತಿದ್ದ ಮಹಾಸಭೆಗಳಲ್ಲಿಯೂ ಹಣ ವಿಶೇಷವಾಗಿ ದೊರೆತು ಸಂಘದ ಭವ್ಯ ಕಟ್ಟಡ ಮೇಲೇಳುವಂತಾಯಿತು.

ಒಕ್ಕಲಿಗರಲ್ಲಿ ಇಂಥ ನವಚೈತನ್ಯವನ್ನು ಬೀರಿದ ರಾಮಯ್ಯನವರು ತಮ್ಮ ಇಪ್ಪತ್ತೇಳನೆಯ ವಯಸಿನಲ್ಲಿಯೇ ಮಹಾರಾಜರನ್ನು ಸಂದರ್ಶಿಸಿ ಸಂಘದ ಸದುದ್ದೇಶಗಳನ್ನು ಬಿನ್ನವಿಸಿಕೊಂಡು ಅವರ ಕೃಪಾಶ್ರಯ ಸಂಘಕ್ಕೆ ದೊರೆಯುವಂತೆ ಮಾಡಬೇಕೆಂದು ಬೇಡಿಕೊಂಡರು. ಸಂಘ ಅದುವರೆಗೂ

ಮಾಡಿದ ಕೆಲಸವನ್ನು ಕಂಡು ಸುಪ್ರೀತರಾಗಿದ್ದ ಮಹಾರಾಜರು ಸಂಘ ಕೊಟ್ಟ ರಾಜಭಕ್ತಿಯುತವಾದ ಆಹ್ವಾನವನ್ನು ಮನ್ನಿಸಿ ಒಕ್ಕಲಿಗರ ದ್ವಿತೀಯ ಮಹಾಸಮ್ಮೇಳನಕ್ಕೆ ಚಿತ್ತೈಸಿ ಕೆಳಗೆ ಕಂಡಂತೆ ಅಪ್ಪಣೆಕೊಡಿಸಿದರು—

" ನಮ್ಮ ತಿಳಿವಳಿಕೆಗೆ ಬಂದಿರುವ ಮಟ್ಟಿಗೆ ಸಂಘದ ಉದ್ದೇಶಗಳು ಸಕಲ ವಿಧದಲ್ಲಿಯೂ ಪ್ರೋತ್ಸಾಹಾರ್ಹವಾಗಿವೆ. ನಮ್ಮ ಈ ಅಭಿಪ್ರಾಯ ವನ್ನು ವ್ಯಕ್ತಪಡಿಸಬೇಕೆಂಬ ಅಭಿಲಾಷೆಯಿಂದಲೆ ಈ ದಿವಸದಲ್ಲಿ ಈ ಸಮ್ಮೇಳ ನದ ಸಮಾರಂಭಮಾಡಬೇಕೆಂಬ ನಿಮ್ಮ ಆಹ್ವಾನ ಪತ್ರಿಕೆಯನ್ನು ಅಂಗೀ ಕರಿಸಿ ಈ ಸಂಘದ ಪ್ರೋಷಕರಾಗಿರಲು ಈಗ ಸಂತೋಷದೊಡನೆ ಸಮ್ಮತಿ ಯನ್ನು ಕೊಡುತ್ತೇವೆ.

" ನಿಮ್ಮ ಕಾರ್ಯೋದ್ಯಮಕ್ಕೆ ಅಪಾರವಾದ ಅವಕಾಶವು ನಿಮ್ಮ ಕೈಯಲ್ಲೇ ಸಿದ್ಧವಾಗಿದೆ. ಇದುವರೆವಿಗೂ ನಿಮ್ಮ ಸಂಗಡದವರು ಬರಿಯ ಮಾತುಗಳನ್ನಾಡದೆ ಕೆಲಸನಡೆಸುವರೆಂದು ಹೆಸರುಪಡೆದಿರುವುದರಿಂದ ನಿಮ್ಮ ಸಂಘಕ್ಕೆ ಸೇರಿದವರು ಕುಲಾಚಾರವನ್ನು ನಡೆಸಿಕೊಂಡು ಬರುವವ ರಾಗಿಯೂ, ಕಾರ್ಯತಃ ಕೆಲಸಮಾಡಿ ತೋರಿಸುವವರಾಗಿಯೂ ಇರುವರೆ ಹೊರತು ಹರಟೆಮಲ್ಲರಾಗಿ ಬಾಯಾಡಂಬರದಿಂದ ಇರುವುದಿಲ್ಲವೆಂದು ನಂಬಿ ದ್ದೇವೆ.

" ನಿಮ್ಮ ಸಂಘವು ಕಾರ್ಯಮಾಡುವುದರಲ್ಲಿಯೇ ನಿರತರಾಗಿರುವ ತನಕ ನಿಮ್ಮ ಸಂಗಡದ ಶ್ರೇಯಸ್ಸಿಗಾಗಿ ನಿಮ್ಮ ಸಂಘವು ತಿಳಿಸಲೆಳಿಸುವ ವಿಚಾರ ಗಳಿಗೆ ನಾವು ಸಹಾನುಭೂತಿಯಿಂದ ಕಿವಿಗೊಡುತ್ತೇವೆಂದೂ, ಸರಕಾರದಿಂದ ಯಥಾಯೋಗ್ಯವಾಗಿ ಕೊಡಬಹುದಾದ ಸಹಾಯವನ್ನು ಕೊಡುತ್ತೇವೆಂದೂ ನಿಮಗೆ ನಿರ್ಧರ ಹೇಳಬಲ್ಲೆವು "

ಹೀಗೆ ಸಂಘಕ್ಕೆ ರಾಜಾಶ್ರಯ ದೊರೆತುದರ ಫಲವಾಗಿ, ರಾಮಯ್ಯ ನವರ ಮತ್ತು ನಮ್ಮ ತಂದೆಯ ಅವಿಶ್ರಾಂತ ದುಡಿತದ ಫಲವಾಗಿ, ಸಂಘದ ಕಾರ್ಯ ಅತಿ ಯಶಸ್ವಿಯಾಗಿಯೇ ನಡೆಯುತ್ತಾ ಹೋಯಿತು. ಹುಟ್ಟಿಕೊಂಡ ಕೆಲವೇ ವರ್ಷಗಳಲ್ಲಿ ತನ್ನ ಉದ್ದೇಶಗಳನ್ನು ಬಹುಮಟ್ಟಿಗೆ

ಸಾಧಿಸಿಕೊಂಡಿತು. ದೇಶದ ಮುಖ್ಯ ಮುಖ್ಯ ನಗರಗಳಲ್ಲಿ ಒಕ್ಕಲಿಗರ ವಿದ್ಯಾರ್ಥಿಮಂದಿರಗಳು ಹುಟ್ಟಿಕೊಂಡವು. ಒಕ್ಕಲಿಗ ಜನತೆಯ ಸೇವೆಗಾಗಿ ಪ್ರತಿಭಾಶಾಲಿಗಳಾದ ಯುವಕರ ಗುಂಪೊಂದು ನಡುಕಟ್ಟಿ ನಿಂತಿತು. ಈಗಿನ ರಾಜಕೀಯ ರಂಗದಲ್ಲಿ ಹೆಸರುಗಳಿಸಿಕೊಂಡಿರುವ ಶ್ರೀ. ಹೆಚ್. ಸಿ. ದಾಸಪ್ಪನವರು, ಕೆ. ಚೆಂಗಲರಾಯ ರೆಡ್ಡಿಗಳು, ಹೆಚ್. ಬಿ. ಗುಂಡಪ್ಪ ಗೌಡರು, ಇವರು ಜನತಾಸೇವೆಯಲ್ಲಿ ಮೊದಲ ಪಾಠ ಕಲಿತುದು ಒಕ್ಕಲಿಗರ ಸಂಘದ ಮೊದಲ ಸಮ್ಮೇಳನಗಳಲ್ಲಿ.

ಪೋಲೀಸು ಇಲಾಖೆಯಲ್ಲಿ ಕೆಲಸಮಾಡುತ್ತಿದ್ದ ತಂದೆ ಸಂಬಳವಿಲ್ಲದ ರಜ ಪಡೆದು, ರಜದ ಕಾಲವನ್ನೆಲ್ಲ ಸಂಘದ ಸೇವೆಗೆ ಸಲ್ಲಿಸಿದರೆಂದು ಮೇಲೆ ತಿಳಿಸಿದೇನೆ. ಈರೀತಿ ಒಂದುವರ್ಷ ಎಂಟುತಿಂಗಳ ಕಾಲ ಅವರು ಸಂಘದ ಕೆಲಸದಲ್ಲೆ ಸಂಪೂರ್ಣವಾಗಿ ಬೆರೆತು ಹೋದರು.

## ಪ್ರೆಸ್ ಪ್ರೊಬೇಷನರಾಗಿ ನೇಮಕ

ಈ ಸುಮಾರಿಗೆ ಎಂದರೆ ೧೯೦೮ ರ ಜುಲೈ ಹೊತ್ತಿಗೆ ಗೆಜೆಟ್‌ನಲ್ಲಿ ಸರಕಾರದ ಮುದ್ರಣಶಾಲೆಗೆ ಇಬ್ಬರು ಉಮೇದುವಾರರು ಬೇಕೆಂದು ಪ್ರಕಟಣೆ ಹೊರಟಿತು. ಉಮೇದುವಾರರಾಗಬಯಸುವರು ಬಿ. ಎ. ಡಿಗ್ರಿ ಪಡೆದವ ರಾಗಿರಬೇಕೆಂತಲೂ, ಮುದ್ರಣಕಲೆಯಲ್ಲಿ ಜ್ಞಾನ ಸಂಪಾದಿಸುವ ಸಲುವಾಗಿ ಯಾವ ಕೆಲಸಕ್ಕೆ ನೇಮಿಸಿದರೂ ಅದನ್ನು ಮಾಡಲು ಸಿದ್ಧರಾಗಿರಬೇಕೆಂ ತಲೂ, ಅದೇ ಉದ್ದೇಶವಾಗಿಯೇ ಇಂಗ್ಲೆಂಡು ಅಥವಾ ಇನ್ನಾವ ಹೊರ ದೇಶಕ್ಕಾಗಲಿ ಹೋಗಿ ವಿದ್ಯಾರ್ಜನೆಮಾಡಲು ಸಿದ್ಧರಾಗಿರಬೇಕೆಂತಲೂ ಪ್ರಕ ಟಿಸಲಾಗಿತ್ತು.

ಸಂಘದ ಮುದ್ರಣಾಲಯದಲ್ಲಿ ಕೆಲಸಮಾಡುತಿದ್ದ ತಂದೆ ಈ ಪ್ರಕಟಣೆ ಯನ್ನು ನೋಡಿ ತಮ್ಮದೊಂದು ಅರ್ಜಿಯನ್ನು ಹಾಕಿಕೊಂಡರು. ಉಮೇದು ವಾರರನ್ನು ಚುನಾಯಿಸಲು ಅನುಕೂಲವಾಗುವಂತೆ ಒಂದು ಪರೀಕ್ಷೆ ಏರ್ಪಾ ಡಾಗಿತ್ತು. ಕೆಲಸಕ್ಕೆ ಅರ್ಜಿಹಾಕಿಕೊಂಡವರು ನಲವತ್ತೆರಡು ಮಂದಿ ಯಾದರೂ ಪರೀಕ್ಷೆಗೆ ಕೂಡಲು ಮೂವತ್ತೊಂದು ಮಂದಿಗೆ ಮಾತ್ರ ಅಪ್ಪಣೆ ದೊರೆಯಿತು. ವಾಸ್ತವವಾಗಿ ಪರೀಕ್ಷೆಗೆ ಕುಳಿತವರು ಇಪ್ಪತ್ತೇಳು ಮಂದಿ ಮಾತ್ರ.

ಪರೀಕ್ಷೆಯ ಫಲಿತಾಂಶವನ್ನು ಮುದ್ರಣಶಾಲೆಯ ಸೂಪರಿಂಟೆಂಡೆಂಟ ರಾದ ಏಟ್ಸ್‌ರವರು ಸರಕಾರಕ್ಕೆ ಕಳುಹಿಸಿಕೊಟ್ಟರು. ಮೊದಲ ಹತ್ತು ಸ್ಥಾನಗಳನ್ನು ಪಡೆದುಕೊಂಡ ಯುವಕರ ಹೆಸರನ್ನು ಮಾತ್ರ ಕಳುಹಿಸಿ ಕೊಟ್ಟು ಅವರಲ್ಲಿ ಯಾರಾದರೂ ಇಬ್ಬರನ್ನು ಚುನಾಯಿಸುವಂತೆ ಸರಕಾರ ವನ್ನು ಕೇಳಿಕೊಂಡರು. ಏಟ್ಸ್‌ರವರು ಸ್ವಲ್ಪ ಹಾಸ್ಯ ಪ್ರಕೃತಿಯವರಾದ ಕಾರಣ, ವಿದ್ಯಾರ್ಥಿಗಳು ಬರೆದುದರಲ್ಲಿ ಹಾಸ್ಯಾಸ್ಪದವಾದವುಗಳನ್ನು ಎತ್ತಿ ಆಗ ಸರ್ಕಾರದ ಕಾರ್ಯದರ್ಶಿಗಳಾದ ಕೆ. ಎಚ್. ಚಂದ್ರಶೇಖರಯ್ಯರವರಿಗೆ ಕಾಗದ ಬರೆದರು. ಅವುಗಳಲ್ಲಿ ಒಂದೆರಡನ್ನು ಮಾತ್ರ ಇಲ್ಲಿ ಕಾಣಿಸಿದೇನೆ—

Question 1 and 2 were answered fairly well better than I thought they would be. But Scott

is said to be the author of the " **Lady** of the Last **Minstral**" and the "Art of Midlothian"

Question 6 produced some wonderful results, for instance: a Secretary is one who has a belief in a particular thing and a Secretary is an assistant. One man says funeral means "funny" (real fun perhaps); another says R.I.P. means " Amen," while another says it stands for "Te-de-um". One candidate flatters the Government Press on its excellent work, while another says that a printer is no better than a cooly. One speaks of the news-papers giving us the latest of news from the other world and another refers to penny poets, novelists and newspapers. In fact the twenty seven papers are full of fresh information.

ಸರಕಾರದವರು, ಏಟ್ಸ್‌ರವರ ಪಟ್ಟಿಯಲ್ಲಿ ಮೊದಲ ಎರಡು ಸ್ಥಾನಗಳನ್ನು ಪಡೆದುಕೊಂಡಿದ್ದ ಬಿ ಶ್ರೀನಿವಾಸಯ್ಯಂಗಾರ್ರ‍್ಯರು ಮತ್ತು ನನ್ನ ತಂದೆ ಬಿ. ಪುಟ್ಟಯ್ಯನವರನ್ನು ಏಟ್ಸ್‌ರವರು ಚುನಾಯಿಸಬಹುದೆಂದೂ, ಒಂದುವೇಳೆ ಈ ಇಬ್ಬರು ಅವರಿಗೆ ಸರಿಯಾಗಿ ತೋರದೆ ಹೋದರೆ ಉಳಿದ ನಾಲ್ವರಾದ ಎಂ. ಜಿ. ಶ್ರೀನಿವಾಸರಾಯರು ಬಿ. ಕೆ. ವೆಂಕಟರಾಮಯ್ಯಂಗಾರ್ರ‍್ಯರು, ವಿ. ವೆಂಕಟಸುಬ್ಬಯ್ಯನವರು, ಎನ್. ಸೀತಾರಾಮಯ್ಯನವರು ಇವರುಗಳಲ್ಲಿ ಯಾರಾದರೂ ಇಬ್ಬರನ್ನು ಚುನಾಯಿಸಬೇಕೆಂದೂ ಹೇಳಿ ಏಟ್ಸ್‌ರವರಿಗೇ ಉಮೇದುವಾರರ ನೇಮಕದ ಜವಾಬುದಾರಿಯನ್ನು ವಹಿಸಿದರು.

ಶ್ರೀನಿವಾಸಯ್ಯಂಗಾರ್ರ‍್ಯರೂ ಪುಟ್ಟಯ್ಯನವರೂ ಎಲ್ಲ ರೀತಿಯಲ್ಲಿಯೂ ಕೆಲಸಕ್ಕೆ ಅರ್ಹರಾದವರಾಗಿ ಕಂಡುಬಂದುದರಿಂದ ಇವರಿಬ್ಬರನ್ನೂ ಕೆಲಸಕ್ಕೆ

ನೇಮಿಸಬೇಕೆಂದು ಸರಕಾರಕ್ಕೆ ಏಟ್ಸ್‌ರವರು ತಿಳಿಸಿದರು. ಅದರ ಫಲವಾಗಿ ೧೯೦೯ನೇ ಇಸವಿ ೮ನೇ ಫೆಬ್ರುವರಿ ಪ್ರೆಸ್ ಪ್ರೊಬೇಷನರಾಗಿ ತಂದೆಯು ನೇಮಕ ವಾಯಿತು. ಪ್ರೊಬೇಷನರಿ ಕಾಲದಲ್ಲಿ ಸೂಪರಿಂಟೆಂಡೆಂಟರು ನೇಮಿಸಬಹು ದಾದ ಎಲ್ಲ ಕೆಲಸಗಳನ್ನೂ ಮಾಡಬೇಕೆಂತಲೂ, ಅವರು ವಾರವಾರ ಹೇಳಿ ಕೊಡುವ ಪಾಠಗಳನ್ನು ಕಲಿತು ಮದರಾಸು ಸರ್ಕಾರ ಏರ್ಪಡಿಸಿರುವ ಮುದ್ರಣ ವಿಷಯಿಕವಾದ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕೆಂತಲೂ ಸರಕಾರದ ನಿರೂಪದಲ್ಲಿ ನಮೂದಿಸಿತ್ತು.

ಆರಿಸಲ್ಪಟ್ಟ ಇಬ್ಬರು ಉಮೇದುವಾರರೂ ಸರಕಾರದ ಆಜ್ಞೆಗೆ ಅನು ಸಾರವಾಗಿ ನಡೆದುಕೊಂಡು, ಕಲಿಯಬಹುದಾದದ್ದೆಲ್ಲವನ್ನೂ ಕಲಿತು ಮದ ರಾಸು ಸರಕಾರದವರು Compositors Work, ಮತ್ತು Proof Readers Work ಈ ವಿಷಯುಗಳಲ್ಲಿ ಏರ್ಪಡಿಸಿದ್ದ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿ ಪ್ರಶಸ್ತಿ ಪಡೆದುಕೊಂಡರು.

ಏಟ್ಸ್‌ರವರು, ನಮ್ಮ ತಂದೆಯನ್ನು ಪ್ರೊಬೇಷನರಿ ಕಾಲದ ಉದ್ದಕ್ಕೂ ಮತ್ತು ಆಮೇಲೆಯೂ ವಿಶೇಷ ಆದರದಿಂದ ನೋಡಿಕೊಂಡರು ಇಬ್ಬರಲ್ಲಿ ಮೊದಲಿಂದಲೂ ಪರಸ್ಪರ ಗೌರವ ವಿಶ್ವಾಸಗಳು ಬೆಳೆದುಕೊಂಡುವು. ನಮ್ಮ ತಂದೆಯನ್ನು ತನ್ನ ಅಧೀನದಲ್ಲಿರುವ ನೌಕರನಂತೆ ಅವರು ಕಾಣಲಿಲ್ಲ. ಜೊತೆಗಾರನೆಂದೇ ಸ್ನೇಹತೋರಿಸಿ ನಡೆಸಿಕೊಂಡರು. My dear friend Puttiah ಎಂದೇ ಸಂಬೋಧಿಸಿ ಕಾಗದ ಬರೆಯುತಿದ್ದರು. ಏಟ್ಸ್ ಅವರೊಬ್ಬರೇ ಅಲ್ಲದೆ ಅವರ ಹೆಂಡತಿ ಸಹ ಬಹು ವಿಶ್ವಾಸ ತೋರಿಸಿ ದರು. ನಮ್ಮ ಮನೆಯಲ್ಲಿ ಸಹ ಈ ಏಟ್ಸ್ ದಂಪತಿಗಳನ್ನು ಏಟ್ಸ್ ದೊರೆ ದೊರೆಸಾನಿ ಎಂದು ಹೇಳಿ ಗೌರವಿಸುತಿದ್ದರು. ಏಟ್ಸ್‌ರವರು ನಿವೃತ್ತರಾಗಿ ನೀಲಗಿರಿಯಲ್ಲಿ ವಾಸಮಾಡುತ್ತ ತಮ್ಮ ಜೀವನಯಾತ್ರೆ ಮುಗಿಸುವವರೆಗೂ ತಂದೆಗೂ ಅವರಿಗೂ ಇದ್ದ ಬಾಂಧವ್ಯ ತಪ್ಪಲಿಲ್ಲ. ಪತ್ರವ್ಯವಹಾರ ನಡೆ ಯುತ್ತಲೆ ಇತ್ತು. ಸಂದರ್ಭ ಒದಗಿದಾಗ ಈ ಪತ್ರಗಳಲ್ಲಿನ ಸಾರಾಂಶವನ್ನು ತಿಳಿಸುತ್ತ ಹೋಗುತ್ತೇನೆ. ಏಟ್ಸ್‌ರವರು ಈ ಲೋಕದಿಂದ ಮರೆಯಾದ ಮೇಲೂ ಅವರ ಹೆಂಡತಿ ತಮ್ಮ ಹಿಂದಿನ ಗೆಳೆಯನನ್ನು ಮರೆಯಲಿಲ್ಲ.

ಪ್ರತಿ ಕ್ರಿಸ್‌ಮಸ್ ಹಬ್ಬದಲ್ಲೂ ಅವರ ನೆನಪು ಆಗುತಲೇ ಇತ್ತು. ತನ್ನ ಜೀವನವನ್ನು ಬೆಳಕಿನಿಂದ ತುಂಬಿಸಿದ ಈ ದಂಪತಿಗಳನ್ನು ತಂದೆಯೂ ಕೊನೆಗಾಲದವರೆಗೂ ಮರೆಯಲಿಲ್ಲ. ಪುಣ್ಯಾತ್ಮರಾದ ಈ ಏಟ್ಸ್ ದಂಪತಿಗಳಿಂದ ನಮ್ಮ ತಂದೆಗೆ, ಆ ಮೂಲಕ ನಮ್ಮ ಮನೆತನಕ್ಕೆ ಆದ ಉಪಕಾರವನ್ನು ನಾವು ಎಂದಿಗೂ ಮರೆಯುವಂತಿಲ್ಲ.

# ರಾಮಕೃಷ್ಣ.

೧೯೧೦ನೆ ನವೆಂಬರು ತಿಂಗಳು ಬಲಿಪಾಡ್ಯಮಿ ದಿನ ತಂದೆಯ ಮೊದಲ ಮಗು ಹುಟ್ಟಿತು. ಕಷ್ಟದ ದಿನಗಳೆಲ್ಲ ಕಳೆದು ಮುಂದಿನ ಸುಖದ ಬರವನ್ನೆ ಸೂಚಿಸುವಂತೆ ಹುಟ್ಟಿ ಬಂದ ಈ ಮಗುವನ್ನು ಕಂಡು ಮನೆಯವರೆಲ್ಲ ಹಿಗ್ಗಿ ದರು. ಅಜ್ಜ ಅಜ್ಜಿಯರಿಗಂತೂ ಮಗುವನ್ನು ಕಂಡರೆ ಪ್ರಾಣ. ಸೋದ ರತ್ತೆಯರು ಮಗುವನ್ನ ಕೆಳಗೇ ಇಳಿಸದಾದರು. ದಿನಕ್ಕೊಂದು ಮಗುವಿಗೆ ಅಲಂಕಾರ ಮಾಡಿ ಹಿರಿಹಿಗ್ಗುವರು. ಮನೆಯವರ ನೆರೆಯುವರ ಕಣ್ಣಬೆಳ ಕಾಗಿ, ಮುದ್ದಿನ ಕಂದನಾಗಿ ಮಗು ಚಕ್ರವರ್ತಿಯಂತೆ ತೊಳಗಿ ಬೆಳಗಿತು.

ಆ ಕಾಲ ಶ್ರೀರಾಮಕೃಷ್ಣ ಪರಮಹಂಸರ ಉಪದೇಶಗಳು ಬಹುಜನರ ಮನ್ನಣೆಯನ್ನು ಪಡೆದ ಕಾಲ. ವಿವೇಕಾನಂದರ ವೀರವಾಣಿ ವಿದ್ಯಾವಂತ ಯುವಕರನೇಕರ ಮನಸನ್ನು ಸೂರೆಗೊಂಡ ಕಾಲ. ಬೆಂಗಳೂರಿನಲ್ಲಿಯೂ ರಾಮಕೃಷ್ಣ ಮಠ ಒಂದು ಆವೇಳೆಗೆ ಸ್ಥಾಪಿತವಾಗಿತ್ತು. ಸರಕಾರದಲ್ಲಿ ಸಮಾಜದಲ್ಲಿ ದೊಡ್ಡ ಪದವಿಗಳನ್ನಲಂಕರಿಸಿದ್ದ ಮಹನೀಯರು ಮಠದ ಭಕ್ತಮಂಡಲಿಯಲ್ಲಿ ಸೇರಿದ್ದರು. ಬಹು ವಿಜೃಂಭಣೆಯಿಂದ ರಾಮಕೃಷ್ಣ ಜಯಂತಿ, ವಿವೇಕಾನಂದ ಜಯಂತಿಗಳನ್ನು ಆಚರಿಸುತಿದ್ದರು. ನಮ್ಮ ತಂದೆ ಸಹ ಪರಮಹಂಸರನ್ನು ಆರಾಧ್ಯದೈವವಂತೆ ಭಾವಿಸಿದ್ದರು. ಮನೆ ಯಲ್ಲಿ ಏನು ವಿಶೇಷವಾದರೂ, ಮನೆಯವರನ್ನೆಲ್ಲ ಮಠಕ್ಕೆ ಕರೆದುಕೊಂಡು ಹೋಗಿ ಹಣ್ಣು ಕಾಯಿ ಒಡೆಸಿ ಪರಮಹಂಸರ ಮೂರ್ತಿಗೆ ಮಣಿದು ಬರುತಿದ್ದರು.

ಹುಟ್ಟಿದ ಮಗುವನ್ನು ಸಂಪ್ರದಾಯದಂತೆ ಮಠಕ್ಕೆ ತೆಗೆದುಕೊಂಡು ಹೋಗಿ ಬಂದರು. ಆಗತಾನೆ ಪರಮಹಂಸರ ಮಡದಿ ಶ್ರೀ ಶಾರದಾಮಣಿ ದೇವಿಯವರು ಬೆಂಗಳೂರಿಗೆ ಆಗಮಿಸಿದ್ದರು. ಹೊಸದಾಗಿ ಹುಟ್ಟಿದ ಕಂದ ನನ್ನು ತಂದೆ ಅವರ ಮಡಲಲ್ಲಿ ಹಾಕಿ ಹರಸುವಂತೆ ಬೇಡಿಕೊಂಡರು. ಆ ಸಂದರ್ಭದ ಜ್ಞಾಪಕವಾಗಿ ಮಗುವಿಗೆ ರಾಮಕೃಷ್ಣ ಎಂದು ಹೆಸರಿಟ್ಟರು. ಅಲ್ಲಿಂದೀಚೆಗೆ ಹುಟ್ಟಿದ ಮಕ್ಕಳೆಲ್ಲರಿಗೂ ಕೃಷ್ಣನಾಮ ಮೊದಲಲ್ಲೊ ಇಲ್ಲವೆ

ಕೊನೆಯಲ್ಲೂ ಇದ್ದೇ ಇದೆ. ರಾಮಕೃಷ್ಣ, ಗೋಪಾಲಕೃಷ್ಣ, ಬಾಲಕೃಷ್ಣ, ಕೃಷ್ಣಮೂರ್ತಿ, ಅನಂತಕೃಷ್ಣ ಇವು ನನ್ನ ಅಣ್ಣತಮ್ಮಂದಿರ ಹೆಸರುಗಳು. ನಮ್ಮ ಮನೆಯಲ್ಲಿ ಗೆಲುವಿನಿಂದ ಓಡಿಯಾಡುತ್ತಿದ್ದ ಕೃಷ್ಣರ ಹಿಂಡನ್ನು ಕಂಡು, ಮನೆಯ ನಾಲ್ಕು ಗೋಡೆಗಳಿಗೂ ಅಲಂಕಾರಕ್ಕೆಂದು ತಗಲಿಹಾಕಿದ್ದ ಕೃಷ್ಣನ ಬಾಲಲೀಲೆಯ ಚಿತ್ರಗಳನ್ನು ನೋಡಿ ನಮ್ಮ ತಂದೆಯ ಸ್ನೇಹಿತರಾದ ಸರಳಕವಿಸೂರಿ ರಾಜಗೋಪಾಲ ಚಕ್ರವರ್ತಿಯವರು ಈ ಮನೆಯ ಮೇಲೆ ಕೃಷ್ಣನ ಕೃಪೆ ಬಹುವಾಗಿ ಇದೆ. ಈ ಮನೆಗೆ 'ಕೃಷ್ಣಕೃಪಾ' ಎಂದು ಹೆಸರಿಡುವುದು ಸೂಕ್ತವಾಗಿದೆ ಎಂದರು. ಅಂದಿನಿಂದ ನಮ್ಮ ಮನೆಗೆ 'ಕೃಷ್ಣಕೃಪಾ' ಎಂದೇ ಹೆಸರಾಯಿತು. ಆ ಕೃಪೆಯೇ ಇದುವರೆಗೂ ನಮ್ಮ ಮನೆತನವನ್ನು ಕಾಯುತ್ತಾ ಬಂದಿದೆ.

ಮುದ್ರಣಾಲಯದಲ್ಲಿ ಪ್ರೊಬೇಷನರಾಗಿ ಕಳೆಯಬೇಕಾಗಿದ್ದ ಮೂರು ವರ್ಷಕಾಲ ಕಳೆಯಿತು. ಮುದ್ರಣ ವಿದ್ಯೆಯಲ್ಲಿ ತಂದೆ ಒಳ್ಳೆಯ ಜ್ಞಾನ ಗಳಿಸಿಕೊಂಡರು. ಇರುವ ಪರೀಕ್ಷೆಗಳಲ್ಲಿ ತೇರ್ಗಡೆಹೊಂದಿ ಏಟ್ಸ್‌ರವರ ಅಚ್ಚುಮೆಚ್ಚಿನವರಾದರು. ಇದುವರೆಗೆ ಮೌನಿಯಾಗಿ ಹಿಂದೆಯೇ ಇದ್ದುಕೊಂಡು ಕಾಲತಳ್ಳುತಿದ್ದವರು, ಏಟ್ಸ್‌ರವರ ಪ್ರೋತ್ಸಾಹದಿಂದಲೊ ಏನೊ ಮುಂದೆ ಬಂದು ಅಲ್ಲಲ್ಲಿ ಉಪನ್ಯಾಸ ಕೊಡಲು ಆರಂಭಿಸಿದರು. ಪತ್ರಿಕೆಗಳಲ್ಲಿ ಲೇಖನ ಬರೆಯಲು ತೊಡಗಿದರು. ಒಕ್ಕಲಿಗರ ಸಂಘಕ್ಕೆ ಸಲ್ಲಿಸುತಿದ್ದ ಸೇವೆಯೂ ತಡೆಯಿಲ್ಲದಂತೆ ಸಾಗುತ್ತಲೆ ಇತ್ತು. ಬೆಂಗಳೂರು ಪ್ರೆಸ್ಸಿನ ಸೂಪರಿಂಟೆಂಡೆಂಟರಾಗಿ ಬಹುಕಾಲವಿದ್ದು ಹೆಸರುಗಳಿಸಿದ ಶ್ರೀ. ಟಿ. ಸುಬ್ರಹ್ಮಣ್ಯ ಅಯ್ಯರವರು ಆಗ (೧೯೦೯ ರಲ್ಲಿ) ಒಕ್ಕಲಿಗರ ಪ್ರೆಸ್ಸಿನ ಮ್ಯಾನೇಜರಾಗಿದ್ದರು.

ಸಂಘಕ್ಕಾಗಿ ಅಗಾಧವಾದ ಕಟ್ಟಡ ಮಾರಪ್ಪ ಮತ್ತು ಮುನಿಸ್ವಾಮಪ್ಪನವರ ಸಹಾಯದಿಂದ ಮೇಲೇಳುತಿತ್ತು. ಮುದ್ರಾಲಯ ಸ್ವಂತವಾದ ಮನೆ ಇಲ್ಲದೆ ಅರಳೇಪೇಟೆಯ ಬಾಡಿಗೆಮನೆಯೊಂದರಲ್ಲಿ ಸ್ಥಾಪಿತವಾಗಿತ್ತು. ಒಕ್ಕಲಿಗರ ವಿದ್ಯಾರ್ಥಿಗಳಿಗಾಗಿ ೧೯೦೯ ರಲ್ಲಿ ಪ್ರಾರಂಭವಾದ ವಿದ್ಯಾರ್ಥಿನಿಲಯ ಮುದ್ರಾಲಯದ ಒಂದು ಭಾಗದಲ್ಲಿ ಸೇರಿಕೊಂಡಿತ್ತು. ಮೊದಲಿಗೆ

ಇದ್ದ ಹುಡುಗರು ಐದುಮಂದಿ ಮಾತ್ರ. ೧೯೧೧ ರಲ್ಲಿ ಈ ಸಂಖ್ಯೆ ಹತ್ತಕ್ಕೆ ಏರಿತು. ಸ್ಥಳಾನುಕೂಲವಿಲ್ಲದೆ ಹೋದುದರಿಂದ ಹೆಚ್ಚುಮಂದಿ ವಿದ್ಯಾರ್ಥಿಗಳನ್ನು ಸೇರಿಸಿಕೊಳ್ಳಲು ಅನುಕೂಲವಿರಲಿಲ್ಲ. ಮುದ್ರಾಲಯದಲ್ಲಿ ಕೆರಪಾಗಿ ಇದ್ದಷ್ಟು ರೂಮುಗಳನ್ನು ವಿದ್ಯಾರ್ಥಿಗಳಿಗೆ ಕೊಡಲಾಯಿತು. ತೀರ ಬಡವರಾದ ವಿದ್ಯಾರ್ಥಿಗಳಿಗೆ ಮುದ್ರಾಲಯದಿಂದ ಬಂದ ವರಮಾನದಿಂದ ಸಹಾಯ ಕೊಡಲಾಗುತಿತ್ತು. ನಿಲಯದ ವಿದ್ಯಾರ್ಥಿಗಳು ತಮ್ಮಲ್ಲೆ ಒಂದು ಸಂಘವನ್ನು ಸ್ಥಾಪಿಸಿಕೊಂಡು, ಹಿರಿಯರನ್ನು ಆಗಾಗ ಕರೆಸಿಕೊಂಡು ಅವರ ಉಪದೇಶವಚನಗಳನ್ನು ಕಿವಿಯಲ್ಲಿ ಹಾಕಿಕೊಳ್ಳುತಿದ್ದರು.

# ಎರಡು ಉಪನ್ಯಾಸಗಳು

ತಂದೆ ಇಂಗ್ಲೆಂಡಿಗೆ ಹೋಗುವುದಕ್ಕೆ ಸ್ವಲ್ಪ ಮುಂಚೆ, ಎಂದರೆ ೧೯೧೨ರ ಜನವರಿಯಲ್ಲಿ ಎರಡು ಉಪನ್ಯಾಸಗಳನ್ನು ಕೊಟ್ಟರು. ಎರಡೂ ಒಕ್ಕಲಿಗರ ಏಳಿಗೆಗೆ ಸಂಬಂಧಪಟ್ಟವು. ಆ ವರ್ಷ ಹಾಸನದಲ್ಲಿ ನಡೆದ ಒಕ್ಕಲಿಗರ ಮಹಾಸಭೆಗೆ ಬಂದೆಲ್ಲ ಮಹನೀಯರನ್ನು ಸ್ವಾಗತಿಸುವ ಭಾಷಣ ಅವರು ಕೊಟ್ಟ ಮೊದಲ ಉಪನ್ಯಾಸ. ಈ ಉಪನ್ಯಾಸದಲ್ಲಿ ರೂಢಿಗನು ಸಾರವಾಗಿ ಹೇಳಿದ ಸ್ವಾಗತ ವಿಚಾರ ಒಂದೇ ಅಲ್ಲದೆ ಸಂಘ ಮುಂದೆ ಮಾಡ ಬೇಕಾದ ಕಾರ್ಯದ ವಿಸ್ತಾರ ವಿವರಣೆ ಕೂಡ ಇತ್ತು. ಅದರ ಸಾರಾಂಶವನ್ನು ಇಲ್ಲಿ ಕೊಟ್ಟಿದೇನೆ.

" ನಮ್ಮ ಜನರಲ್ಲಿ ಹಣವಿದೆ, ಆದರೆ ಅದು ಹೊರಗೆ ಬರವೊಲ್ಲದು ; ನಮ್ಮವರಲ್ಲಿ ಬುದ್ಧಿ ಇದೆ, ಸರಿಯಾದ ದಾರಿಯಲ್ಲಿ ಆ ಬುದ್ಧಿ ಹರಿಯು ಲೊಲ್ಲದು ; ಜನರಲ್ಲಿ ಒಳ್ಳೆಯತನವಿದೆ, ಅದು ಮಿಕ್ಕವರಿಗೆ ಗೋಚರವಾಗು ವಂತೆ ಕಾಣಲೊಲ್ಲದು. ಇಂಥ ಮಹಾಸಭೆಗಳಲ್ಲಿ ಜನರನ್ನು ಸೇರಿಸಿ ಅವರ ಉತ್ಸಾಹ ಹುಮ್ಮಸುಗಳನ್ನು ಹೆಚ್ಚುಮಾಡುವುದೊಂದೇ ದಾರಿ.

" ಸಂಘವನ್ನು ಸ್ಥಾಪಿಸಿ ನಮ್ಮವರ ಹಿತಕ್ಕಾಗಿ ಹೊಡೆದಾಡುವುದನ್ನು ಕಂಡವರು ಕೆಲವರು ನಾವು ಪರಮತ ದ್ವೇಷವನ್ನು ಹರಡುತಿದ್ದೇವೆಂದು ದೂರುತ್ತಾರೆ. ಇಂಥ ಆರೋಪಣೆ ತೀರ ಅನ್ಯಾಯ. ನಮ್ಮ ಜನ ಬುದ್ಧಿ ವಂತರಾಗಿ ಏಳಿಗೆ ಹೊಂದಿದ ಮಾತ್ರಕ್ಕೆ ಅವರ ಬುದ್ಧಿ ಸಂಕುಚಿತವಾಗುವು ದಿಲ್ಲ, ವಕ್ರವಾಗುವುದಿಲ್ಲ ವಿದ್ಯೆ ಮನಸಿನ ಕತ್ತಲೆಯನ್ನು ಹೋಗಲಾಡಿ ಸುತ್ತದೆ; ನಡೆನುಡಿಯನ್ನು ವಿಶಾಲಗೊಳಿಸುತ್ತದೆ. ವಿದ್ಯಾಭ್ಯಾಸ ಪಡೆ ದವನು ಸಮಾಜದ ಒಂದು ರತ್ನವಾಗಿ ಪ್ರಕಾಶಿಸುತ್ತಾನೆ. ಅಯೋಗ್ಯವಾದ ಮೂಢನಂಬಿಕೆ ಒಣಜಂಭ ಅಸಹ್ಯ ಅಸಹನೆ ಇವುಗಳು ವಿದ್ಯಾಭ್ಯಾಸ ಹೊಂದಿದವನ ಲಕ್ಷಣಗಳಲ್ಲ.

" ತೀರ ಹಿಂದುಳಿದಂಥ ಕೋಮಿನಲ್ಲಿ ನಾವು ಹುಟ್ಟಿ ಬೆಳೆದಿದ್ದೇವೆ. ನಮ್ಮವರ ದುಸ್ಥಿತಿ ನಮ್ಮ ಅಂತಃಕರಣವನ್ನು ಕಲಕುತ್ತದೆ. ಅವರಿಗೆ

ಒಳ್ಳೆಯದನ್ನು ಮಾಡಬಯಸುತ್ತದೆ. ಇಂಥ ಉದ್ದೇಶವಿಟ್ಟುಕೊಂಡು ಕೆಲಸಮಾಡುವವರ ಉತ್ಸಾಹದ ಮೇಲೆ ತಣ್ಣೀರೆರಚುವುದು ಒಳ್ಳೆಯದೆ ? ನಮ್ಮ ಹುಟ್ಟಿಗೆ ಕಾರಣರಾದ ಹಿರಿಯರನ್ನು ಹೊರದೂಡಿ ಪರರ ತಂದೆತಾಯಿಗಳನ್ನು ಆರೈಕೆಮಾಡಲು ಸಾಧ್ಯವೆ ?

" ಹಗಲು ರಾತ್ರಿ ದುಡಿದು ನಮಗೆ ಉಣಿವನ್ನು ಸಂಪಾದಿಸಿಕೊಡುವ ಈ ಜನರ ಸ್ಥಿತಿಯನ್ನು ನೋಡಬಾರದೆ ? ಎಷ್ಟೇ ಸೊಗಸಾದ ಬೆಳೆ ಬೆಳೆದರೂ ತಾವುಮಾತ್ರ ಒಣರೊಟ್ಟಿಯನ್ನು ಕಡಿದು ಜೀವಿಸುವುದನ್ನು ನೋಡುವುದಿಲ್ಲವೆ. ಅವರ ದೀನಸ್ಥಿತಿಯನ್ನು ನೋಡಿಯೂ ಅವರಿಗೆ ಸಹಾಯ ಮಾಡುವ ಮನಸು ನಮಗೆ ಇಲ್ಲದೆ ಹೋಗುವುದೆ ? ಇವರ ದೀನಸ್ಥಿತಿಯನ್ನು ನೋಡಿ ನಾವು ಕೈಕಟ್ಟಿ ಕುಳಿತಿರಲು ಸಾಧ್ಯವೆ ?............ಮಹನೀಯರೆ! ಇವರಿಗೆ ಸಹಾಯಮಾಡಿ ; ತಮ್ಮ ಕೈಲಾದುದನ್ನು ಮಾಡಿ ; ಅವರಲ್ಲಿ ಸಹಾನುಭೂತಿಯುಳ್ಳವರಾಗಿ ; ಅವರನ್ನು ಕರುಣೆಯಿಂದ ನಡೆಸಿಕೊಳ್ಳಿ.

" ಒಕ್ಕಲಿಗರಿಗೆ ವಿದ್ಯಾಭ್ಯಾಸ ಒಂದೇ ಈಗ ಬೇಕಾಗಿರುವುದು. ಅದಕ್ಕಿಂತ ಹೆಚ್ಚಿನದು ಬೇಡ. ಅದಕ್ಕಿಂತ ಕಡಿಮೆಯದು ಬೇಡ. ಅವರಿಗೆ ವಿದ್ಯಾಭ್ಯಾಸ ಒಂದನ್ನು ದೊರಕಿಸಿಕೊಡಿ. ಅವರಿಗೆ ಇಷ್ಟುಮಾತ್ರ ಸಹಾಯ ಮಾಡಬಲ್ಲಿರಾ ? ಬೆಂಗಳೂರಿನ ರಾತ್ರಿ ಪಾಠಶಾಲೆಯೊಂದರಲ್ಲಿ ಪಾಠಹೇಳುವ ಸುಯೋಗ ನನಗೆ ಲಭಿಸಿದೆ. ವಿದ್ಯೆಬಲ್ಲವರಾದ ನಾವು ಎಷ್ಟೊಂದು ಉಪಕಾರ ಮಾಡಲು ಸಾಧ್ಯ ಎನ್ನುವುದನ್ನು ಕಂಡು ನನಗೆ ಬಹಳ ಆಶ್ಚರ್ಯವಾಯಿತು. ತಮ್ಮ ಹೊಟ್ಟೆಯ ಪಾಡಿಗಾಗಿ ಹಗಲೆಲ್ಲ ದುಡಿಯುವ ತರುಣರು ರಾತ್ರಿಯ ಹೊತ್ತು ಶಾಲೆಗೆ ಸೇರಬೇಕೆಂದು ಹಿಂಡುಹಿಂಡಾಗಿ ಬರುತ್ತಾರೆ. ಆದರೆ ಅಷ್ಟೆಲ್ಲ ಜನಕ್ಕೆ ಪಾಠ ಹೇಳಿಕೊಡಲು ಏರ್ಪಾಡು ಮಾಡುವುದಕ್ಕೆ ನಮ್ಮಲ್ಲಿ ಕೆಲಸಗಾರರಿಲ್ಲ. ರಾತ್ರಿ ಶಾಲೆಗಳನ್ನು ಹಳ್ಳಿಗಳಲ್ಲಿ ಪಟ್ಟಣಗಳಲ್ಲಿ ತೆರೆದು ಒಳ್ಳೆಯ ಕೆಲಸಮಾಡುವುದಕ್ಕೆ ಕಾರ್ಯಕ್ಷೇತ್ರ ವಿಶಾಲವಾಗಿದೆ. ಪ್ರತಿಯೊಬ್ಬ ವಿದ್ಯಾವಂತನೂ ದಿನ ಒಂದು ಅಥವಾ ಎರಡು ಗಂಟೆಯ ಹೊತ್ತನ್ನು ಕೊಟ್ಟರೆ ಎಷ್ಟೋ ಕೆಲಸಮಾಡಬಹುದು. ಬರಿಯಮಾತಿನಿಂದ ತಲೆಮಾರಿನಲ್ಲಿ ಸಾಧಿಸಬಹುದಾದ್ದನ್ನು ಕೂಡಲೆ ಸಾಧಿಸಬಹುದು.

" ತಮ್ಮ ಒಪ್ಪಿಗೆಗಾಗಿ ಯಾವುದು ಉತ್ತಮವೋ, ಯಾವುದರಿಂದ ಅತ್ಯಂತ ಸಹಾಯವಾಗುವುದೋ, ಅಂಥ ಕೆಲಸ ಒಂದನ್ನು—ರಾತ್ರಿಯ ಹೊತ್ತು ನಮ್ಮ ಜನಕ್ಕೆ ವಿದ್ಯೆಕಲಿಸುವ ಕರ್ತವ್ಯವನ್ನು ನಿಮ್ಮಗಳ ಮುಂದಿಟ್ಟಿದ್ದೇನೆ. ದಯವಿಟ್ಟು ಈ ವಿಷಯವಾಗಿ ಯೋಚನೆಮಾಡಿ. ನನಗಿಂತ ಹಿರಿಯರಾದವರ ಮುಂದೆ ನನ್ನ ಭಾವನೆಗಳನ್ನು ಮುಂದಿಟ್ಟ ನನ್ನ ತಾರುಣ್ಯದ ಉತ್ಸಾಹವನ್ನು ಕ್ಷಮಿಸಿಬಿಡಿ. ನನ್ನ ವಯಸ್ಸನ್ನಾಗಲಿ, ಕುಲವನ್ನಾಗಲಿ ಗಣನೆಗೆ ತಂದುಕೊಳ್ಳದೆ ಯಾವ ಉದ್ದೇಶದಿಂದ ಈ ಮಾತುಗಳನ್ನಾಡಿದ್ದೇನೊ ಅದನ್ನು ಮಾತ್ರ ಗಮನಿಸಿ. ನನ್ನ ಅಭಿಪ್ರಾಯವನ್ನೆ ನೀವು ಒಪ್ಪುವುದಾದರೆ—ನೀವು ಒಪ್ಪದಿರುವುದಕ್ಕಾಗುವುದಿಲ್ಲವೆಂದೇ ನನ್ನ ನಂಬಿಕೆ—ಇನ್ನು ಹೆಚ್ಚುಕಾಲ ಕಳೆಯುವುದು ಬೇಡ. ಇತರರ ಹಿತಕ್ಕಾಗಿ ಕೆಲಸಮಾಡೋಣ, ನಮ್ಮನ್ನು ಅಂಥ ಕೆಲಸಕ್ಕೆ ವಿನಿಯೋಗಿಸಿಕೊಳ್ಳೋಣ. ಕೆಲಸವೇ ನಮ್ಮ ಉದ್ಧಾರ..........."

ಸೇವಾವೃತ್ತಿ ಎನ್ನುವುದು ತಂದೆಗೆ ಹುಟ್ಟುಗುಣವಾಗಿ ಬೆಳೆದು ಬಂದಂತೆ ಕಾಣುತ್ತದೆ. ಅವರ ಮನಸ್ಸಿನಲ್ಲಿ ಈ ಬಗೆಯ ಭಾವನೆಗಳು ಯಾವರೀತಿ ಬೇರೂರಿದ್ದವೆನ್ನುವುದಕ್ಕೆ ಮೇಲಿನ ಉಪನ್ಯಾಸ ಸಾಕ್ಷಿಯಾದೀತು.

ಹಾಸನದ ಸಮ್ಮೇಳನದಲ್ಲಿ ಮಾಡಿದ ಸ್ವಾಗತಭಾಷಣ ಒಂದೇ ಅಲ್ಲದೆ ಒಕ್ಕಲಿಗರ ವಿದ್ಯಾರ್ಥಿಗಳ ಮೊದಲನೆಯ ಸಮ್ಮೇಳನದ ಅಧ್ಯಕ್ಷಭಾಷಣವೂ ತಂದೆಯದೇ ಆಗಿತ್ತು. ಈ ಎರಡನೆಯ ಉಪನ್ಯಾಸದಲ್ಲಿ ಒಕ್ಕಲಿಗ ಯುವಕರು ಮಾಡಬೇಕಾದ ಕೆಲಸವನ್ನು ವಿವರಿಸಿದರು—

" ಯುವಕರೆ, ನಿಮ್ಮ ಕುಲಜರು ಎಷ್ಟು ಹೀನಸ್ಥಿತಿಯಲ್ಲಿದಾರೆನ್ನುವುದನ್ನೂ ಅವರನ್ನು ಅಭಿವೃದ್ಧಿಗೆ ತರುವುದಕ್ಕೆ ಕೈಲಾಗುವುದನ್ನೆಲ್ಲ ಮಾಡಬೇಕೆನ್ನುವುದನ್ನೂ ನೀವು ಗಮನಕ್ಕೆ ತಂದುಕೊಂಡಿದ್ದೀರಿ. ಬರಿಯ ಗಣನೆಗೆ ತಂದುಕೊಂಡರೆ ಮಾತ್ರ ಸಾಲದು. ನಮ್ಮ ಜನರಿಗಾಗಿ, ನಮ್ಮ ಹೀನದೆಸೆಗಾಗಿ ಅನುತಾಪ ಪಡಬೇಕು. ಜನರಲ್ಲಿರುವ ಅಗಾಧವಾದ ಮೌಢ್ಯವನ್ನು ಕಂಡು ಇದನ್ನು ನಿವಾರಿಸಲು ನಮ್ಮಿಂದ ಅಸಾಧ್ಯ ಎಂದು

ನೀವು ತಿಳಿಯಬಹುದು. ಅಂಥ ಸಂದೇಹ ನಿಮ್ಮ ಉತ್ಸಾಹವನ್ನು ಕಡಿಮೆ ಮಾಡದಿರಲಿ. ನಿಮ್ಮ ಕೈಲಾದಷ್ಟನ್ನೆ ಮಾಡಿ ಮನಸಿಗೆ ನೆಮ್ಮದಿ ತಂದು ಕೊಳ್ಳಿ. ನಿಮ್ಮ ಮನೆಯಿಂದಲೆ ಕೆಲಸವನ್ನು ಮೊದಲುಮಾಡಿ. ವಿದ್ಯಾವಂತನಾದ ಒಬ್ಬೊಬ್ಬನು ತನ್ನ ಮನೆತನವನ್ನು ಯಾವ ರೀತಿ ಮೇಲೆತ್ತಿ ತಿದ್ದಿ ತನ್ನ ಹಳ್ಳಿಗೇ ಆದರ್ಶವನ್ನಾಗಿ ಮಾಡಬಹುದು ಎನ್ನುವುದನ್ನು ತೋರಿಸಿ ಕೊಡಿ. ಹಳ್ಳಿಯಲ್ಲಿ ಅಭಿವೃದ್ಧಿ ಹೊಂದಿದ ಇಂಥ ಒಂದು ಮನೆ ಇದ್ದರೆ ಹಳ್ಳಿಗೆ ಹಳ್ಳಿಯೇ ಅಭಿವೃದ್ಧಿ ಹೊಂದುತ್ತದೆ. ಮಾಡಬೇಕಾದ ಎಲ್ಲ ಕೆಲಸವನ್ನು ಒಮ್ಮೆಗೇ ಕಣ್ಣಮುಂದೆ ಚಿತ್ರಿಸಿಕೊಂಡು ಇದು ಅಸಾಧ್ಯ ಎಂದು ಕೈಬಿಡಬೇಡಿ. ಸಣ್ಣತರದಲ್ಲಿ ನಿಮಗೆ ತೋರಿದಂತೆ ಕೆಲಸ ಮೊದಲುಮಾಡಿ. ನಿಮ್ಮ ಮನೆಯೇ ನಿಮ್ಮ ಕಾರ್ಯಕ್ಷೇತ್ರವಾಗಲಿ. ಈ ರೀತಿ ಸಣ್ಣ ತರದಲ್ಲಿ ಮೊದಲು ಮಾಡಿದ ಕೆಲಸವೆ ಕೊನೆಯಲ್ಲಿ ಅದ್ಭುತ ಸಿದ್ಧಿಯನ್ನು ಕೊಡುತ್ತದೆ.

" ನಿಮ್ಮ ಕುಲ ಉತ್ತಮಗೊಳ್ಳಬೇಕಾದರೆ ನೀವು ವಿದ್ಯಾವಂತರಾಗಬೇಕು. ಬರಿಯ ಓದು ಬರಹ ಕಲಿತರೆ ಮಾತ್ರ ಸಾಲದು. ಹೆಚ್ಚಿನ ವಿದ್ಯಾಭ್ಯಾಸ ಪಡೆಯಲು ಮನಸುಮಾಡಬೇಕು. ನಿಮ್ಮಗಳಲ್ಲಿ ವಿದ್ಯಾಭ್ಯಾಸ ಮೆಟ್ರಿಕ್ ಪರೀಕ್ಷೆಯಾದೊಡನೆಯೇ ನಿಂತು ಹೋಗುವುದನ್ನು ನೋಡಿ ನಾನು ಅತಿಯಾಗಿ ಆತಂಕ ಪಟ್ಟಿದ್ದೇನೆ. ಆರನೆ ತರಗತಿಯವರೆಗೂ (VI. Form) ಹೇಗೊ ಮುಂದೆ ಬರುತ್ತೀರಿ. ಅಲ್ಲಿ ನಿಂತು ಬಿಡುತ್ತೀರಿ. ನನ್ನ ಅನುಭವದಲ್ಲಿ ಬಹುವಿದ್ಯಾರ್ಥಿಗಳ ವಿದ್ಯಾಭ್ಯಾಸ ಈ ರೀತಿ ಮೋಟಕಾಗುವುದನ್ನು ನೋಡಿದ್ದೇನೆ. ಇದರ ಫಲವಾಗಿ ನಮ್ಮ ಕುಲದವರು ಮೆಟ್ರಿಕ್‌ನಲ್ಲಿ ಫೇಲಾದವರನ್ನು ಬಿಟ್ಟು ಬೇರೆ ಯಾವರೀತಿಯ ವಿದ್ಯಾವಂತರನ್ನು ತೋರಿಸಿ ಹೆಮ್ಮೆ ಪಡದಂತಾಗದೆ ಹೋಗಿದೆ. ಮೆಟ್ರಿಕ್ ಪರೀಕ್ಷೆ ವಿದ್ಯಾಭ್ಯಾಸದಲ್ಲಿ ಒಂದು ಘಟ್ಟ. ಮುಂದೆ ಬರಲಿರುವ ಅನಂತವಾದ ಜ್ಞಾನಸಮುದ್ರದ ಕಡೆಗೆ ಒಂದು ನೋಟವನ್ನು ಮಾತ್ರ ಅದು ನಮಗೆ ಕೊಡುತ್ತದೆ. ಮುಂದೆ ಏಳಿಗೆ ಹೊಂದಬೇಕೆನ್ನುವ ಕಾಂಕ್ಷೆ ಬಲಿಯಬೇಕಾದರೆ ಈ ನೋಟ ಒಂದರಿಂದಲೇ ಸಾಲದು. ಮೆಟ್ರಿಕ್‌ನಲ್ಲಿ ನಿಂತಕೂಡಲೆ ಹುಡುಗರು ಮುಂದೆ

ಓದುವ ಅಭ್ಯಾಸವನ್ನು ಬಿಟ್ಟುಬಿಡುತ್ತಾರೆ. ಸ್ವಲ್ಪ ಆದಾಯಕೊಡುವ ಯಾವುದಾದರೊಂದು ಚಾಕರಿಗೆ ಸೇರುತ್ತಾರೆ. ಕೆಲಕಾಲವಾದನಂತರ ಕಲಿತುದನ್ನು ಮರೆತು ವ್ಯರ್ಥವಾದ ಹುರುಳಿಲ್ಲದ ಜಂಭಕ್ಕೆ ಮಾತ್ರ ತುತ್ತಾಗುತ್ತಾರೆ. ತಮ್ಮ ಅಂತಸ್ತು ಸ್ವಲ್ಪ ಹೆಚ್ಚಾದುದರಿಂದ ಅವರು ತಾವು ಮಿಕ್ಕೆಲ್ಲರಿಗಿಂತಲೂ ದೊಡ್ಡವರೆಂದು ತಿಳಿಯುತ್ತಾರೆ. ಅವರ ನಡೆ ನುಡಿಯಲ್ಲಿ ಮರ್ಯಾದೆ ಇಲ್ಲದೆ ಹೋಗುತ್ತದೆ. ಅವರ ಮನಸು ಅಭಿಪ್ರಾಯ ಸಂಕುಚಿತವಾಗಿ ಸಂದುಗೊಂದುಗಳಲ್ಲಿ ಅಲೆಯುತ್ತದೆ. ವಿದ್ಯಾಭ್ಯಾಸ ಹೊಂದಿದವನ ಜೀವನಕ್ಕಿರಬೇಕಾದ ಸಂಸ್ಕಾರ ಇವರ ಜೀವನಕ್ಕಿಲ್ಲದೆ ಶೋಚನೀಯ ಸ್ಥಿತಿಗೀಡಾಗುತ್ತದೆ. ತಮ್ಮ ಹಿರಿಯರು ಮಾಡುತ್ತಿದ್ದ ಕಸಬನ್ನು ತಮ್ಮ ಅಂತಸ್ತಿಗೆ ಕಡಿಮೆಯೆಂದು ತಿಳಿದು ಅದನ್ನು ಮುಂದುವರಿಸದೆ ಬಿಡುತ್ತಾರೆ. ಮುಂದೇನಾಗುವುದೆನ್ನುವುದರ ಕಡೆಗೆ ಲಕ್ಷ್ಯಕೊಡದೆ ಸುಮ್ಮನೆ ಕಾಲಕಳೆಯುತ್ತಾರೆ. ಇಂಥವರ ಸಂಖ್ಯೆ ಹೆಚ್ಚುತ್ತಿರುವುದನ್ನು ನೋಡಿ ದುಃಖವಾಗುತ್ತದೆ.

" ಮೆಟ್ರಿಕ್‌ನಲ್ಲಿ ಫೇಲಾದವನೆಂದಾಗಲಿ, ಪಾಸಾದವನೆಂದಾಗಲಿ ಹೇಳಿಕೊಂಡು ಬೇರೇನನ್ನೂ ಮಾಡದಿದ್ದರೆ ಯಾವ ಕೀರ್ತಿಯೂ ಬರುವುದಿಲ್ಲ. ಹಾಕಿಕೊಳ್ಳುವ ಉಡುಪಿನಿಂದಾಗಲಿ, ಮಾತನಾಡಬಹುದಾದ ಒಂದೆರಡು ಇಂಗ್ಲೀಷು ಮಾತಿನಿಂದಾಗಲಿ ಯಾರನ್ನೂ ಜನ ಗೌರವಿಸುವುದಿಲ್ಲ. ಸ್ವಚ್ಛವಾದ ಜೀವನ, ನಿರ್ಮಲವಾದ ನಡತೆ, ಪರರಿಗೆ ಮಾಡುವ ಸೇವೆ, ತನ್ನ ತಂದೆ ತಾಯಿಗಳಿಗೆ ಕೊಡುವ ಆನಂದ ಇವುಗಳಿಂದ ಮನುಷ್ಯನ ಗೌರವ ಹೆಚ್ಚುತ್ತದೆ.

" ನೀವು ಮುಂದೆ ಏನಾಗಬೇಕೆಂದಿದ್ದೀರೊ ಅದೇ ವಿಷಯವಾಗಿ ಸದಾ ಯೋಚನೆಮಾಡಿ. ಪ್ರತಿಯೊಬ್ಬ ಮನುಷ್ಯನ ಮನಸಿನಲ್ಲೂ ತಾನು ಏಳಿಗೆ ಹೊಂದಬೇಕು, ಜಯಿಸಬೇಕು, ಆನಂದಪಡಬೇಕು, ನೆಮ್ಮದಿಯಾಗಿ ಬಾಳಬೇಕು ಎನ್ನುವ ಆಸೆ ಇದ್ದೇ ಇರುತ್ತದೆ. ಆದರೆ ಎಲ್ಲೊ ಸ್ವಲ್ಪ ಮಂದಿ ಮಾತ್ರ ಇಂಥ ದಿವ್ಯವಾದ ಗುರಿಯನ್ನು ಮುಟ್ಟಲು ಪ್ರಯತ್ನಪಡುತ್ತಾರೆ. ದಾರಿ ನೇರವಾಗಿದೆ. ಆದರೆ ಗುರಿಮುಟ್ಟಬೇಕಾದರೆ ಆ ದಾರಿ

ಯಲ್ಲಿ ನಡೆದು ಹೋಗಬೇಕು. ಆ ದಾರಿಯಲ್ಲಿ ಬಹುಕಾಲ ನಡೆಯದೆ ಹೋದ ಸೋಮಾರಿತನದಿಂದ ಆ ದಾರಿಯೇ ಇಲ್ಲ ಎಂದು ನಿಮಗೆ ತೋರುತ್ತದೆ. ಆದರೆ ಹಠ ಹಿಡಿದು ಮುಂದೆ ನಡೆದರೆ ದಾರಿ ತಾನಾಗಿ ಕಾಣುತ್ತದೆ.''

ಮುವ್ವತ್ತು ವರ್ಷಗಳಿಗೆ ಹಿಂದೆ ಒಕ್ಕಲಿಗ ವಿದ್ಯಾರ್ಥಿಗಳಿಗೆ ಹೇಳಿದ ಬುದ್ಧಿವಾದ ಇಂದಿಗೂ ಸಲ್ಲುತ್ತದೆ. ಒಕ್ಕಲಿಗ ಸಮ್ಮೇಳನದಲ್ಲಿ ಕೊಟ್ಟ ಈ ಎರಡು ಉಪನ್ಯಾಸಗಳನ್ನು ಬಹುಜನ ಮೆಚ್ಚಿಕೊಂಡು ಕಾಗದ ಬರೆದ ಕಾರಣ ಅವುಗಳನ್ನು Two Addresses 'ಎರಡು ಉಪನ್ಯಾಸಗಳು' ಎಂದು ಪುಸ್ತಕ ರೂಪದಲ್ಲಿ ಮುದ್ರಿಸಿದರು. ಪುಸ್ತಕದ ರೂಪದಲ್ಲಿ ಬಂದಮೇಲೂ ಸಹ ಬಹುಜನ ಮಿತ್ರರು ಉಪನ್ಯಾಸವನ್ನು ಕೊಂಡಾಡಿ ಕಾಗದ ಬರೆದರು. ನಂ. ವೆಂಕಟೇಶಯ್ಯಂಗಾರ್ಯರು—You have a heart to feel and your words have come straight from the heart, ಎಂದು ಬರೆದು ಉತ್ತೇಜನ ಕೊಟ್ಟರು.

ಉಪನ್ಯಾಸಗಳನ್ನು ಕೊಟ್ಟು ಮುವ್ವತ್ತು ವರ್ಷಗಳಿಗೂ ಹೆಚ್ಚಿನ ಕಾಲ ಉರುಳಿ ಹೋಗಿದೆ. ಈಗತಾನೆ ಇವುಗಳನ್ನು ಓದಿದ ನನಗೆ ಉಪನ್ಯಾಸಗಳನ್ನು ತಂದೆ ಇಂಗ್ಲೀಷಿನಲ್ಲಿ ಕೊಟ್ಟಿದ್ದು ಅಷ್ಟೇನೂ ಉಚಿತವಾಗಿ ಕಾಣದೆ ಹೋಗಿದೆ. ಉಪನ್ಯಾಸ ಕೊಟ್ಟದ್ದು ಒಕ್ಕಲಿಗರಿಗಾಗಿ, ಒಕ್ಕಲಿಗ ವಿದ್ಯಾರ್ಥಿಗಳಿಗಾಗಿ. ಅವರಲ್ಲಿ ಬಹುಜನಕ್ಕೆ ಇಂಗ್ಲೀಷು ಅರ್ಥವಾಗಿರಲಾರದು. ಪರಭಾಷೆಯಲ್ಲಿ ಹೇಳಿದುದನ್ನು ಮೂಕರಾಗಿ ಸುಮ್ಮನೆ ಕೇಳಿಕೊಂಡು ಹೋದರೆಂದು ಕಾಣುತ್ತದೆ. ಉಪನ್ಯಾಸದಲ್ಲಿನ ಉಪದೇಶಗಳು ಅವರಿಗೆ ಹೃದ್ಗತವಾಗಲಿಲ್ಲ. ಅದರ ಫಲವಾಗಿ ಉಪನ್ಯಾಸಕರು ಬಯಸಿದಷ್ಟು ಶೀಘ್ರವಾಗಿ ಉಪದೇಶಗಳು ಫಲಕಾರಿಯಾಗಲಿಲ್ಲ.

ಸಭೆಗಳಲ್ಲಿ ಇಂಗ್ಲೀಷಿನಲ್ಲಿ ಮಾತನಾಡುವ ವ್ಯಾಮೋಹ ಅಂದಿಗೂ ಇತ್ತು; ಇಷ್ಟು ದಿನ ಕಳೆದುಹೋದರೂ ಇಂದೂ ತಪ್ಪಿಲ್ಲ ಇಂಗ್ಲೀಷಿನಲ್ಲಿ ಬರೆಯುವುದರಿಂದ ನಮ್ಮ ಜನಕ್ಕೆ ಅರ್ಥವಾಗುವುದಿಲ್ಲ ಎನ್ನುವುದನ್ನು ತಂದೆ

ಬಹು ಹಿಂದೆಯೇ ಗ್ರಹಿಸಿದಂತೆ ಕಾಣುತ್ತದೆ. ಮುಂದೆ ಅವರು ಇಂಗ್ಲೆಂಡಿಗೆ ಹೋಗಿ ಅಲ್ಲಿನ ಜನಜೀವನವನ್ನು ನಡೆನುಡಿಯನ್ನು, ಎಲ್ಲವನ್ನೂ ಕನ್ನಡ ದಲ್ಲಿಯೇ ಚಿತ್ರಿಸುತ್ತ ಹೋದರು. ಕನ್ನಡಕ್ಕೆ ಆಗಿನ ಕಾಲದಲ್ಲಿದ್ದ ಮರ್ಯಾದೆ ಯನ್ನು ಕಂಡುಕೊಂಡರೆ ತಂದೆ ಕೈಕೊಂಡ ಕಾರ್ಯ ಆಶ್ಚರ್ಯ ಹುಟ್ಟಿಸುತ್ತದೆ. ಹಿಂದೆ ಯಾರೂ ಕಾಲಿಡದಂಥ ಕಡೆ ಅವರು ಹೆಜ್ಜೆ ಇಟ್ಟು ಒಂದು ದಾರಿ ಗುರುತುಮಾಡಿ ತೋರಿಸಿದರು.

## ಇಂಗ್ಲೆಂಡು ಕುರಿತು ಪ್ರಯಾಣ

ಮೂರು ವರ್ಷ ಪ್ರೊಬೇಷನರಾಗಿ ಶಿಕ್ಷಣ ಹೊಂದಿದ್ದು ಮುಗಿಯಿತು. ಶಿಕ್ಷಣ ಹೊಂದಿದ ಈ ಇಬ್ಬರನ್ನು ಮುದ್ರಣಕಲೆಯಲ್ಲಿ ಉಚ್ಚರೀತಿಯ ಶಿಕ್ಷಣ ಪಡೆಯುವುದಕ್ಕೆ ಇಂಗ್ಲೆಂಡಿಗೆ ಕಳುಹಿಸಿಕೊಡಲು ಸರಕಾರ ತೀರ್ಮಾನಿಸಿತು. ಅದೇ ಪ್ರಕಾರ ೧೯೧೨ ನೆ ಇಸವಿ ಮೇ ತಿಂಗಳು ೨೭ನೆ ತಾರೀಖು ತಂದೆ ತಮ್ಮ ಸಹ ಕೆಲಸಗಾರರಾದ ಶ್ರೀನಿವಾಸಯ್ಯಂಗಾರ್ಯರೊಡನೆ ವಿದೇಶ ಪ್ರಯಾಣಮಾಡಿದರು. ಹೊರಡುವ ಮುನ್ನ ಅವರ ಮಿತ್ರರು ಸತ್ಕಾರ ಸಮಾರಂಭಗಳನ್ನೇರ್ಪಡಿಸಿ ಬೀಳ್ಕೊಂಡರು. ಒಕ್ಕಲಿಗರ ಸಂಘ ರಾಮಯ್ಯ ನವರ ಮತ್ತು ಮಾರಪ್ಪನವರ ನೇತೃತ್ವದಲ್ಲಿ ಸಭೆ ಸೇರಿ, ಔತಣವನ್ನೇ ರ್ಪಡಿಸಿ, ಅಷ್ಟೆಲ್ಲ ದಿವಸ ಏಕಮನದಿಂದ ದುಡಿದ ತನ್ನ ಪ್ರೀತಿಯ ಪುತ್ರ ನನ್ನು ಹರಸಿ ಕಳುಹಿಸಿಕೊಟ್ಟಿತು ಇವೆಲ್ಲಕ್ಕಿಂತ ಹೆಚ್ಚಾಗಿ ಪ್ರತಿದಿನ ರಾತ್ರಿ ಇವರಿಂದ ಪಾಠ ಕಲಿತ ರಾತ್ರಿಶಾಲೆಯ ವಿದ್ಯಾರ್ಥಿಗಳು ಒಂದು ಸಮಾರಂಭ ವನ್ನೇರ್ಪಡಿಸಿ ಬಿನ್ನವತ್ತಳೆ ಒಂದನ್ನು ಅರ್ಪಿಸಿ ಬೀಳ್ಕೊಂಡರು. ಎಲ್ಲರು ಮಾಡಿದ ಮರ್ಯಾದೆಗಿಂತ ಈ ಶಿಷ್ಯರು ಮಾಡಿದ ಮರ್ಯಾದೆ ತಂದೆಗೆ ತೀರ ಸಂತೋಷ ಕೊಟ್ಟಿತೆಂದು ಕಾಣುತ್ತದೆ. ಶಿಷ್ಯರು ಕೊಟ್ಟ ಬಿನ್ನವತ್ತಳೆ ಯನ್ನು ಜೋಪಾನವಾಗಿ ಕೊನೆಯವರೆಗೂ ಉಳಿಸಿಕೊಂಡು ಬಂದಿದ್ದರು.

೧೯೧೨ ನೇ ಮೇ ತಿಂಗಳು ತಂದೆ ವಿದೇಶದ ಪ್ರಯಾಣ ಬೆಳಸಿದರೆಂದು ಹಿಂದೆ ತಿಳಿಸಿದೆ. ಇವರಿಗೆ ಇಂಗ್ಲೆಂಡಿನಲ್ಲಿ ವಿದ್ಯಾನುಕೂಲತೆಗಳನ್ನು ಕಲ್ಪಿಸಿ ಕೊಡಲು ಏಟ್ಸ್‌ರವರೂ ಜೊತೆಗೆ ಪ್ರಯಾಣಮಾಡಿದರು. ಅನುಭ ವಸ್ಥರಾದ ಇವರ ಜೊತೆ ಇದ್ದುದರಿಂದ ಪ್ರಯಾಣದ ಕಷ್ಟಗಳು ಅಷ್ಟಾಗಿ ತೋರಲಿಲ್ಲ.

ಅದುವರೆಗೂ ತಂದೆ ಎಲ್ಲಿಯೂ ಹೆಚ್ಚಾಗಿ ಪ್ರಯಾಣಮಾಡಿದ್ದಂತೆ ಕಾಣುವುದಿಲ್ಲ. ಈಗ ಕೈಕೊಂಡ ಪ್ರಯಾಣದಲ್ಲಿ ತೋರಿಬಂದ ಹೊಸಜನ ಹೊಸ ನಡತೆ ಹೊಸ ಉಡುಪು ಎಲ್ಲವೂ ಆಶ್ಚರ್ಯಹುಟ್ಟಿಸಿದುವು. ರೈಲಿನಲ್ಲಿ ಹೋದ ಎರಡನೆಯ ತರಗತಿಯ ಪ್ರಯಾಣ ಅತಿಶಯವಾಗಿ ಕಂಡಿತು. 'ಘಂಟೆಗೆ ಇಪ್ಪತ್ತು ಮೈಲಿ' ವೇಗವಾಗಿ ಹೋಗುವ ರೈಲೂ ಅತಿ ವೇಗವಾಗಿ ಹೋಗುವಂತೆ ಕಂಡಿತು. ಕೊಲಂಬೊ ನಗರದ ಹೋಟಲೊಂದರಲ್ಲಿ

ಕೆಳಕ್ಕೂ ಮೇಲಕ್ಕೂ ಹೋಗಿ ಬರುವುದಕ್ಕೆ ಇಟ್ಟಿದ್ದುದನ್ನು ನೋಡಿ ತೀರ ವಿಸ್ಮಯವಾಯಿತು. ಇವುಗಳೆಲ್ಲದರ ವರ್ಣನೆ ' ಅಭಿವೃದ್ಧಿ ಸಂದೇಶ 'ದಲ್ಲಿ ದೊರೆಯುತ್ತದೆ. ತಾವು ಕಂಡ ಹೊಸ ವಸ್ತು, ಹೊಸ ನೋಟ, ಎಲ್ಲವನ್ನು ತಮ್ಮ ಪ್ರೀತಿಯ ಪತ್ರಿಕೆಯಾದ ' ಒಕ್ಕಲಿಗರ ಪತ್ರಿಕೆ 'ಯ ವಾಚಕರಿಗೆ ಕಾಣಿಸುತ್ತ ಹೋದರು. ವಾರವಾರ ಪತ್ರಿಕೆಯಲ್ಲಿ ಬರೆದು ಬಂದ ಲೇಖನಗಳೇ ಕೊನೆಗೆ ಪುಸ್ತಕ ರೂಪದಲ್ಲಿ ಅಚ್ಚಾದುವು.

ಈ ರೀತಿ ಪತ್ರಿಕೆಗೆ ಬರೆದ ಲೇಖನಗಳೇ ಅಲ್ಲದೆ ತಮ್ಮ ಸಹ ಕೆಲಸಗಾರರಾದ, ಬಂಧುವಾದ, ರಾಮಯ್ಯನವರಿಗೆ ಮತ್ತು ಇತರ ಸ್ನೇಹಿತರಿಗೆ ತಮ್ಮ ಅನುಭವದ ಸಾರವನ್ನೆಲ್ಲ ಸುದೀರ್ಘವಾಗಿ ಪತ್ರ ಬರೆದು ಕಳುಹಿಸುತ್ತಿದ್ದರು. ವಾರವಾರ ಬರುತಿದ್ದ ಇವರ ಪತ್ರಗಳ ಉದ್ದ, ಅವುಗಳಲ್ಲಿನ ವಿಷಯ ಸಂಗ್ರಹ ಅವುಗಳನ್ನು ಕಂಡ ಏಟ್ಸ್ ಅವರು ತಂದೆಯ ಪತ್ರಗಳಿಗೆ ' Puttiah's Weekly ', ಎಂದು ಕರೆಯುತಿದ್ದರು.

ತಂದೆ ಈ ರೀತಿ ಬರೆದ ಪತ್ರಗಳಲ್ಲಿ ಕೆಲವು ಮಾತ್ರ ನನಗೆ ದೊರೆತಿವೆ. ಈ ಪತ್ರಗಳ ಉದ್ದಕ್ಕೂ ಸೊಗಸಾದ ವರ್ಣನೆ ಇದೆ. ಆ ದೇಶದ ಸಂಪತ್ತು, ಅಲ್ಲಿನ ಜನಜೀವನದ ರೀತಿ ಇವುಗಳನ್ನು ಕಂಡ ಮೆಚ್ಚಿಕೆಯ ಮಾತು ಇದೆ. ನಮ್ಮ ದೇಶ ಕೂಡ ಇಂಥ ಮಾರ್ಗವನ್ನು ಅವಲಂಬಿಸಿ ಇದೇ ರೀತಿ ಏಳಿಗೆ ಹೊಂದಬಾರದೆ ಎನ್ನುವ ಕಾತರಭಾವ ಇದೆ. ನಮ್ಮ ದೇಶ ಈ ಮಟ್ಟ ಮುಟ್ಟಬೇಕಾದರೆ ಏನುಮಾಡಿದರೆ ಸಾಧ್ಯ ಎನ್ನುವ ವಿಚಾರ ಇದೆ. ತಾನು ಇದುವರೆಗೂ ದುಡಿದ ಸಂಘ, ಹೊರಡಿಸಿದ ಪತ್ರಿಕೆ, ಇವುಗಳ ಏಳಿಗೆಗಾಗಿ ಮಾಡಬೇಕಾದ ಕಾರ್ಯಗಳ ವಿವರ ಇದೆ. ಇವೆಲ್ಲ ಇವೆ. ಈ ಪತ್ರಗಳಲ್ಲಿನ ಮುಖ್ಯಮುಖ್ಯ ಭಾಗಗಳನ್ನೆ ಎತ್ತಿಕೊಂಡು, ವಿಷಯಾನುಸಾರವಾಗಿ ವಿಂಗಡಿಸಿ ಮುಂದಿನ ಅಧ್ಯಾಯಗಳಲ್ಲಿ ಕೊಡುತ್ತ ಹೋಗುತ್ತೇನೆ. ಪತ್ರಗಳಿರುವುದು ಇಂಗ್ಲೀಷಿನಲ್ಲಿ. ಪದಶಃ ಅವುಗಳ ಭಾಷಾಂತರಮಾಡಿ ಮೂಲದ ಸೊಗಸನ್ನು ಕನ್ನಡದಲ್ಲಿ ರೂಪಿಸುವುದು ನನ್ನಿಂದ ಅಸಾಧ್ಯವಾದರೂ ಮೂಲದ ಛಾಯೆ ಕನ್ನಡದಲ್ಲಿಯೂ ಉಳಿಯುವಂತೆ ಅನುವಾದ ಮಾಡಿದ್ದೇನೆ. ಎಲ್ಲಿ ಮೂಲವನ್ನು ಕೊಡುವುದೇ ಸೂಕ್ತವೆಂದು ನನಗೆ ತೋರಿಬಂತೊ ಅಲ್ಲಿ ಅನುವಾದಮಾಡದೆ ಮೂಲವನ್ನೆ ಕೊಟ್ಟಿದ್ದೇನೆ.

# ಪ್ರಯಾಣದ ಅನುಭವಗಳು

## ೧.

R. M. S. Orontes,
ಪೋರ್ಟ್ ಸೆಡ್,
ಜೂನ್, 10, 1912.

ಪ್ರಿಯ ರಾಮು,

ಪ್ರಯಾಣದ ಮೊದಲ ವಾರವೆಲ್ಲ ಸಮುದ್ರಖಾಯಿಲೆಯಿಂದ ಅತಿಯಾಗಿ ನರಳಿದೆ. ನನ್ನದು ಮೊದಲೇ ಪಿತ್ತಶರೀರ. ಪ್ರಯಾಣದಲ್ಲಿದ್ದ ಉತ್ಸಾಹವೆಲ್ಲ ಮಾಯವಾಯಿತು. ಏನೇ ಆಗಲಿ ಮನೆಗೆ ಹೋಗಿ ಸೇರಿಯೇನೆ ಎನಿಸಿಬಿಟ್ಟಿತು. ಕೆಂಪು ಸಮುದ್ರ ಸೇರಿದಮೇಲೆ ಸಮುದ್ರ ಶಾಂತವಾಗಿದೆ. ಹಡಗು ಅಲ್ಲಾಡುತ್ತಿಲ್ಲ. ನಾನು ಮೊದಲಿನಂತೆ ಗೆಲುವಿನಿಂದಿದೇನೆ. ಇಲ್ಲಿನ ಆಹಾರ ಕಷ್ಟ ಕೊಡುತ್ತಿದೆ. ಸ್ವಲ್ಪದಿನದಲ್ಲಿ ಸರಿಹೋದೀತು. ಏಟ್ಸ್ ದಂಪತಿಗಳು ನಾವು ಮೊದಲು ಊಹಿಸಿದ್ದಂತೆ ನಮ್ಮಿಬ್ಬರಿಗೂ ತಂದೆತಾಯಂತಿದಾರೆ. ನಮ್ಮ ಕಷ್ಟಗಳು ಸ್ವಲ್ಪದರಲ್ಲಿಯೇ ಮುಗಿಯುವಂತೆ ನೋಡಿಕೊಳ್ಳುತ್ತಿದಾರೆ.

ನಮ್ಮ ಹಡಗಿನ ತುಂಬ ತಾಯಿನಾಡಿನಲ್ಲಿ ರಜಾ ಕಾಲವನ್ನು ಕಳೆಯಲು ಹೊರಟಿರುವ ನ್ಯೂಜಿಲೆಂಡಿನವರು, ಆಸ್ಟ್ರೇಲಿಯನರು ಇವರೇ ಇದ್ದಾರೆ. ನಿಗ್ಗರ್ ಎಂದು ನಮ್ಮನ್ನು ತುಚ್ಛೀಕರಿಸುವ ಆಂಗ್ಲೋ ಇಂಡಿಯನರು ಯಾರೂ ಸದ್ಯ ಇಲ್ಲ. ಈ ಜನ ನಮ್ಮೆಲ್ಲ ವಿಷಯವನ್ನು—ನಾವೆಲ್ಲಿಂದ ಬಂದೆವು, ನಮ್ಮದೇಶ ಯಾವರೀತಿ ಇದೆ, ಎನ್ನುವುದನ್ನು ತಿಳಿಯುವುದಕ್ಕೆ ಕುತೂಹಲಿಗಳಾಗಿದಾರೆ. ನಾವೆಲ್ಲ ಸಮಾನರಂತೆಯೇ ಓಡಿಯಾಡುತ್ತಿದೇವೆ. ಗುಲಾಮರೆನ್ನುವ ಭಾವ ನಮ್ಮನ್ನು ಅಷ್ಟಾಗಿ ಕುಗ್ಗಿಸುತ್ತಿಲ್ಲ.

ನನ್ನ ಭಾವನೆಗಳನ್ನೆಲ್ಲ ಒಕ್ಕಲಿಗರ ಪತ್ರಿಕೆಗೆ ಬರೆಯುತ್ತೇನೆ. ಅದರಿಂದ ನನ್ನೆಲ್ಲ ಅನುಭವದ ವಿವರವನ್ನು ನೀನು ತಿಳಿಯಬಲ್ಲೆ. ನಾನು

ನೋಡಿದ ಸಂಗತಿಗಳನ್ನು ಮಾತ್ರ ಬರೆಯುತ್ತ ಹೋಗುತ್ತೇನೆ. ನನ್ನ ಟೀಕೆಗಳನ್ನು ಆದಷ್ಟುಮಟ್ಟಿಗೆ ಹಿಂದಿಡುತ್ತೇನೆ. ಟೀಕೆಮಾಡುವ ಕಾಲ ಮುಂದೆ ಬರುತ್ತದೆ. ನನ್ನದಾಗಿ ಅಭಿಪ್ರಾಯಕೊಡುವ ಮುನ್ನ ನನ್ನ ಅನುಭವ ಪಕ್ವವಾಗುವುದು ಮುಖ್ಯ. ಟೀಕೆಗಳನ್ನು ಏನಿದ್ದರೂ ಕೊನೆಯಲ್ಲಿ ಕೊಡುತ್ತೇನೆ. ನಾನು ಬರೆದುದು ಓದುಗರಿಗೆ ಲಾಭಕೊಡದೆ ಹೋದರೂ ಕುತೂಹಲವನ್ನಾದರೂ ಕೆರಳಿಸುವುದೆಂದು ನಂಬಿದ್ದೇನೆ.

೨.

ಮೆಡಿಟರೇನಿಯನ್ ಸಮುದ್ರ,

ಜೂನ್ 13, 1912

ಮೆಸ್ಸೀನಾ ಕಾಲುವೆಯನ್ನು ಈಗತಾನೆ ದಾಟಿದೆವು. ದೃಶ್ಯ ಬಹಳ ಸುಂದರವಾಗಿತ್ತು. ಯೂರೋಪಿನ ದೃಶ್ಯಗಳು ಯಾವರೀತಿ ಇವೆ ಎನ್ನುವುದರ ಅನುಭವ ಸ್ವಲ್ಪಮಟ್ಟಿಗೆ ಆಯಿತು. ಇಟಲಿ ಮತ್ತು ಸಿಸಲಿ ತೀರಗಳ ಉದ್ದಕ್ಕೂ ಅಲ್ಲಲ್ಲೆ ವನ ತೋಟಗಳಿಂದ ಕೂಡಿದ ಸುಂದರವಾದ ಪಟ್ಟಣಗಳನ್ನು ನೋಡುತ್ತ ಹೋದೆವು. ಪಾಶ್ಚಿಮಾತ್ಯರ ವ್ಯವಸಾಯದ ಫಲವಾದ ರೈಲುಗಳು, ಸೇತುವೆಗಳು, ಸುರಂಗಗಳು ಇಲ್ಲದೆ ಇಲ್ಲ. ಇಲ್ಲಿನ ಸಣ್ಣಹಳ್ಳಿ ನಮ್ಮ ಕಡೆಯ ಸುಮಾರಾದ ಪಟ್ಟಣಕ್ಕೂ ಚೆನ್ನಾಗಿ ಕಾಣುತ್ತದೆ. ........ನಾನು ಬರೆಯುತ್ತಿರುವಂತೆ ಸ್ಟ್ರಾಂಬೋಲಿ ಅಗ್ನಿಪರ್ವತ ಕಾಣಿಸುತ್ತಿದೆ. ನಾಳೆ ಬೆಳಿಗ್ಗೆ ನೇಪಲ್ಸ್ ಪಟ್ಟಣದಲ್ಲಿರುತ್ತೇವೆ. ಅಲ್ಲಿ ನೋಡಬೇಕಾದುದು ಬೇಕಾದಹಾಗೆ ಇರಲೇಬೇಕು.

ಹನ್ನೊಂದು ದಿವಸ ಬೇಸರದ ಪ್ರಯಾಣ ಮುಗಿದು ಸೂಯಜನ್ನು ೯ನೇ ತಾರೀಖು ತಲಪಿದೆವು. ಬಂದರಿಗೆ ಬಂದ ತಕ್ಷಣ ಅರಬ ವರ್ತಕರು ಕೂಗುತ್ತ ಚೀರುತ್ತ ಬಂದು ಹಡಗನ್ನೆಲ್ಲ ಮುತ್ತಿಕೊಂಡು ಬಿಟ್ಟರು. ಹತ್ತು ದಿವಸ ಪ್ರಯಾಣಮಾಡಿ ಬೇಸರವಾಗಿರದಿದ್ದರೆ ಇವರ ಹಾರಾಟ ಚೀರಾಟ ಕಂಡು ಅಸಹ್ಯವಾಗುತ್ತಿತ್ತು. ಬೇಸರಪಟ್ಟದ್ದೇವಾದಕಾರಣ ಇವರ ಕೂಗು

ಗಳೂ ನಮಗೆ ಹಿತವಾಗಿ ಕಂಡಿತು. ಈ ಅರಬರು ತಾಯಿಗ್ಗಂಡರಾಗಿ ಕಂಡರು. ಹರಕು ಮುರುಕು ಇಂಗ್ಲೀಷು ಮಾತನಾಡುತ್ತ ಪ್ರಯಾಣಿಕ ರನ್ನು ಸುತ್ತಿಕೊಂಡು ಚಿಲ್ಲರೆ ಸಾಮಾನುಗಳನ್ನು ತ್ಯಾಗ ಹಾಕುವುದಕ್ಕೆ ನೋಡುತಿದ್ದರು. ಈ ಚಿಲ್ಲರೆ ಸಾಮಾನು ಇನ್ನಾವುದೂ ಅಲ್ಲ....ಹವಳದ ಸರಗಳು, ಲೇಸುಗಳು, ಚಿತ್ರದ ಕಾರ್ಡುಗಳು! ನಮ್ಮ ಹಡಗಿನಲ್ಲಿದ್ದ ಇಂಗ್ಲೀಷು ಹೆಂಗಸರ ವಿಷಯ ಏನು ಹೇಳಲಿ! ಹವಳದ ಸರ ಕಂಡರೆ ಹುಚ್ಚರಂತೆ ಕುಣಿದು ಏನು ಬೆಲೆ ಹೇಳಲಿ ಅದನ್ನು ಕೊಟ್ಟು ಕೊಳ್ಳುತಿದ್ದರು. ನಾನಂದು ಕೊಂಡೆ ಎಲ್ಲಿ ಹೋಗಲಿ ಹೆಂಗಸರು ಹೆಂಗಸರೆ. ಒಡವೆಗಳಿಗಾಗಿ ಆಸೆ ಬೀಳುತ್ತಾರೆಂದು ನಮ್ಮ ಹೆಂಗಸರನ್ನು ನಾವು ಎಷ್ಟೋ ಹೀಯಾಳಿಸುತ್ತೇವೆ. ಆದರೆ ಅತಿ ನಾಗರಿಕರೆನಿಸಿಕೊಂಡ ಈ ಹೆಂಗಸರ ವಿಷಯವೊ? ಪ್ರಪಂಚದಲ್ಲಿ ಎಲ್ಲಿ ಹೋಗಲಿ ಹೆಂಗಸುತನ ಒಂದೇ ಬಗೆಯದು; ಅವರ ಸ್ವಭಾವ ಒಂದೇರೀತಿ. ಬೇರೆಬೇರೆ ರೀತಿಯ ನಡವಳಿಕೆಗೆ ಅನುಸಾರವಾಗಿ ಅವರ ಬಯಕೆಗಳೂ ಬದಲಾಯಿಸುತ್ತವೆ ಅಷ್ಟೆ. ಯಾರನ್ನೂ ಅಂದು ಪ್ರಯೋಜನವಿಲ್ಲ.

ನಾಲ್ಕುಗಂಟೆ ಮಧ್ಯಾಹ್ನಕ್ಕೆ ಪೋರ್ಟ್‌ಸೆಡ್ ಬಿಟ್ಟು ಜಹಜು ಹೊರಟಾಗ ಸೂಯಜ್ ಕಾಲುವೆಯನ್ನು ಕಟ್ಟಿದ ಶಿಲ್ಪಿ Ferdenand de Lessepsನ ಸುಂದರ ವಿಗ್ರಹ ನೋಡಿದೆವು. ವಿಗ್ರಹ ಕಾಲುವೆಯ ಮುಖದಲ್ಲಿದೆ. ತಾನು ಸಾಧಿಸಿದ ಅಗಾಧವಾದ ಕಾಲುವೆಯ ಕಡೆ ಕೈಎತ್ತಿ ತೋರಿಸುತ್ತ ನಿಂತಿದೆ ವಿಗ್ರಹ.

ಈ ಕಾಗದ ನೆನ್ನೆಯೇ ನೇಪಲ್ಸ್‌ನಲ್ಲಿ ಹಾಕಬೇಕೆಂದಿದ್ದೆ. ಆದರೆ ಅದು ಮುಗಿಸುತ್ತಿರುವಂತೆಯೇ ಹಡಗು ಅಲುಗಾಡಿ ನನಗೆ ತಲೆತಿರುಗಿ ನಾನು ಮಲಗಬೇಕಾಯಿತು. ಈರೀತಿ ನಾನು ಮಲಗಿರುವಾಗಲೆ ಪ್ರಸಿದ್ಧಿಯಾದ ಸ್ಟ್ರಾಂಬೊಲಿ ಪರ್ವತ ಮರೆಯಾಯಿತು. ಅದು ಸಮುದ್ರ ಮಧ್ಯದಿಂದ ಥಟ್ಟನೆ ಎದ್ದುನಿಂತ ಗುಡ್ಡದಂತೆ ಇದೆ. ಅದರ ಬಾಯಿ ದೊಡ್ಡದು. ಬಾಯಿಂದ ಹೊಗೆ ಆಡುತ್ತಿರುವುದನ್ನು ನಾವೆಲ್ಲ ನೋಡಿದೆವು. ಮನುಷ್ಯನ ಧೈರ್ಯ ಆಶ್ಚರ್ಯ ಹುಟ್ಟಿಸುತ್ತದೆ. ಭಯಾನಕವಾದ ಈ ಅಗ್ನಿಪರ್ವತದ

ಬುಡದಲ್ಲಿಯೇ ಸುಂದರವಾದ ತೋಟಗಳಿಂದ ದ್ರಾಕ್ಷಿಬಳ್ಳಿಗಳಿಂದ ಆವೃತ ವಾದ ಬಂಗಲೆಗಳು ಅನೇಕವಿವೆ.

ಹೊತ್ತುಹುಟ್ಟುವ ಸಮಯಕ್ಕೆ ನೇಪಲ್ಸ್ ಪಟ್ಟಣಕ್ಕೆ ಜಹಜು ಬಂದು ಸೇರಿತು. ಸೇರಿದಾಗ ಮಳೆ ಸುರಿಯುತ್ತಿತ್ತು. ದಟ್ಟವಾಗಿ ಮಂಜು ಬೀಳುತಿತ್ತು. ಮಂಜು ತಿಳಿಯಾಗಿ ಸೂರ್ಯನ ಬೆಳಕು ಬೀಳುವ ಹೊತ್ತಿಗೆ ೯-೩೦ ಗಂಟೆ ಆಯಿತು. ಪಟ್ಟಣ ನೋಡುವುದಕ್ಕೆ ಖಂಡಿತವಾಗಿಯೂ ಅತಿ ಸುಂದರವಾಗಿ ಕಂಡಿತು.

....ಇಲ್ಲಿನ ಮ್ಯೂಸಿಯಂ ನೋಡಲು ಹೋಗಿದ್ದೆವು. ಕಟ್ಟಡವನ್ನು ಸುಂದರವಾದ ವಿಧವಿಧ ಬಣ್ಣದ ಅಮೃತಶಿಲೆಗಳಿಂದ ಕಟ್ಟಿದಾರೆ. ಎಣಿಕೆ ಗೆಟಕದಷ್ಟು ಇಟಾಲಿಯನರ ಪ್ರತಿಮೆಗಳಿವೆ, ಚಿತ್ರಗಳಿವೆ. ಇಟಲಿ ದೇಶ ಇವುಗಳಿಗೆ ಬಹಳ ಪ್ರಸಿದ್ಧಿ ಎಂದು ನೀನು ಬಲ್ಲೆ. ಚಿತ್ರಗಳೇನೊ ಎಲ್ಲ ಚೆನ್ನಾಗಿವೆ. ಅವುಗಳ ವಸ್ತುವೆಲ್ಲ ಬೈಬಲಿನಿಂದ ಎತ್ತಿಕೊಂಡುದು. ಅವುಗಳನ್ನು ಇಲ್ಲಿಯ ಜನ ಬಹಳವಾಗಿ ಮೆಚ್ಚುತಾರೆ. ನನಗೇನೊ ಅವು ಅಷ್ಟು ಸೊಗಸಲಿಲ್ಲ. ಆಳೆತ್ತರದ ಅನೇಕ ಶಿಲಾಪ್ರತಿಮೆಗಳಿವೆ. ಸೊಗಸಾಗೇನೊ ಇವೆ; ಆದರೆ ನಮ್ಮ ಬೇಲೂರು ಹಳೆಬೀಡಿನ ಕೆಲಸಕ್ಕೆ ಸರಿತೂಗಲಾರವು. ....ಈ ಇಟಾಲಿಯುವರಿಗೆ ದೊರೆತಂತೆ ನಮ್ಮವರಿಗೂ ಅಮೃತಶಿಲೆ ದೊರೆತಿದ್ದರೆ ಇನ್ನೆಷ್ಟು ಸೊಗಸಾದ ಕೆಲಸಮಾಡುತಿದ್ದರೊ ಏನೊ?

ಆಮೇಲೆ ಇಲ್ಲಿನ ದೇವಾಲಯಕ್ಕೆ (Cathedral) ಹೋದೆವು. ಅಮೃತಶಿಲೆ ಚಿನ್ನದ ರೇಕುಗಳು ಇವುಗಳನ್ನು ಸೇರಿಸಿ ಕಟ್ಟಿರುವ ಸುಂದರ ವಾದ ಕಟ್ಟಡ ಇದು. ಮಧ್ಯದ ಅಂಗಳದಲ್ಲಿ, ಪೂಜಿಸುವ ಸ್ಥಳದಲ್ಲಿ ಇರುವ ಪ್ರತಿಮೆಗಳು ಬಹು ಸೊಗಸಾಗಿವೆ. ಈ ಪಡುವಣ ದೇಶದಲ್ಲಿನ ಕಟ್ಟಡಗಳು ನೋಡುವುದಕ್ಕೆ ಅಗಾಧವಾಗಿ ಅದ್ಭುತವಾಗಿ ಸೊಗಸಾಗಿ ಕಾಣುತ್ತವೆ. ಅವುಗಳಲ್ಲಿನ ಒಳಕೆಲಸ ಅಷ್ಟು ಹೆಚ್ಚಿನದೇನೂ ಅಲ್ಲ. ನಮ್ಮ ಕಡೆಯ ಕಟ್ಟಡಗಳನ್ನು ಕಟ್ಟುವುದಕ್ಕೆ ಎಷ್ಟುಶ್ರಮ ವಹಿಸಿದ್ದರೂ, ಎಷ್ಟೋ ಕುಶಲ ಕೆಲಸಮಾಡಿದ್ದರೂ ಮೊದಲಿಗೆ ಅವು ಮನಸನ್ನು ಸೆಳೆಯುವುದಿಲ್ಲ.

ನೋಡುವವರ ಮನಸನ್ನು ಥಟ್ಟನೆ ಸೆಳೆಯುವ, ಬೆರಗುಗೊಳಿಸುವ ಒಂದು ಉದ್ದೇಶದಿಂದಲೇ ಇಲ್ಲಿನ ನಗರಗಳನ್ನು ಕಟ್ಟಿದಂತಿದೆ. ನಮ್ಮ ದೇಶದ ನಗರಗಳು ಈ ಉದ್ದೇಶವನ್ನು ಇನ್ನೂ ಸಾಧಿಸಬೇಕಾಗಿದೆ.

೩.

ಇಲ್ಲಿ ನಡೆಯುತ್ತಿರುವ ವ್ಯಾಪಾರ, ಉದ್ಯಮ, ಈ ಪಟ್ಟಣಗಳಿಗೆ ತನ್ನದೇ ಆದ ಒಂದು ಕಳೆಯನ್ನು ಕೊಡುತ್ತದೆ. ಯಾವಾಗಲೂ ಎತ್ತ ನೋಡಿದರೂ ಕೆಲಸದಲ್ಲಿ ನಿರತರಾಗಿ ಓಡಿಯಾಡುತ್ತಿರುವ ಜನ ಸಮೂಹವೆ ಕಾಣುತ್ತದೆ. ಎಲ್ಲಿ ನೋಡಿದರೂ ಜನ, ಚಟುವಟಿಕೆ, ಗಲಾಟೆ. ಈ ಚಟು ವಟಿಕೆ ಇಲ್ಲದೆ ಹೋಗಿದ್ದರೆ ಅರಮನೆಯಂತಿರುವ ಈ ಕಟ್ಟಡಗಳೂ ಇಲ್ಲಿರು ತಿರಲಿಲ್ಲ. ನಾವೊ ತೀರ ನಿಧಾನಿಗಳು, ಸೋಮಾರಿಗಳು. ಯಾವುದರ ಗೋಜಿಗೂ ಹೋಗದೆ ಕುಂಟುತ್ತ ನಡೆಯುತ್ತಿರುವವರು. ಇಲ್ಲಿ ಹಾಗಲ್ಲ. ಪ್ರತಿ ನಿಮಿಷವೂ ಬೆಲೆಯುಳ್ಳದ್ದು. ಎಲ್ಲ ತರ ಕೆಲಸವೂ ಗೌರವಯುತ ವಾದದ್ದು. ಪ್ರತಿಯೊಬ್ಬನೂ ಕೆಲಸಮಾಡುವ ಸಂಪಾದಿಸುವ ಸುಖಪಡುವ ಹಕ್ಕು ತನಗಿದೆಯೆಂದು ತಿಳಿಯುತ್ತಾನೆ. ಇದನ್ನು ನಾವುಗಳು ಕಲಿಯ ಬೇಕೆಂದು ನನಗನಿಸುತ್ತದೆ. ನಾವು ಈಗಿಗಿಂತಲೂ ಹೆಚ್ಚು ಚಟುವಟಿಕೆ ಯಿಂದ ಕೆಲಸಮಾಡಬೇಕು. ಈ ಜನ ದುಂಬಿಗಳಂತೆ ಎಡಬಿಡದೆ ಕೆಲಸ ಮಾಡುವುದನ್ನು ನೋಡಿದಾಗ ನಾನು ಈ ಜನ ಏತಕ್ಕಾಗಿ ಹೀಗೆ ದುಡಿಯು ತ್ತಾರೆ? ಅವರ ಕೊನೆಯ ಗುರಿಯೇನು? ಈ ಎಲ್ಲ ದುಡಿತದ ಉದ್ದೇಶವೇನು? ಹಣವೆ, ಸುಖವೆ. ಸಂಪತ್ತೆ ಅಥವಾ ಏನೂ ಇಲ್ಲವೆ? ಎಂದೆಲ್ಲ ಪ್ರಶ್ನಿಸಿ ಕೊಳ್ಳುತ್ತೇನೆ. ಖಂಡಿತವಾದ ಉತ್ತರ ಹೇಳಲಾರೆ. ಆದರೆ ಈ ಜನದಲ್ಲಿ ಯಾವಾಗಲೂ ಎದ್ದು ಕೆಲಸಮಾಡುತ್ತಿರಬೇಕೆನ್ನುವ ಭಾವ ಬೇರೂರಿರು ವಂತೆ ಕಾಣುತ್ತದೆ. ಬಹುಜನ ಶ್ರಮಪಡುವುದು ಹಣಕ್ಕಾಗಿ ಸುಖಕ್ಕಾಗಿ ಎಂದೇನೊ ಹೇಳಬಲ್ಲೆ. ಆದರೆ ಈ ಜನ ನಾವು ಯಾವುದು ಅಸಾಧ್ಯ ಎನ್ನುತೇವೆಯೊ ಅದನ್ನು ಸಾಧಿಸ ಹೊರಡುವುದನ್ನು ನೋಡಿದರೆ, ಏರೋ ಪ್ಲೇನುಗಳಲ್ಲಿನ ಹಾರಾಟ, ಧ್ರುವವನ್ನು ಮುಟ್ಟುವ ಪ್ರಯತ್ನ, ಮೃತ್ಯು

ವಿನ ಬಾಯಿಬಿಯುಂತಿರುವ ಪರ್ವತಗಳ ಕೆಳಗಡೆಯು ವಾಸ, ಇವುಗಳನ್ನು ನೋಡಿದರೆ, ಈ ಜನ ಬರಿಯು ಹಣಕ್ಕಾಗಿ ದುಡಿಯುವುದಿಲ್ಲ. ಪ್ರಕೃತಿ ಮನುಷ್ಯನ ಮುಂದೆ ತಂದೊಡ್ಡುವ ವಿಘ್ನಗಳನ್ನು ಜಯಿಸಬೇಕೆನ್ನುವ ತಡೆಯಲಾಗದಂಥ ಪ್ರೇರಕಶಕ್ತಿ ಇವರನ್ನು ಈ ರೀತಿ ಮಾಡುವಂತೆ ಪ್ರೇರಿಸುತ್ತದೆ ಎಂದು ನನಗನ್ನಿಸುತ್ತದೆ. ಅಗ್ನಿಪರ್ವತಗಳು ಪಟ್ಟಣ ಪಟ್ಟಣಗಳನ್ನೆ ಹೂಳಿಬಿಡಬಹುದು. ಆ ಹಾಳಾದ ಪಟ್ಟಣಗಳ ಮೇಲೆ ಮತ್ತೂ ಭವ್ಯವಾದ ಸುಂದರವಾದ ಕಟ್ಟಡಗಳನ್ನು ನಗರಗಳನ್ನು ನಿರ್ಮಿಸುತ್ತ ಹೋಗುತ್ತಾರೆ. ಆಕಾಶದಲ್ಲಿ ಹಾರಬೇಕೆಂದು ಒಬ್ಬನ ತಪ್ಪ ಒಬ್ಬನು ಸಾಯಲಿ, ಹಾರುವ ಪ್ರಯತ್ನ ಇನ್ನು ಸಾಕು ಎಂದು ಕೈಬಿಡುವುದಿಲ್ಲ. ಅದ್ಭುತವಾದ Titanic ಹಡಗು ಮುಳುಗಿದರೇನು ? ಅದರಿಂದ ಜನತೆಗೆ ಒಳ್ಳೆಯದೇ ಆಯಿತು. ಪ್ರಾಣವನ್ನು ರಕ್ಷಿಸುವುದಕ್ಕೆ ಇನ್ನೂ ಹೊಸ ಸಾಧನಗಳನ್ನು ಕಂಡುಹಿಡಿಯಲು ಅವಕಾಶವಾಯಿತು. ಈ ಹಿಡಿದ ಕೆಲಸವನ್ನು ಸಾಧಿಸುವ ಹಠ ಒಂದೇ ಈ ಜನರನ್ನು ಇಷ್ಟು ಅಗ್ರಗಣ್ಯರನ್ನಾಗಿ ಮಾಡಿದೆ. ಪ್ರಕೃತಿಯನ್ನು ಜಯಿಸಲು ಹೋಗುವುದಕ್ಕಿಂತ ತನ್ನನ್ನು ತಾನು ಜಯಿಸುವುದು ಉತ್ತಮ ನಿಜ. ಆದರೆ ಒಂದನ್ನು ಕೊಂಡಾಡಿ ಇನ್ನೊಂದನ್ನು ಅಲ್ಲಗಳೆಯುವುದು ಸರಿಯಾದ ದಾರಿಯಲ್ಲ............

೪.

ಹೋದವಾರದ ಮುಖ್ಯ ಸಂಗತಿಯೆಂದರೆ ನನ್ನ ಆಕ್ಸ್‌ಫರ್ಡ್ ಯಾತ್ರೆ. ಲಂಡನಿಗೆ ಆಕ್ಸ್‌ಫರ್ಡ್ ಅರವತ್ತೈದು ಮೈಲಿ ದೂರದಲ್ಲಿದೆ. ಒಂದುವರೆ ಗಂಟೆ ಹೊತ್ತಿನಲ್ಲಿ ಹೋಗಿ ಸೇರಿದೆವು. ನಾನು ಆಕ್ಸ್‌ಫರ್ಡ್ ನೋಡಿ ಬಹು ಸಂತೋಷಪಟ್ಟೆ. ಸುಂದರವಾದ ಸದ್ದಿಲ್ಲದ ಮುದ್ದು ಊರು ಇದು. ಎಲ್ಲಿ ನೋಡಲಿ ಪುರಾತನವಾದ ವಿಶ್ವವಿದ್ಯಾನಿಲಯದ ಕಾಲೇಜುಗಳ ನೆನಪೆ. ಇಲ್ಲಿನ ವಿಶ್ವವಿದ್ಯಾನಿಲಯದ ಮ್ಯೂಸಿಯಂ, ಇಂಡಿಯನ್ ಇನ್‌ಸ್ಟಿಟ್ಯೂಟ್ ಬೋಡ್ಲಿಯನ್ ಲೈಬ್ರರಿ ಎಲ್ಲವನ್ನು ನೋಡಿದೆ....ಲೈಬ್ರರಿಯಲ್ಲಿ ಅಸಂಖ್ಯಾತವಾದ ಪುಸ್ತಕಗಳಿವೆ. ಇಲ್ಲಿನ ನೋಟ ಅತಿ ಮನೋಹರವಾಗಿದೆ. ನಡೆದು

ಹೋಗುವುದಕ್ಕೆ ಸೊಗಸಾದ ದಾರಿಗಳಿವೆ. ಎರಡೂ ಕಡೆ ಸಾಲುಸಾಲಾಗಿರುವ ಹಸುರು ಮರಗಳಿವೆ. ಹಚ್ಚ ಹಸುರಾದ ಮೈದಾನಗಳು, ಹತ್ತಿರವೆ ಹರಿಯುತಿರುವ ನದಿ ಕಾಲುವೆ, ಮರಗಳ ಮಧ್ಯೆ ಎದ್ದುನಿಂತಿರುವ ಮುದ್ದಾದ ಮನೆಯ ಶಿಖರಗಳು ಚಿಮಣಿಗಳು, ನಡೆದು ಹೋಗುತಿದ್ದರೆ ಬೀಸುವ ಹಿತಕರವಾದ ಗಾಳಿ, ಇವು ತೀರ ಮನೋಹರವಾಗಿವೆ. ಇಂಗ್ಲೀಷಿನವನು ತನ್ನ ದೇಶದ ವಾಯುಗುಣ, ತನ್ನ ಮನೆ, ತನ್ನ ಸುತ್ತುಮುತ್ತು ಇವುಗಳನ್ನು ಪ್ರೀತಿಸುವುದರಲ್ಲಿ ಆಶ್ಚರ್ಯವೇನೂ ತೋರುವುದಿಲ್ಲ. ಇಲ್ಲಿನ ಮನೆಗಳೆಲ್ಲ ಒಂದೇ ತರ ಇವೆ. ನೋಡುವುದಕ್ಕೆ ಮುದ್ದಾಗಿವೆ. ಕಾಂಪೌಂಡಿಗೆ ಅಷ್ಟು ಸ್ಥಳವಿಲ್ಲ. ಆದರೆ ಇರುವಷ್ಟೆ ಸ್ಥಳವನ್ನು ಸೊಗಸಾಗಿ ಬಳಸಿಕೊಂಡಿದ್ದಾರೆ. ಆಕರ್ಷಕವಾಗುವಂತೆ ಹೂ ಸಸಿಗಳನ್ನು ನೆಟ್ಟು ಮನೆಯನ್ನು ಶೃಂಗಾರಮಾಡಿದ್ದಾರೆ. ಅರಳುತ್ತಿರುವ ಈ ಹೂಗಳ ಮಧ್ಯೆ ಮನೆಗಳು ಅಂದವಾಗಿ ಚೊಕ್ಕಟವಾಗಿ ಕಾಣುತ್ತವೆ.

ನನ್ನನ್ನು ವಿಸ್ಮಯಗೊಳಿಸಿದ ದೊಡ್ಡ ವಿಷಯವೇನೆಂದರೆ ಈ ಇಂಗ್ಲೀಷು ಜನರ ಶ್ರದ್ಧೆ, ಆಸಕ್ತಿ. ಪ್ರತಿಯೊಂದರಲ್ಲೂ ಅವರಿಗೆ ಅತಿ ಶ್ರದ್ಧೆ. ಬೀದಿಯಲ್ಲಿರುವ ಜವಾನ ಹಿಡಿದು ಅರಸುಮಗನವರೆಗೆ ಪ್ರತಿಯೊಬ್ಬನೂ ತನ್ನ ಕೆಲಸವನ್ನು ಅತ್ಯಾಸಕ್ತಿಯಿಂದ ಮಾಡುತಾನೆ. ಸಾಧಾರಣರಾದ ಗಂಡು ಹೆಣ್ಣು ಬಸ್ಸಿನಲ್ಲಿ ಟ್ರಾಮಿನಲ್ಲಿ ಕೆಲಸಕ್ಕೆ ಹೋಗುವಾಗ ಸಮಾಚಾರ ಪತ್ರಿಕೆಗಳನ್ನು ಓದುತ್ತಿರುವ ದೃಶ್ಯ ಇಲ್ಲಿ ಸಾಮಾನ್ಯವಾಗಿ ನೋಡಬಹುದು. ಪ್ರತಿಯೊಂದು ನಿಮಿಷವನ್ನೂ ಹಿಡಿದು ಅದರಿಂದ ಉಪಯೋಗ ಪಡೆಯುವಂತೆ ಕಾಣುತ್ತದೆ. ಯಾರೂ ಕೆಲಸಮಾಡಬೇಕಲ್ಲಪ್ಪ ಎಂದು ಗೊಣಗುವುದಿಲ್ಲ. ಪ್ರತಿಯೊಬ್ಬನೂ ಕೆಲಸ ಎಷ್ಟೇ ಹೆಚ್ಚಿರಲಿ ಲಘುಮನಸಿನಿಂದ ಮಾಡುತ್ತಾನೆ. ಕಡುಕಷ್ಟದ ಕೆಲಸಮಾಡುತಿದ್ದರೂ ಸಿಳ್ಳುಹಾಕುತಲೊ ಇಲ್ಲವೆ ಹಾಡುಹೇಳುತಲೊ ಇರುತ್ತಾನೆ. ನನಗೆ ತಿಳಿದಂತೆ ಇಷ್ಟು ಲಘುಮನಸಿನಿಂದ ಇಷ್ಟು ಕಷ್ಟದ ಕೆಲಸ ಮಾಡುವ ಜನಾಂಗವನ್ನು ನಾನು ಕಂಡ ನೆನಪಿಲ್ಲ. ಗೋಳುಮುಖ ಸುರಿಸುತ್ತ ಜುಗುಪ್ಸೆ ಹೊಂದಿದ ಉದ್ದ ಮುಖವನ್ನ ನೋಡುವುದು ಇಲ್ಲಿ ಅಪರೂಪ.

ಲಂಡನ್ ಪಟ್ಟಣ ಎಂಥ ಚಟವಟಿಕೆಯಿಂದ ಕೂಡಿದ ಸ್ಥಳ. ಚಟುವಟಿಕೆ ಚಟುವಟಿಕೆ, ಹಗಲು ರಾತ್ರಿ ಚಟುವಟಿಕೆ. ಲಂಡನ್ ನಗರದಲ್ಲಿ ಎಷ್ಟೊಂದು ಕೆಲಸ ನಡೆಯುತ್ತದೆನ್ನುವುದನ್ನು ನನ್ನ ಕೈಯಲ್ಲಿ ಊಹಿಸಿಕೊಳ್ಳುವುದಕ್ಕೂ ಆಗದು. ಜನ ಕೆಲಸಮಾಡುತ್ತ ಹೋಗುತ್ತಿದಾರೆ. ಆದರೆ ಕ್ಷಯಿಸುತ್ತ ಮಾತ್ರ ಇಲ್ಲ. ಬಹುಕಾಲ ಬದುಕಿ ಬಾಳುತ್ತಾರೆ.

ನಾನು ಪ್ರಿಂಟಿಂಗ್ ಆಫೀಸು ಸೇರಿದ್ದೇನೆ. ಇನ್ನು ಮೂರು ವರ್ಷ ಕಾಲ ನಾನು ಇಲ್ಲಿ ಕೆಲಸಮಾಡಬೇಕಾಗುತ್ತದೆ. ಈ ಆಫೀಸಿನಲ್ಲಿ ನಾನು ಮಾಡಬೇಕಾದ ಕೆಲಸದ ಕಾಲ ಬೆಳಿಗ್ಗೆ ಎಂಟು ಗಂಟೆಯಿಂದ ಸಾಯಂಕಾಲ ಆರೂವರೆ ವರೆಗೆ........ ...

ಇಂಡಿಯಾದೇಶಕ್ಕೆ ಬಂದು ಹೋಗದೆ ಇರುವ ಇಂಗ್ಲೀಷಿನವನು ಸಾಮಾನ್ಯವಾಗಿ ಮರ್ಯಾದೆಯಿಂದ ನಯವಾಗಿ ನಡೆದುಕೊಳ್ಳುತ್ತಾನೆ. ಇಂಗ್ಲೀಷಿನವನ ನಯ ವಿನಯ ನಡವಳಿಕೆ ತೀರ ಅದ್ಭುತವಾದುದು. ಅವನ ಮನಸಿನಲ್ಲಿ ಏನೆ ಇರಲಿ ಬಾಯಲ್ಲಿ ಮಾತ್ರ ಅತಿ ವಿನಯವಾದ ಮಾತು. ಬೆಂಕಿಪಟ್ಟಣವನ್ನು ಕೈಗೆ ಕೊಡುವಂಥ ಎಷ್ಟೇ ಅಲ್ಪವಾದ ಕೆಲಸಮಾಡಲಿ, ಮಾಡಿಕೊಟ್ಟವನು ಬೀದಿ ಗುಡಿಸುವವನೇ ಆಗಲಿ, ಅವನಿಗೆ "Thank you" ಎಂದು ಹೇಳಲೇಬೇಕು. "Pardon" "Excuse me" "Thank you", "Yes please" "No thank you" "Sorry" ಇಂಥ ಪದಗಳನ್ನು ನಾಗರಿಕ ಎಂದೆನಿಸಿಕೊಳ್ಳಬೇಕೆಂದರೆ ಹೃದ್ಗತ ಮಾಡಿಕೊಳ್ಳಲೇಬೇಕು. ವಿನಯವನ್ನು ಈ ಜನ ಅತಿಗೆ ತೆಗೆದುಕೊಂಡು ಹೋಗಿದಾರೆಂದು ನನಗನಿಸುತ್ತದೆ.

ಈ ಜನ ನಾಯಿಗಳಂತೆ ದುಡಿಯುತ್ತಾರೆ. ದೇವತೆಗಳಂತೆ ಸ್ವರ್ಗ ಸುಖ ಅನುಭವಿಸುತ್ತಾರೆ. ಯಾವಾಗ ನೋಡಿದರೂ ಕೆಲಸ ಮಾಡುತ್ತಲೆ

ಇರುತ್ತಾರೆ. ಅವರ ಮನೆಗೆ ಹೋದರೆ ಸ್ವರ್ಗಕ್ಕೆ ಹೋದಂತೆ ಭಾಸವಾಗುತ್ತದೆ.

ಇಂಗ್ಲೀಷು ಜನ ಇಂಡಿಯಾಕ್ಕೆ ಹೋಗಲು ಅತಿ ಉತ್ಸುಕತೆ ತೋರಿಸುತ್ತಾರೆ. ಅವರು "ಆನೆಗಳು ನಿಮ್ಮ ಬೀದಿಗಳಲ್ಲಿ ಓಡಾಡುತವೆ ಅಲ್ಲವೆ? ಹುಲಿ ಕರಡಿಗಳು ನಿಮ್ಮ ಮನೆಯೊಳಗೆ ನುಗ್ಗುವುವೆ? ನಿಮ್ಮ ಮನೆ ತುಂಬ ಹಾವು ಚೇಳು ತುಂಬಿಕೊಂಡಿವೆ ಅಲ್ಲವೆ? ಇವು, ಆ ಬಿಸಿಲಿನ ಬೇಗೆ ಎರಡಿಲ್ಲದಿದ್ದರೆ ನಾನೂ ಇಂಡಿಯಾಕ್ಕೆ ಹೋಗುತಿದ್ದೆ" ಎಂದು ಹೇಳುತ್ತಾರೆ. ಆದರೆ ಇವರು ಹೋಗುವುದನ್ನು ತಡೆಯುವುದಕ್ಕೆ ಇವುಗಳಲ್ಲ ಕಾರಣ. ದಾರಿಯ ಪ್ರಯಾಣಕ್ಕೆ ತಗಲುವ ವೆಚ್ಚಕ್ಕೆ ಹಣದ ಅಭಾವ, ಮುಂದೆ ಆ ದೇಶಕ್ಕೆ ಹೋದಮೇಲೆ ಅನುಕೂಲ ದೊರೆಯುವುದೋ ಇಲ್ಲವೊ ಎಂಬ ಸಂದೇಹ. ಇವೆರಡೇ ಇವರನ್ನ ತಡೆಗಟ್ಟಿದೆ.

೬.

ಮೊನ್ನೆ ಇಲ್ಲಿ ಸಾಮಾನ್ಯ ಮನುಷ್ಯನೊಬ್ಬನ ಹತ್ತಿರ ಮಾತನಾಡುತಿದ್ದೆ. ಅವನು "ನೀವು ಭಯಂಕರ ದೇವರುಗಳನ್ನು ಪೂಜಿಸುತ್ತೀರಲ್ಲವೆ? ಪ್ರತಿಮೆಯೇ ದೇವರು, ಅದಕ್ಕೂ ದೊಡ್ಡ ದೇವರಿಲ್ಲ ಎಂದು ಭಾವಿಸಿದೀರಲ್ಲವೆ?" ಎಂದು ಪ್ರಶ್ನಿಸಿದ. "ತೋರಿದ ಕಡೆಯಲ್ಲೆಲ್ಲ ಮಹಾಪುರುಷರ ಪ್ರತಿಮೆಗಳನ್ನು ನಿಲ್ಲಿಸಿ, ಅವುಗಳ ಸುತ್ತ ಹೂವಿಟ್ಟು, ಅವರು ಮಾಡಿದ ಮಹಾಕಾರ್ಯಗಳನ್ನು ನೆನಸುತ್ತ ಇರುವ ಯೂರೋಪಿಯನರು ವಿಗ್ರಹಾರಾಧಕರಲ್ಲವೆ?" ಎಂದು ನಾನು ಕೇಳಿದೆ. ತನಗೆ ಯಾವುದರಲ್ಲಿ ಅತಿಯಾದ ಭಕ್ತಿ ಗೌರವವಿರುತ್ತದೆಯೋ ಅದಕ್ಕೆ ಮೂರ್ತಿರೂಪ ಕೊಡುವುದು ಮನುಷ್ಯನ ಸ್ವಭಾವ. ನಮ್ಮಯೋಚನೆ, ಭಾವನೆಗಳು ಶೂನ್ಯವನ್ನು ಅವಲಂಬಿಸಿ ನಿಲ್ಲಲಾರವು. ನಮಗೆ ಪ್ರತಿಮೆ ಒಂದು ಅಗತ್ಯವಾಗಿ ಬೇಕು........ಪೂಜೆಯಲ್ಲೂ ಸಹ ಬೇರೆ ಬೇರೆ ದರ್ಜೆಯ ಪೂಜೆಗಳುಂಟು. ಒಂದು ಬಗೆಯ ತತ್ವವನ್ನು, ಒಂದು ತರದ ಉಪದೇಶವನ್ನು, ಎಲ್ಲ ದರ್ಜೆಯ ಜನರಿಗೂ ಅನ್ವಯಿಸುವುದಾಗದು.

ನಾಗರಿಕನಾಗಿ ತಿಳಿವಳಿಕೆ ಇರುವವನು ತಿಳಿಯುವಷ್ಟು ಸುಲಭವಾಗಿ ವಿದ್ಯಾಭ್ಯಾಸವಿಲ್ಲದವನು ಗೂಢ ತತ್ವಗಳನ್ನಾಗಲಿ, high ethicsನ್ನಾಗಲಿ ತಿಳಿಯಲಾರನು. ಆದರಿಂದ ಈ ಬೇರೆ ಬೇರೆ ಮಟ್ಟದ ಜನರ ಗ್ರಹಿಕೆಗೆ ತಕ್ಕಂತೆ ತಿಳಿವಳಿಕೆಯನ್ನು ನಾವು ಒದಗಿಸಿಕೊಡಬೇಕು. ತಿಳಿವಳಿಕೆ ಹೆಚ್ಚಿಲ್ಲದ ಕಾಡು ಮನುಷ್ಯನಿಗೆ ಭಯಂಕರಾಕಾರದ ದೈವಕ್ಕಿಂತ ಹೆಚ್ಚಿನ ದೈವದ ಕಲ್ಪನೆ ಆಗಲಾರದು. ಅವನು ಅದನ್ನೆ ಪೂಜಿಸಲೇಳಿ. ಅವನಿಗೆ ಅದರಿಂದ ಒಳ್ಳೆಯದೆ ಆಗುತ್ತದೆ. ಅವನಿಗೆ ಸಂತೋಷಕೊಡುತ್ತದೆ. ನಂಬಿಕೆ ಕೊಡುತ್ತದೆ. ಆದರೆ ಅಂಥವನ ಮೆದುಳಿಗೆ ಕ್ರಿಸ್ತನ ದಿವ್ಯವಾದ ಬೋಧೆಯನ್ನು ಹಿಡಿಸಹೋದರೆ ಆದರಿಂದ ಅವನಿಗೆ ಏನೂ ಉಪಯೋಗವಾಗಲಾರದು. ಕಾರಣ, ಅವನು ಅದನ್ನು ಗ್ರಹಿಸಲಾರನು. ಅದರಿಂದಲೇ ಹಿಂದೂ ಧರ್ಮದಲ್ಲಿ ಎಲ್ಲ ಬಗೆಯ ಜನರೂ ತಮ್ಮ ತಮ್ಮ ತಿಳಿವಳಿಕೆಗೆ ಅನುಸಾರವಾಗಿ ದೇವರನ್ನು ಆರಾಧಿಸುವ ಅವಕಾಶವಿದೆ.

ಇಷ್ಟೆಲ್ಲ ವಾದವಾದಮೇಲೆ ನನ್ನಮಾತು ಆ ಮನುಷ್ಯನಮೇಲೆ ಸ್ವಲ್ಪ ಪರಿಣಾಮ ಉಂಟುಮಾಡಿದಂತೆ ಕಂಡಿತು. ಇದೇ ವಿಷಯವಾಗಿ ಮತ್ತೂ ತಿಳಿಯಬೇಕೆಂದು ನನ್ನನ್ನು ಮನೆಗೆ ಆಹ್ವಾನಿಸಿದ. ಈಗ ಅವನಿಗೆ ನನ್ನ ಮೇಲೆ, ನನ್ನ ದೇಶದವರ ಮೇಲೆ ಹಿಂದಿನದಕ್ಕಿಂತ ಹೆಚ್ಚಿನ ಗೌರವ ಉಂಟಾಗಿದೆ ಎಂದು ಖಚಿತವಾಗಿ ಹೇಳಬಲ್ಲೆ. ಅದರಿಂದ ಇಲ್ಲಿನ ಜನಕ್ಕೆ ನಮ್ಮ ಧರ್ಮ ನಮ್ಮ ಆಚಾರಗಳನ್ನು ತಿಳಿಸಿ ಇವರ ಮನಸನ್ನು ವಿಕಾಸಗೊಳಿಸುವ ಅವಕಾಶ ಬಹುವಾಗಿ ಇದೆ.

೭.

ಇಲ್ಲಿ ಸಸ್ಯಾಹಾರ ತಿಂದು ಜೀವಿಸುವುದು ಸಾಧ್ಯ. ಮಾಂಸವಾಗಲಿ ಮದ್ಯವಾಗಲಿ ಕುಡಿದೇತೀರಬೇಕೆಂದಿಲ್ಲ. ಸುತ್ತಲ ಆವರಣ ಇಂಥ ಊಟದ ಕಡೆಗೆ ಮನ ಹರಿಯುವಂತೆ ಮಾಡುತ್ತದೆಯೇ ಹೊರತು ಬೇರೆ ಏನೂ ಇಲ್ಲ. ಇಲ್ಲಿನ ಜನ ಮಾಂಸಾಹಾರವನ್ನು ಸಿದ್ಧಪಡಿಸುವುದರಲ್ಲಿ ಮಾತ್ರ ಚತುರರಾದ

ಕಾರಣ ಇವರು ಅಡಿಗೆ ಮಾಡಿ ಬಡಿಸುವ ಸಸ್ಯಾಹಾರ ಅಷ್ಟು ರುಚಿಯಾಗಿರುವುದಿಲ್ಲ. ಒಂದೇ ತರದ ರುಚಿಯನ್ನು ನೋಡಿ ನಾವು ಬೇಸರಬೀಳುವುದು ಸಹಜ. ಬೇಕಾಗುವ ಸಾಮಾನುಗಳನ್ನು ತಂದುಕೊಟ್ಟು ಮಾಡುವ ರೀತಿಯನ್ನು ತೋರಿಕೊಟ್ಟರೆ ಅದರಂತೆ ಮಾಡುವುದಕ್ಕೆ ಇಲ್ಲಿನವರು ತಯಾರಾಗಿದಾರೆ. ಆದರೆ ಯಾರೂ ಈ ಕಷ್ಟ ತೆಗೆದುಕೊಳ್ಳುವುದಿಲ್ಲ. ಅದೇಕೆ, ಆಕ್ಸ್‌ಫರ್ಡ್‌ನಲ್ಲಿ ಉತ್ತರದ ಕಡೆಯಿಂದ ಬಂದಿರುವ ಹಿಂದೀ ಹುಡುಗ ತಾನಿರುವ ಮನೆಯಾಕೆಗೆ ಮಿಠಾಯಿ ಚಪಾತಿ ಅನ್ನ ಸಾರು ಚಟ್ನಿ ಇವುಗಳನ್ನ ಮಾಡುವುದನ್ನು ಹೇಳಿಕೊಟ್ಟಿದಾನೆ. ಆಕೆ ಈ ಎಲ್ಲ ಅಡಿಗೆಯನ್ನು ರುಚಿಯಾಗಿ ಮಾಡಿ ಬಡಿಸಿದುದನ್ನು ಕಂಡು ನಾನು ಅತಿಯಾಗಿ ಸಂತೋಷಪಟ್ಟೆ. ಎಲ್ಲ ನಮ್ಮ ಕೈಯಲ್ಲಿದೆ. ನಾವು ಸುಮ್ಮನೆ ಪಾಶ್ಚಾತ್ಯರ ಚಾಳಿಗಳನ್ನು ಅನುಸರಿಸುತ್ತಿದೇವೆ....ನಮ್ಮ ದೇಶದಿಂದ ಇಲ್ಲಿಗೆ ಬರುವವರೆಲ್ಲರೂ ಇನ್ನೂ ಹುಡುಗರು ; ಅನುಭವವಿಲ್ಲದವರು. ಹೊಸದನ್ನು ಕಂಡರೆ ಬಾಯಿ ಬಾಯಿ ಬಿಡುತಾರೆ. ಇಂಗ್ಲೀಷಿನವರ ಊಟ ಯಾವ ತರ ಇದೆ ಎಂದು ತಿಳಿಯಲು ಇಷ್ಟಪಡುತಾರೆ. ತಮ್ಮ ದೇಶದ ಊಟವನ್ನು ಮರೆತು ಬಿಡುತಾರೆ. ಊಟದಲ್ಲಿ ಹೇಗೊ ವೇಷದಲ್ಲಿಯೂ ಹಾಗೆಯೇ. ಇಲ್ಲಿ ನಾವು ನಮ್ಮ ರುಮಾಲುಗಳನ್ನು ಹಾಕಿಕೊಂಡೇ ಯಾಕೆ ತಿರುಗಾಡಬಾರದೊ ನನಗೆ ತಿಳಿಯದು. ಹೀಗೆ ಮಾಡಿದರೆ ಎಲ್ಲರೂ ನಮ್ಮನ್ನು ನಿಟ್ಟಿಸುತ್ತಾರೆ ಎಂದು ಕೆಲವರು ಹೇಳುತ್ತಾರೆ. ಈಗಾಗಲೆ ನಮ್ಮನ್ನು ನಿಟ್ಟಿಸಿ ನೋಡುವುದಿಲ್ಲವೆ ಕಪ್ಪುಬಣ್ಣದ ಜನರೆಂದು. ಇಲ್ಲಿನ ಜನಕ್ಕೂ ನಮ್ಮ ವೇಷ ಒಗ್ಗಬೇಕು. ಎರಡು ದಿನ ಜನ ನಮ್ಮನ್ನು ದೃಷ್ಟಿಸಿ ನೋಡಿಯಾರು. ಆಮೇಲೆ ಎಲ್ಲ ಸರಿ ಹೋಗುತ್ತದೆ. ಇಲ್ಲಿನ ಜನ ನಾವು ನಮ್ಮ ದೇಶದಲ್ಲಿಯೂ ಹ್ಯಾಟ್‌ಗಳನ್ನು ಧರಿಸಿಯೇ ಓಡಾಡುತ್ತಿದೇವೆಂದು ತಿಳಿದಿದ್ದಾರೆ! ಪಂಜಾಬಿಗಳು ಒಳ್ಳೆಯ ಉದಾಹರಣೆ ಹಾಕಿ ಕೊಡುತ್ತಿದಾರೆ. ಯಾವಾಗಲೂ ತಮ್ಮ ರುಮಾಲನ್ನು ಧರಿಸಿಯೇ ಇರುತ್ತಾರೆ. ಪಾರ್ಸಿ ಹೆಂಗಸರೂ ಸಹ ತಮ್ಮ ದೇಶದ ಉಡುಪನ್ನು ಯಾವಾಗಲೂ ಧರಿಸಿಯೇ ಇರುತ್ತಾರೆ. ಇವರ ರುಮಾಲನ್ನಾಗಲಿ ಅವರ ಸೀರೆಯನ್ನಾಗಲಿ ಯಾರೂ ನಿಟ್ಟಿಸುತ್ತ ನಿಲ್ಲುವುದಿಲ್ಲ. ನಮ್ಮ ಮೂರ್ಖತನವೆ ನಾವು ಹ್ಯಾಟನ್ನು ಧರಿಸುವಂತೆ ಮಾಡಿದೆ. ನಾವೇನಾದರೂ

ರುಮಾಲನ್ನೆ ಹಾಕಿಕೊಂಡ ಪಕ್ಷಕ್ಕೆ ಇಲ್ಲಿನ ಜನ ನಮ್ಮನ್ನು ಮೆಚ್ಚುತ್ತಾರೆ ನಮ್ಮ ದೇಶಪ್ರೇಮ ಕಂಡು ಗೌರವಿಸುತ್ತಾರೆ.

೮.

ಹೊಸ ವರುಷವೆಂದರೆ ಇಲ್ಲಿ ದೊಡ್ಡ ಹಬ್ಬವೆ. ವಾಸ್ತವವಾಗಿ ಅದನ್ನು ಗಂಟೆ ಹೊಡೆದೇ ಬರಮಾಡಿಕೊಳ್ಳುತಾರೆ. ಮಧ್ಯರಾತ್ರಿಯ ಹೊತ್ತಿಗೆ ಎಲ್ಲ ಚರ್ಚುಗಳೂ ಗಂಟೆ ಬಾರಿಸಿದುವು. ಎಲ್ಲ ಹಡಗುಗಳೂ ಜಹಜುಗಳೂ ತಮ್ಮ ಸೀಟಿ ಊದಿದುವು. ಪ್ರತಿ ಮನೆಯಲ್ಲೂ ಗಂಟೆಬಾರಿಸಿದರು. ಗಂಡಸರು ಹೆಂಗಸರು ರಸ್ತೆ ದಾಟಿ ಎದುರು ಮನೆಗಳಿಗೆ ಹೋಗಿ ಅಲ್ಲಿನವರ ಕೈಕುಲಿಕಿ ಹೊಸ ವರುಷದಲ್ಲಿ ಒಳ್ಳೆಯದಾಗಲಿ ಎಂದು ಹರಸಿ ಬಂದರು. ಎಲ್ಲ ಮುಖ್ಯವಾದ ಹೋಟಲುಗಳಲ್ಲಿಯೂ ಸಂತೋಷಕೂಟಗಳು ನೆರೆದು ಜನರು ಗಂಟೆಬಾರಿಸಿ ಕುಣಿತ ಕೂಗು ಕೇಕೆಗಳಿಂದ ಹೊಸವರುಷವನ್ನು ಬರಮಾಡಿಕೊಂಡರು. ಇಂಗ್ಲೀಷು ಜನರಿಗಿಂತ ಸ್ಕಾಚ್ ಜನರು ಹೊಸ ವರುಷದ ಆಗಮನವನ್ನು ಅತಿ ವೈಭವದಿಂದ ನೆರವೇರಿಸುತ್ತಾರೆ. St. Paul's Church ನಲ್ಲಿ ಅಸಾಧ್ಯ ಜನಸಂದಣಿ. ಅಲ್ಲಿನ ಅಗಾಧವಾದ ಗಂಟೆಗಳು ತರಂಗತರಂಗವಾಗಿ ನಾದಮಾಡಲು ನೆರೆದಿದ್ದ ಜನ ಸಮೂಹವೆಲ್ಲ ಒಂದೇ ಸ್ವರದಿಂದ ಜಯಜಯಕಾರ ಮಾಡಿದರು. ಎಲ್ಲಿ ನೋಡಿದರೂ ನಿರ್ಮಲವಾದ ನಗು, ಉರುಳಾಡುವಂಥ ನಗು. ಟೆನಿಸನ್ ಕವಿ ಬರೆದ, Ring out the old and ring in the new ಎಂದು. ಈ ಸಂಪ್ರದಾಯದ ಅಕ್ಷರಶಃ ಅನುವಾದ ಇದು.

ನಮ್ಮ ನಾಡವರಿಗಿಂತಲೂ ನಮಗೆ ಹೆಚ್ಚು ಪರಿಚಿತರಾದ ಇಲ್ಲಿನ ಕವಿಗಳು ಕತೆಗಾರರು ತಾತ್ವಿಕರು ವಾಗ್ಮಿಗಳು ಇವರಿದ್ದ ನಾಡಿನಲ್ಲಿಯೇ ನಾವಿದ್ದೇವೆಂದು ತಿಳಿಯುವುದೇ ಒಂದು ಬಗೆಯ ರೋಮಾಂಚ ಹುಟ್ಟಿಸುತ್ತದೆ. Tennyson, Wordsworth, Goldsmith, Johnson, Dickens, Fielding ಇವರ ಕೃತಿಗಳನ್ನು ಓದಿ ಇನ್ನಿಲ್ಲದ ಸಂತೋಷ

ವನ್ನು ಪಡೆದಿದೇವೆ ಅದರಿಂದಲೇ ಅವರೆಲ್ಲ ನಮ್ಮವರೇ ಎಂದು ಅಂದು ಕೊಳ್ಳುತ್ತೇವೆ. ಪುಸ್ತಕ ಓದಿದ ಮಾತ್ರಕ್ಕೆ ಇಂಥ ಆತ್ಮೀಯಭಾವ ಪ್ರೇಮ ಉತ್ಸುಕತೆ ಇವೆಲ್ಲ ತಲೆದೋರಬೇಕಾದರೆ ಅವರು ಜೀವಿಸಿದ್ದು ಬಾಳಿ ಬೆಳೆದ ದೇಶದಲ್ಲಿಯೇ ನಾವಿರುವಾಗ ಇನ್ನೆಷ್ಟುತಾನೆ ಹೆಚ್ಚಲಾರವು.

ಕಳೆದ ಭಾನುವಾರ ನಾನು ದಿನ ದಿನ ತಿರುಗಾಡುತಿದ್ದ ಬೀದಿಗಳನ್ನು ಬಿಟ್ಟು ಲಂಡನಿನ ಸಂದಿಗೊಂದಿಗಳಲ್ಲಿ ಅಲೆದಾಡಿದೆ. ಗತಿಸಿಹೋದ ಮಹ ನೀಯರು ತಮ್ಮ ಜೀವಿತದ ಕಾಲದಲ್ಲಿ ಬದುಕಿ ಬಾಳಿದ ಮನೆಗಳನ್ನು ನೋಡುತ್ತ ಹೋದೆ. ಮಿಕ್ಕವರಿಗೆ ನನ್ನ ಈ ಅಲೆದಾಟ ವ್ಯರ್ಥವಾಗಿ ತೋರಬಹುದು. ಆದರೆ ನನಗೇನೊ ಅದರಿಂದ ಅತಿಯಾದ ಆನಂದ ವಾಯಿತು. ಡಿಕನ್ಸ್ ಜಾನ್ಸನ್ ಅವರಿದ್ದ ಮನೆಗಳನ್ನು ನೋಡಿದೆ. ಡಿಕನ್ಸ್ ವಾಸಮಾಡಿದ್ದ ಮನೆಯ ಮುಂದೆ ಬಹುಕಾಲ ಬಾಯಿಬಿಟ್ಟು ನಿಂತು ನೋಡಿದೆ. ನೋಡುವಂಥದೇನೂ ಅಲ್ಲಿರಲಿಲ್ಲ. ಅದು ಸಾಧಾರಣವಾದ ಒಂದುಮನೆ ಮಾತ್ರ. ಡಿಕನ್ಸ್ ವಾಸವಾಗಿದ್ದ ಜಾಗ ಎಂದು ಬರೆದಿದ್ದ ಒಂದು ಹಲಗೆ ಮಾತ್ರ ಇತ್ತು ಅಷ್ಟೆ. ಆದರೂ ನನಗೆ ಅದರಲ್ಲಿ ಏನೊ ಅತಿಶಯ ಕಂಡಿತು. ಈ ಲೇಖಕರು ತಮ್ಮ ಕೃತಿಗಳಲ್ಲಿ ಬಣ್ಣಿಸಿರುವ ಹಳೆಯಕಾಲದ ಮನೆಗಳು ಹೋಟಲುಗಳು ಸಂದಿಗಳು ಎಲ್ಲವನ್ನೂ ನೋಡಿದೆ. ಅತಿಶಯುವಾದುದೇನೂ ಅಲ್ಲಿಲ್ಲ. ಆದರೂ ಮನಸನ್ನು ಆಹ್ಲಾದ ಗೊಳಿಸುತ್ತದೆ. ಅನುಭವಮಾಡುವವನಿಗೇ ಗೊತ್ತು ಅದರ ಸವಿ.

೯.

ಇಲ್ಲಿ ದಿನ ಯಾವುದಾದರೊಂದು ಬೆರಗುಗೊಳಿಸುವ ಸುದ್ದಿ ಇದ್ದೇ ಇರು ತ್ತದೆ. ಈಗ ಸದ್ಯಕ್ಕೆ ದಕ್ಷಿಣ ಧ್ರುವಕ್ಕೆ ಹೋಗಿ ಮಡಿದ Captain Scottನ ವಿಷಯವೆ ಎಲ್ಲೆಲ್ಲೂ. ರಾಷ್ಟ್ರವೆಲ್ಲ ಸೇರಿ ಇಂದು ಮೃತನಿಗೆ ವಂದನೆ ಸಲ್ಲಿಸುತ್ತಿದೆ. ಇಲ್ಲಿನ ದೊರೆ St. Paul's Church ನಲ್ಲಿ ಹಾಜ ರಿರುತ್ತಾರೆ. ಎಲ್ಲ ಕೆಲಸವೂ ಮಧ್ಯಾಹ್ನ ಐದು ನಿಮಿಷ ಕಾಲ ನಿಲ್ಲಿಸಲ್ಪಡು

ತ್ತದೆ....ಏನು ಅದ್ಭುತವಾಗಿ ಜನ ಈ ದಿನ ಆಚರಿಸಿದರು! ಈ ಸತ್ತ ಜನ ತೋರಿಸಿದ ಆತ್ಮತ್ಯಾಗವನ್ನೆ ಜನರೆದುರಿಗೆ 'ಇದೇ ನಮ್ಮ ದೇಶದವರ ಮುಖ್ಯ ಲಕ್ಷಣ' ಎಂದು ಮುಂದುಮಾಡಿ ತೋರಿಸಿ ದೇಶದ ಯುವಕರನ್ನು ಉತ್ತೇಜನಗೊಳಿಸುತ್ತಿದ್ದಾರೆ. ಈ ವೀರರು ಸಾವನ್ನು ಅತಿ ಧೈರ್ಯದಿಂದ ಎದುರಿಸಿದರು. ಒಬ್ಬನಂತೂ ಮಿಕ್ಕವರು ಉಳಿಯಲೆಂದು ತಾನಾಗಿ ಹೊರಗೆ ನಡೆದು ಸಾವಿನ ಪಾಲಾದ. ಇದೇ ಧರ್ಮ, ಈ ರೀತಿಯ ಧರ್ಮವೆ ಚಿರ ಕಾಲ ಉಳಿಯುವುದು. ಇಂಥ ದೊಡ್ಡ ಮನಸು, ಇಂಥ ಆತ್ಮತ್ಯಾಗ, ಪರೋಪಕಾರಬುದ್ಧಿ, ಇವುಗಳಿಗಿಂತ ಹೆಚ್ಚಿನ ಧರ್ಮವಿಲ್ಲ. ಈ ಧರ್ಮವೆ ಈ ರಾಷ್ಟ್ರವನ್ನು ಹಿರಿಯದನ್ನಾಗಿ ಮಾಡಿದೆ.

ನಮ್ಮ ದೇಶದಲ್ಲಿಯೂ ಆತ್ಮತ್ಯಾಗದ ನಿದರ್ಶನಗಳು ಎಷ್ಟೊ ಇವೆ. ಆದರೆ ಇವುಗಳಲ್ಲಿ ಬಹು ಅಂಶ ರಾಮಾಯಣ ಮಹಾಭಾರತ ಮತ್ತು ಇತರ ಪುರಾಣ ಕಾವ್ಯಗಳಲ್ಲಿ ದೊರೆಯುವಂಥವು. ಇವುಗಳನ್ನೆ ಹೇಳಿಕೊಂಡು ನಾವು ಇನ್ನಿಲ್ಲದ ಹೆಮ್ಮೆಪಟ್ಟುಕೊಳ್ಳುತಿದ್ದೇವೆ. ಇಂಥ ನಿದರ್ಶನಗಳು ಈಗ ಎಷ್ಟುತಾನೆ ಇವೆ ? ಒಲಿ ತೋರಿಸಿದಂಥ ಆತ್ಮತ್ಯಾಗ ಇನ್ನೂ ನಮ್ಮ ದೇಶದಲ್ಲಿ ಜೀವಂತವಾಗಿ ಉಳಿದಿದೆಯೆ ? ನನ್ನ ಪ್ರಶ್ನೆಗೆ ಉತ್ತರ ಕೊಡು. ನಿನ್ನ ಉತ್ತರದ ಮೇಲೆಯೇ ನಮ್ಮ ದೇಶದ ಸೋಲು ಅಥವಾ ಗೆಲುವಿನ ಗುಟ್ಟು ಗೊತ್ತಾಗುತ್ತದೆ.

ಸಫ್ರಜೆಟ್ ಹೆಂಗಸರು ಇಲ್ಲಿ ದಿನದಿನ ಮಾಡುತಿರುವ ಹಾವಳಿಯನ್ನು ಕಂಡು ಜನ ಗಾಬರಿಗೊಳ್ಳುತ್ತಿದಾರೆ. ಅಂಗಡಿಯ ಕಿಟಕಿಗಳನ್ನು ಒಡೆಯು ವುದರಿಂದ ಮೊದಲಾಯಿತು ಇವರ ಕೆಲಸ. ಆಮೇಲೆ ಟಪಾಲು ಪೆಟ್ಟಿಗೆಗೆ ಹಾಕಿದ ಕಾಗದಗಳಿಗೆ ಬೆಂಕಿ ಹಾಕಿ ಇಲ್ಲವೆ ಬಣ್ಣ ಸುರಿದು ಕುಲಗೆಡಿಸಲು ಮೊದಲುಮಾಡಿದರು. ಈಗ Golf ಮೈದಾನಗಳನ್ನು ಹಾಳುಮಾಡುತ್ತಿದಾರೆ. ಮನೆಗಳಿಗೆ ಬೆಂಕಿ ಹಚ್ಚುತ್ತಿದಾರೆ. ಬಾಂಬುಗಳನ್ನು ಎಸೆಯುತ್ತಿದಾರೆ. ಅವರ ಮುಖಂಡರುಗಳು ಬಹಿರಂಗವಾಗಿ ಇವೆಲ್ಲ ಒಳ್ಳೆಯ ಕೆಲಸಗಳೆಂದೂ, ವೋಟುಗಳನ್ನು ಹೆಂಗಸರಿಗೆ ಕೊಡದೆ ಹೋದರೆ ಇಂಥವೇ ಕೆಲಸಗಳನ್ನು ಮಾಡುತ್ತ ಹೋಗುತ್ತೇವೆಂದೂ ಸಾರುತ್ತ ಹೇಳುತ್ತಿದಾರೆ.

ಇಲ್ಲಿನ ಸರಕಾರ ಇವರನ್ನು ತಡೆಯುವುದಕ್ಕೆ ಯಾವರೀತಿಯ ಕಾರ್ಯಕ್ರಮ ವನ್ನೂ ಕೈಗೊಂಡಿಲ್ಲ. ಇಂಥ ಕಾರ್ಯವೇನಾದರೂ ಇಂಡಿಯಾದಲ್ಲಿ ನಡೆದಿದ್ದರೆ – ನಾವು ಸ್ವಾತಂತ್ರ್ಯ ಸಂಪಾದನೆಗೇ ಈ ಕೆಲಸಮಾಡಿದೆವೆಂದು ಹೇಳಿದರೂ – ಅದಕ್ಕೆ ರಾಜದ್ರೋಹ ಎಂದು ಹೆಸರಿಡುತ್ತಿದ್ದರು. ಇಂಡಿಯಾ ಇಂಗ್ಲೆಂಡಲ್ಲ. ಇಂಡಿಯನರು ಇಂಗ್ಲೀಷರ ನೆಂಟರಲ್ಲ. ಆಳುವವರು ಅಧೀನರ ವಿಷಯವಾಗಿ ಸಂದೇಹ ಇಟ್ಟುಕೊಂಡೇ ಇರುತ್ತಾರೆ. ಸಫ್ರಜಿಟ್‌ರ ವಿಷಯ ಹಾಗಲ್ಲ.

## ೧೦.

### ಸೇಂಟ್‌ಪಾಲ್ಸ್ ಚರ್ಚು

ಹೋದ ಭಾನುವಾರ ಇಲ್ಲಿನ ಸೇಂಟ್‌ಪಾಲ್ಸ್ ಚರ್ಚಿಗೆ ಪೂಜೆಯ ಸಮಾರಂಭದ ಹೊತ್ತಿಗೆ ಹೋಗಿದ್ದೆ. ಇಲ್ಲಿನ ಸಭಾಂಗಣ ಅದ್ಭುತವಾದ ಕೃತಿ. ಇಲ್ಲಿನ Organ ಮತ್ತು Orchestra ಕೂಡ ಕುಂದಿಲ್ಲದುವು. ಸುತ್ತ ಮುತ್ತ ಇರುವ ಮಹನೀಯರ ಸ್ಮಾರಕಗಳು, ಅತಿ ಗಂಭೀರವಾದ ಸಂಗೀತ ಧ್ವನಿ, ಅಲ್ಲದೆ ಏಸುಮಹಾತ್ಮನ ಆತ್ಮತ್ಯಾಗಮಯವಾದ ಜೀವನದಲ್ಲಿ ನನಗಿರುವ ಅಗಾಧವಾದ ಭಕ್ತಿ, ಇವೆಲ್ಲ ಒಟ್ಟುಗೂಡಿ ಮನಸಿನಲ್ಲಿ ಶಾಶ್ವತವಾದ ಗಾಢವಾದ ಪ್ರಭಾವವನ್ನುಂಟುಮಾಡಿದುವು.

ನಾನು ಈ ಚರ್ಚಿನಲ್ಲಿರುವಾಗ್ಗೆ ನನ್ನ ಮನಸನ್ನು ಬೆರಗುಗೊಳಿಸುವಂಥ ಈ ಕಟ್ಟಡದ ವಿಷಯವೆ ಆವರಿಸಿಕೊಂಡಿತ್ತು. ದೇವಾಲಯ ಅತಿ ನಿಶ್ಶಬ್ದವಾಗಿತ್ತು. ಎಲ್ಲಿ ನೋಡಿದರೂ ನಶಿಸಿಹೋದವರ ನೆನಪನ್ನು ತರುವಂಥ ಗುರುತುಗಳೇ ಕಾಣುತಿದ್ದುವು. ಬೈಬಲಿನಿಂದ ಎತ್ತಿಕೊಂಡ ಸಂಗತಿಗಳನ್ನು ತೋರಿಸುವ ಬಣ್ಣದ ಗಾಜಿನ ಕಿಟಕಿಗಳು ಇದ್ದುವು. ಇವನ್ನೆಲ್ಲ ನೋಡಿ ಜೀವನ ಎಷ್ಟು ಕ್ಷಣಿಕವಾದುದು ಎಂದು ಅಂದುಕೊಳ್ಳದೆ ಇರಲಾಗುತಿರಲಿಲ್ಲ. ನಾವು ಜೀವಿಸಿರುವುದು ಸಾಯುವುದಕ್ಕೇ ಎಂದು ನನಗನ್ನಿಸಿತು. ಇಂಥದೇ ಒಂದು ಭಾವನೆ ನಾನು ಈ ದೇಶದಲ್ಲಿ ಚರ್ಚುಗಳ ಒಳಗೆ ಹೋದಾಗಲೆಲ್ಲ

ಆವರಿಸುತ್ತದೆ. ಜೀವನವಿಷ್ಟು ಕ್ಷಣಿಕವಾಗುವುದನ್ನು ಇಲ್ಲಿ ಸ್ವಂತವಾಗಿ ಅನುಭವಮಾಡಿದಂತಾಗುತ್ತದೆ. ಹಾರಿಹೋಗುವ ಜೀವದ ಉಸಿರು ಹೊರ ಹೊರಟಂತೆಯೇ ಆಗುತ್ತದೆ. ಸಾವು ಕತ್ತಲು ಮುಂದೆ ಕಾದಿದೆ ಎಂದು ತಿಳಿದು ಏನೋ ಒಂದು ಬಗೆಯ ಭಯವಾಗುತ್ತದೆ. ಚರ್ಚು ಅತಿ ನಿಶ್ಶಬ್ದವಾಗಿರುತ್ತಾದರೂ ಆ ನಿಶ್ಶಬ್ದತೆಯೇ ಎದ್ದುಬಂದು ನೋಡು ಜೀವನ ಎಷ್ಟು ಕ್ಷಣಿಕ ಎಂದು ಕೂಗಿ ಹೇಳುವಂತೆ ಆಗುತ್ತದೆ. ಆ ನಿಶ್ಶಬ್ದ ವಾತಾವರಣ ಬೆರಗುಗೊಳಿಸುತ್ತದೆ, ಭೀತಿಗೊಳಿಸುತ್ತದೆ. ಸಾವಿನ ಭದ್ರಮುಷ್ಟಿಯಲ್ಲಿ ಇದ್ದೇವೆಂದು ತಿಳಿಸಿ ದೇವರೇ ನಮ್ಮನ್ನು ಈ ಸಾವಿನಿಂದ ಪಾರುಗಾಣಿಸು ಎಂದು ಕಾಲೂರಿ ಕೈಮುಗಿದು ಬೇಡಿಕೊಳ್ಳುವಂತೆ ಮನಸು ಪ್ರೇರಿಸುತ್ತದೆ. ಅಂತೂ ಈ ಚರ್ಚುಗಳಿಗೆ ಹೋದರೆ ಸಾವೆನ್ನುವುದು ಇಲ್ಲ, ಎತ್ತ ನೋಡಿದರೂ ಜೀವವಿದೆ ಆನಂದಗೊಳಿಸುವ ಶಾಶ್ವತ ಜೀವಶಕ್ತಿ ಎಲ್ಲೆಲ್ಲು ಇದೆ ಎಂದು ನನಗಂತೂ ಅನಿಸುವುದೇ ಇಲ್ಲ.

When in Westminister Abbey, I listened with tearful eyes the soul stirring hymns sung with deep mouths and rousing sorrow to the accompaniment of the engine driven organs which vibrated the same tones and heightened the effect to still greater degree, when I saw the busts of all the long buried poets and philosophers looking on us with their cold faces and striking on us living imaginations, when I felt with every vibration of my nerves the soul enthralling cadence of the doleful sorrow-stricken voice raised in supplicating hymns from thousands of mouths slowly, solemnly, gravely and heart rendingly, when I saw and felt all this, I felt crushed under the weight of sorrow, under the undermining impression that everything

is fleeting and nothing remains and I was loaded with despondency, melancholy, sorrow and tears. I looked for joy but felt sorrowful and deeply impressed. I did not feel elated but downcast and went out with downcast looks with the rest of the assembly. It seems to me that these people adorn their churches with tombstones and teach them the lesson of death and fear of God. They are awestricken and therefore kneel down and pray and supplicate Jesus Christ to intervene and get them deliverance from this awful tragedy of death. The whole attention seems to be centred on the terrible reality of death and not on the glorious positivity of immortality. Prayer offered for the deliverance from death and sin is quite different from that offered for the purpose of elevating the soul and making it shine with its manifested divine essense. The christian prayer and hymn seem to be hollow supplications after the manner of a whipped and terrified child kneeling before its father and asking for its pardon not to whip any more, because he will be good hereafter. This kind of prayer surely wont be heard. If a soul striving after perfection fails to attain it after constant endeavour, it bursts forth in sheer helplessness into prayer and such intent and genuine and true prayer will be answered............The innumer-

able sages of India yearned after God and ages did not touch them. But even while a single flaw was found in them they did not attain perfection.

But I am sorry that our temples do not in anywise teach any lesson whatsoever. The churches have at least the saving grace of impressing us with the unreality of the fleeting life and awakening us to the fact that we should look to God for redemption. But our temples do not give us any impression whatsoever unless you yourself by your true love invest them with any influence. They are not clean. They are the rendezvous of worst crimes and the scenes of passing forms of worship. Our temples ought to be reformed in such a manner that when you enter the precincts you should be impressed with the goodness of God, His grace, His powers of redemption, provided we are sincere and live the true life. Some ancient temples which have escaped the present day worship breathe some inspiration, but that is not enough. Every temple should breathe the fragrance of beauty, purity and joy of deliverance instead of at present giving out the smells of dirt and filth.

## ೧೧.

### ಸಚಿತ್ರ ಪತ್ರಿಕೆಗಳು

ನಮ್ಮ ಪತ್ರಿಕೆಯನ್ನು ಸಚಿತ್ರವನ್ನಾಗಿ ಮಾಡಬೇಕೆಂದಿದ್ದ ನನ್ನ ಇಷ್ಟ ಲಂಡನಿಗೆ ಬಂದಮೇಲೆ ಇನ್ನೂ ಬಲವಾಗಿದೆ. ಪ್ರತಿದಿನ ಬೆಳಗಿನಿಂದ ರಾತ್ರಿಯವರೆಗೆ ಇಲ್ಲಿನ ಜನ, ಕೆಲಸಗಾರರು ಮೊದಲುಗೊಂಡು ಸಭ್ಯರವರೆಗೆ, ಎಲ್ಲರೂ ಮೇಲೆಬಿದ್ದು ಸಚಿತ್ರ ಪತ್ರಿಕೆಗಳನ್ನು ಕೊಳ್ಳುವುದನ್ನು ನೋಡಿದ್ದೇನೆ. ಸಾಧಾರಣನಾದವನ ಮನಸನ್ನು ಯಾವ ಬರವಣಿಗೆಯೂ ಈ ಚಿತ್ರಗಳಂತೆ ಸೆಳೆಯುವುದಿಲ್ಲ. ಲಾರ್ಡ್ಸ್‌ನಲ್ಲಿ ನಡೆಯುವ ಕ್ರಿಕೆಟ್ ಆಟವಿರಬಹುದು, ಸುಧಾರಣೆಗಳ ಪಿತಾಮಹನಾದ ಲಾಯಿಡ್ ಜಾರ್ಜ್ ಇನ್ಷೂರೆನ್ಸ್ ಕಾನೂನಿನಮೇಲೆ ಮಾಡಿದ ಉಪನ್ಯಾಸವಿರಬಹುದು, ಅಥವಾ ಭಯಾನಕವಾದ ವಿಮಾನ ಅಪಘಾತದ ವಿಷಯವಿರಬಹುದು, ಈ ಎಲ್ಲ ಘಟನೆಗಳೂ ಆದ ಕೆಲ ಹೊತ್ತಿನಲ್ಲಿಯೇ ಚಿತ್ರರೂಪವಾಗಿ ಹೊರಬೀಳುತ್ತವೆ. ಇಲ್ಲಿನ ಜನ ಪತ್ರಿಕೆಗಳನ್ನು ಕೊಳ್ಳುವುದಕ್ಕೆ ಹುಚ್ಚರಂತೆ ನುಗ್ಗುವುದನ್ನು ನೀನು ನೋಡಬೇಕು. ದಾರಿಯಲ್ಲಿ, ರೈಲಿನಲ್ಲಿ, ಬಸ್ಸಿನಲ್ಲಿ, ಎಲ್ಲಿ ನೋಡಿದರೂ ಒಂದು ಪ್ರತಿ ಇದ್ದೇ ಇರುತ್ತದೆ. ಅದರಲ್ಲಿರುವ ಸಮಾಚಾರವನ್ನು ಕುಡಿದು ಬಿಡುವಂತೆ ಒಂದೇ ಸಮನೆ ಓದುತಿರುತ್ತಾರೆ. ಬೆಳಗಿನ ಪತ್ರಿಕೆಗಳಿವೆ, ಮಧ್ಯಾಹ್ನದ ಪತ್ರಿಕೆಗಳಿವೆ, ಸಂಜೆಯ ಪತ್ರಿಕೆಗಳಿವೆ. ಹಾಸಿಗೆಯಿಂದೆದ್ದು ಬೆಳಗ್ಗೆ ಊಟ ಮಾಡುವ ಹೊತ್ತಿಗೆ ಊಟದ ಜೊತೆಗೆ ಪೇಪರೂ ಸಹ ಊಟದ ಮೇಜಿನಮೇಲೆ ಸಿದ್ಧವಾಗಿರುತ್ತದೆ.

ಇದೆಲ್ಲವನ್ನು ನೋಡಿದ ನನಗೆ ನಮ್ಮ ಪತ್ರಿಕೆಯನ್ನೂ ಸಚಿತ್ರ ಪತ್ರಿಕೆಯನ್ನಾಗಿ ಮಾಡಬೇಕು ಎನಿಸುತ್ತದೆ. ಜನ ಅದನ್ನು ಕೊಳ್ಳುವುದಕ್ಕೆ ನುಗ್ಗಿಬರಬೇಕು. ಜನರು ನೆರೆಯುವ ಎಲ್ಲ ಮುಖ್ಯಸ್ಥಳಗಳಲ್ಲೂ ಪತ್ರಿಕೆ ಇರಬೇಕು. ನಮ್ಮ ರೈಲುಗಳಲ್ಲಿ ಹೋಗುವ ಜನ ಕೈಯಲ್ಲಿ ಪತ್ರಿಕೆಯನ್ನು ಹಿಡಿದು ಅದನ್ನು ಓದುವುದರಲ್ಲೆ ಲೀನರಾಗಿರುವ ದೃಶ್ಯವನ್ನು ಕಂಡು ಆಗುವ ಆನಂದವನ್ನು ಚಿತ್ರಿಸಿಕೊಳ್ಳುತ್ತೇನೆ. ನಮ್ಮ ಜಟಕಾಗಾಡಿ

ಹೊಡೆಯುವವರು, ಬಂಡಿಯವರು, ತಮ್ಮ ಕಟ್ಟೆಗಳಲ್ಲಿ ಕಾಯುತ್ತ ನಿಂತಿರುವಾಗ ಪೇಪರು ಓದುವ ಕಾಲವನ್ನು ನಾವು ಕಾಣಬಲ್ಲೆವೆ ? ನಾವು ಸರಿಯಾದ ದಾರಿ ಹಿಡಿದು ನಡೆದರೆ ಇದು ಸಾಧ್ಯ ಎಂದು ನನಗನಿಸುತ್ತದೆ. ಬಹು ಜನರ ಮನಸನ್ನು ತಿಳಿದು ಅದಕ್ಕೆ ತಕ್ಕಂತೆ ಅಣಿಮಾಡಬೇಕು. ಎಲ್ಲ ನಮ್ಮ ಕೈಯಲ್ಲಿಯೇ ಇದೆ. ಮಹಾರಾಜರ ವರ್ಧಂತ್ಯುತ್ಸವ ಮೈಸೂರಿನಲ್ಲಿ ನಡೆಯಿತೆಂದಿಟ್ಟುಕೊ. ಮಾರನೆಯ ದಿನ ಬೆಳಿಗ್ಗೆಯೇ ಮೆರವಣಿಗೆಯ ಚಿತ್ರ ಜನದ ಕೈಗೆ ಕೊಟ್ಟರೆ ಜನ ಅದನ್ನು ನೋಡುವುದಕ್ಕೆ ಓಡಿಬರುವುದಿಲ್ಲವೆ? ಒಣ ಬರವಣಿಗೆಗಿಂತ ಚಿತ್ರ ಮನುಷ್ಯನನ್ನು ಹೆಚ್ಚು ಆಕರ್ಷಿಸುತ್ತದೆ. ಸಚಿತ್ರ ಪತ್ರಿಕೆಗಳಂತೆ ಒತ್ತಾಯದ ಶಿಕ್ಷಣವಾಗಲಿ ಶಾಸನಗಳಾಗಲಿ ಜನರ ಮನವನ್ನು ಓದುಬರಹದ ಕಡೆಗೆ ತಿರುಗಿಸಲಾರವು. ಒಕ್ಕಲಿಗರ ಸಂಘ ಈ ಉದ್ದೇಶ ಸಾಧಿಸೀತೊ, ಹಿಂದುಳಿದವರ ಸ್ಥಿತಿಯನ್ನು ಉತ್ತಮಪಡಿಸುವ ಕಾರ್ಯದಲ್ಲಿ ಮೊದಲನೆಯದಾಗಿ ಬಾಳೀತೊ ಏನೊ ದೇವರೇ ಬಲ್ಲ.

* * *

ಇಲ್ಲಿ ಬಹುಜನರು ಆದರಿಸುವ ಸಚಿತ್ರ ಪತ್ರಿಕೆಯ ಎರಡು ಪ್ರತಿಗಳನ್ನು ಕಳುಹಿಸಿಕೊಟ್ಟಿದ್ದೇನೆ. ಪ್ರತಿ ಬೆಳಿಗ್ಗೆ ಸಾವಿರಾರು ಪ್ರತಿಗಳು ಮಾರಾಟವಾಗುತ್ತವೆ. ಎಲ್ಲ ದರ್ಜೆಯ ಕೆಲಸಗಾರರೂ ಇವನ್ನು ಓದುತ್ತಾರೆ. ಇವುಗಳಲ್ಲಿರುವ ಚಿತ್ರಗಳೆಲ್ಲ ಅಂದಿನ ದಿನಕ್ಕೆ ಸಂಬಂಧಪಟ್ಟವು. ನೀವೇನೂ ಆಶ್ಚರ್ಯಬೀಳಬೇಡಿ. ಈ ಅದ್ಭುತ ಪತ್ರಿಕೆಗಳ ಬೆಲೆ ಕೇವಲ ಅರ್ಧಾಣೆ ಮಾತ್ರ. ಕೆಲಸಕ್ಕೆ ಹೋಗುವಾಗ ಪ್ರತಿಯೊಬ್ಬನೂ ಒಂದು ಪ್ರತಿಯನ್ನ ಕೊಂಡು ದಾರಿಯಲ್ಲಿ ಹೋಗುತ್ತ ಓದುತ್ತ ಹೋಗುತ್ತಾನೆ.

ಇಂಥ ಪತ್ರಿಕೆಗಳೇ—ಕಡಿಮೆ ಬೆಲೆಗೆ ದೊರೆಯುವ ಉತ್ತಮ ಪತ್ರಿಕೆಗಳು—ನಮಗೆ ನಮ್ಮ ದೇಶದಲ್ಲಿ ಬೇಕಾಗಿರುವುದು. ಈ ಆದರ್ಶವನ್ನು ಮುಟ್ಟುವುದಕ್ಕೆ ನಾವು ಕೈಲಾದಷ್ಟು ಪ್ರಯತ್ನಪಡಬೇಕು. ನಮ್ಮ ಸಂಸ್ಥಾನದ ಪತ್ರಿಕೆಗಳಲ್ಲೆಲ್ಲ ಅತಿ ಜನಪ್ರಿಯವಾದ ಆದರಣೀಯವಾದ ಪತ್ರಿಕೆಯನ್ನಾಗಿ ನಮ್ಮ ಪತ್ರಿಕೆಯನ್ನು ಮಾಡಬಹುದು. ಹಣಕ್ಕಾಗಿ ಹಿಂಜರಿಯುವುದು ಬೇಡ. ನಾವು ತೀರ ಒಳ್ಳೆಯ ಸಾಮಗ್ರಿಯನ್ನು ಕೊಡುತ್ತೇವೆ,

ಅಂಥದನ್ನು ಒದಗಿಸುವುದಕ್ಕೆ ಕೈಲಾದಮಟ್ಟಿಗೂ ಕಷ್ಟಪಡುತ್ತಿದೇವೆ ಎಂದು ಹೊರಗಿನವರಿಗೆ ತಿಳಿದರೆ ಹಣ ತಾನಾಗಿಯೇ ಬರುತ್ತದೆ. ನಾವು ಒದಗಿಸುವ ವಿಷಯದ ಗುಣ ಮುಖ್ಯ, ಅದನ್ನು ಕಣ್ಣಿಗೆ ಕಟ್ಟುವಂತೆ ಎತ್ತಿ ತೋರಿಸುವ ರೀತಿ ಮುಖ್ಯ; ಎಂದಿನವರೆಗೆ ನನ್ನಲ್ಲಿ ಶಕ್ತಿ ಇರುವುದೋ ಅಂದಿನವರೆಗೆ ಈ ಆದರ್ಶ ಮುಟ್ಟಲು ಪ್ರಯತ್ನಿಸುತ್ತೇನೆ. ಕೆಲಸ ಮಾಡುವುದರಲ್ಲಿಯೇ ನನಗೆ ತೃಪ್ತಿ. ಫಲ ಅದರ ಪಾಡಿಗೆ ಅದು ಬರಲಿ. ಈ ಅಭಿಪ್ರಾಯವನ್ನಿಟ್ಟುಕೊಂಡೇ ನನ್ನ ಲೇಖನಕ್ಕಾಗಿ ಕೆಲವು ಬ್ಲಾಕುಗಳನ್ನು ಮಾಡುವುದಕ್ಕೆ ಕೊಟ್ಟಿದೇನೆ.

* * *

ಇಲ್ಲಿನ " ಟೈಂಸ್ " ಪತ್ರಿಕೆ ಮೊನ್ನೆ ತಾನೆ 40,000ನೆಯ ಮುದ್ರಣ ಎಂದು ಅದ್ಭುತವಾದ ವಿಶೇಷ ಸಂಚಿಕೆಯೊಂದನ್ನು ಹೊರಡಿಸಿತು. ಮುದ್ರಣದ ಪೂರ್ಣ ಇತಿಹಾಸವನ್ನು ಮತ್ತು ಆ ಪತ್ರಿಕೆ ಹುಟ್ಟಿದಂದಿನಿಂದ ಇಂದಿನವರೆಗೆ ನಡೆದ ಸಂಗತಿಗಳೆಲ್ಲವನ್ನೂ ಅದರಲ್ಲಿ ಕೊಟ್ಟಿದೆ. ಒಂದು ಪ್ರತಿಯನ್ನು ನಮ್ಮ ಪತ್ರಿಕೆಯ ಮ್ಯಾನೇಜರಿಗೆ ಕಳುಹಿಸಿದ್ದೇನೆ. ನಾವು ಕೂಡ ಗಂಟೆಗೆ 30,000 ಪತ್ರಿಕೆಗಳನ್ನು ಮುದ್ರಿಸುವಂಥ Goss Machine ಒಂದನ್ನು ಸ್ಥಾಪಿಸುವ ದಿನವನ್ನು ಕಂಡೇವೆ ಎನಿಸುತ್ತದೆ. ಇದೂ ಒಂದು ಕನಸು, ಗಾಳಿಯ ಗೋಪುರ. ಆದರೆ ಇದೂ ನಿಜವಾಗುವ ದಿನ ಬಂದೀತು, ಯಾರು ಬಲ್ಲರು ?

* * *

ನಮಗೆ ಸ್ವಲ್ಪ ಹಣ ಕೊಡಬಲ್ಲೆಯಾ ? ನಮ್ಮ ಪ್ರೆಸ್ಸಿಗೆ ಉಪಯುಕ್ತವಾಗುವ ಕೆಲವು ಯಂತ್ರಗಳನ್ನು ಕೊಳ್ಳಬೇಕೆಂದಿದೇನೆ. ಕಾಗದ ಕೊಂಡುಕೊಳ್ಳಬೇಕೆಂದಿದೇನೆ. ಪತ್ರಿಕೆಯ ಆಕಾರ ಹೆಚ್ಚುಮಾಡಬೇಕೆಂದಿದೇನೆ. ಸೊಗಸಾದ ರೀತಿಯಲ್ಲಿ ಮುದ್ರಿಸಬೇಕಾಗುತ್ತದೆ. ಹೊಸದಾಗಿ ಕಟ್ಟುತಿರುವ ಕಟ್ಟಡದಲ್ಲಿ ನಮಗೆ ವಿಶಾಲವಾದ ಜಾಗ ಕೊಡುವುದನ್ನು ದಯವಿಟ್ಟು ಮರೆಯಬೇಡ. ನಾಲ್ಕೂ ಕಡೆ ಕಟ್ಟಡವಿದ್ದು ನಡುವೆ ಅಂಗಳವಿರುವಂಥ ಸ್ಥಳಕೊಡು. ಹಿಂದುಮುಂದಿನ ಎರಡು ಗೋಡೆಗಳಲ್ಲಿಯೂ ಕಿಟಕಿಗಳಿರಲಿ.

ಮೇಲುಗಡೆಯಿಂದಲೂ ಬೆಳಕು ಬರುವಂತಿರಲಿ. ಮುಂದಿರುವ ಬಯಲಿನಲ್ಲಿ ಸೊಗಸಾದ ಉದ್ಯಾನವಿರಲಿ. ಹಸುರು ಹುಲ್ಲು ಬೆಳೆಸಿ ದಾರಿಗಳನ್ನು ಮಾಡಿಸು. ಎಲ್ಲ ವಿಧವಿಧ ಬಗೆಯ ಹೂಗಳಿಂದ ತೋಟ ಅಲಂಕೃತ ವಾಗಿರಲಿ. ಮಧ್ಯೆ ಸಣ್ಣ ಕೊಳವೊಂದಿರಲಿ. ಅಲಂಕಾರವಾಗಿರುವ ಕಾರಂಜಿ ಯೊಂದಿರಲಿ.

ಪತ್ರಿಕೆಯ ಆಕಾರವನ್ನು ಸಾಧ್ಯವಾದರೆ ದೊಡ್ಡದು ಮಾಡಲು ಪ್ರಯತ್ನಿಸು. ಇನ್ನೂ ನಾಲ್ಕು ಪುಟ ಹೆಚ್ಚಿಸು. ಆಗ ಹದಿನಾರು ಪುಟವಿರುತ್ತದೆ. ಈಗ ಪತ್ರಿಕೆಯಲ್ಲಿ ಬರುತಿರುವ ಸುದ್ದಿ ತೀರ ಕಡಿಮೆ. ಹೊಸಸುದ್ದಿ, ಲೇಖನ ಗಳು, ಹೊಸ ಜಾಹಿರಾತುಗಳು ಇವುಗಳಿಂದ ನಾಲ್ಕು ಪುಟಗಳನ್ನು ತುಂಬ ಬಹುದು. ನಿನ್ನ ಹತ್ತಿರ ಒಳ್ಳೆಯ ಸಿಬ್ಬಂದಿ ಕೂಡ ಇರುವಂತಿದೆ. ಮ್ಯಾನೇಜರು, ಎಡಿಟರು, ಸಬ್ ಎಡಿಟರು, ಅಸಿಸ್ಟೆಂಟ್‌ರು, ಅಕೌಂಟೆಂಟು ಇಂಥ ಸಿಬ್ಬಂದಿ ಇಟ್ಟುಕೊಂಡು ಏನು ತಾನೆ ಮಾಡಲು ಸಾಧ್ಯವಿಲ್ಲ. ಪತ್ರಿಕೆಯಲ್ಲಿ ಇಂಡಿಯಾದೇಶದ ಸುದ್ದಿ ಹೇಳಿಕೊಳ್ಳುವಂಥದೇನೂ ಇಲ್ಲ. ವಿದೇಶದ ಸುದ್ದಿಯಂತೂ ತೀರ ಕಡಿಮೆ. ಇವುಗಳನ್ನು ಹೆಚ್ಚು ಮಾಡಬೇಕು. ಇಂಗ್ಲೀಷು ಲೇಖನಗಳ ಯಾವ ಅನುವಾದವೂ ಕಾಣುವುದಿಲ್ಲ. ಈ ದಾರಿ ಯಲ್ಲಿ ಕೂಡ ಪತ್ರಿಕೆಯನ್ನು ಉತ್ತಮಪಡಿಸುವ ಅವಕಾಶ ಬಹಳ ಇದೆ. ಆರಂಭಮಾಡು. ಎಲ್ಲ ತಾನೆ ಸರಿಹೋಗುತ್ತದೆ. ಹೊಸತರದ ಪತ್ರಿಕೆಯನ್ನು ಹೊಸವರುಷ ಆರಂಭಮಾಡು.

* * *

ಪತ್ರಿಕೆಯಲ್ಲಿ ಎಲ್ಲೆಂದರಲ್ಲಿ ಇಂಗ್ಲೀಷು ಪದಗಳನ್ನು ಸೇರಿಸಿ ಬರುತ್ತಿರುವ ಬರವಣಿಗೆಯನ್ನು ನೋಡಿ ನನಗೆ ಇನ್ನಿಲ್ಲದ ನಗು ಬರುತ್ತದೆ. ಕೆಲವು ವಾರಗಳಿಗೆ ಹಿಂದೆ ಪತ್ರಿಕೆಯಲ್ಲಿ ಕನ್ನಡಭಾಷೆಯ ಸ್ವಚ್ಛತೆಯ ವಿಷಯ ವಾಗಿ ಸಂಪಾದಕೀಯ ನೋಡಿದೆ. ಇನ್ನೇನು ಪರ್ವಕಾಲ ಬಂದಿತೇನೊ ಎಂದು ಸಂತೋಷಪಟ್ಟೆ. ಆದರೆ ಸ್ವಚ್ಛತೆ ಎಂದರೆ ದೊಡ್ಡದೊಡ್ಡ ಉದ್ದುದ್ದ ಸಂಸ್ಕೃತ ಮಾತುಗಳ ಜೊತೆಗೆ ಹರಕು ಮುರುಕು ಇಂಗ್ಲೀಷನ್ನೂ ಹಿಂದುಸ್ಥಾನಿಯನ್ನೂ ಬೆರಸಿ ಕನ್ನಡದಲ್ಲಿ ಹೇಳುವುದು ಎಂದು ನಾನು ಬೇರೆ ತಿಳಿ

ದಿರಲಿಲ್ಲ. ಕೆಲವು ನಿದರ್ಶನಗಳನ್ನು ಎತ್ತಿ ತೋರಿಸಿ ಮ್ಯಾನೇಜರಿಗೆ ಬರೆದಿದೇನೆ. ಬೇಕೆಂದು ಜಿದ್ದಿನಿಂದ ಬರೆದಿಲ್ಲ. ತಪ್ಪು ಹುಡುಕುತ್ತಿದ್ದೇನೆಂದು ಎಂದಿಗೂ ಎಣಿಸಬೇಡ. ನಿನ್ನನ್ನು ಸಂಪಾದಕರನ್ನು ದೂರುತ್ತ ಈ ಮಾತು ಬರೆಯುತ್ತಿಲ್ಲ. ನೀವು ಎಚ್ಚರಿಕೆಯಿಂದಿರಬೇಕೆಂದು ಈ ಮಾತು ಬರೆದಿದೇನೆ.

ನಾನು ಲಂಡನಿಗೆ ಬಂದು ಸೇರಿ ವರ್ಷದ ಮೇಲಾಯಿತು. 'ಕೊಲಂಬೋವಿನಿಂದ ಲಂಡನಿಗೆ' ಎಂಬ ಲೇಖನವನ್ನು ಎಂದೋ ಕಳುಹಿಸಿದೆ. ಆದರೆ ಆ ಲೇಖನ ಇನ್ನೂ ಪೂರ್ತಿ ಅಚ್ಚಾಗಿಲ್ಲ. ಮಾರ್ಚಿನಲ್ಲೊ ಏಪ್ರಿಲಿನಲ್ಲೋ ಅದು ಅಚ್ಚಾಗಿ ಬರಬಹುದು. ನಾನು ಊರುಬಿಟ್ಟು ಹೊರಟು ಒಂದು ವರ್ಷವಾದಮೇಲೆ ಲಂಡನಿಗೆ ಹೋಗಿ ಸೇರಿದೆ ಎಂದು ಜನಕ್ಕೆ ತಿಳಿಯಬೇಕೇನು ? ಇಲ್ಲಿ ಪತ್ರಿಕೆಗಳಲ್ಲಿ ಪ್ರಕಟವಾದ ಸ್ವಾರಸ್ಯವಾದ ವಿಷಯುಗಳನ್ನು ಎಷ್ಟೋ ತೊಂದರೆ ತೆಗೆದುಕೊಂಡು ಆರಿಸಿ ಕತ್ತರಿಸಿ ಕಳುಹಿಸುತ್ತೇನೆ. ಅವುಗಳಲ್ಲಿ ಬಹುಭಾಗ ಇದುವರೆಗೂ ಪ್ರಕಟವಾಗಿಲ್ಲ. ಇಷ್ಟಾದರೂ ನಾನು ಮುಂದೆ ಬರೆಯುತ್ತ ಹೋಗಬೇಕಲ್ಲವೆ ? ನಾನು ದೇವತೆಯಾಗಿರಬೇಕಾಗಿತ್ತು. ನನಗೇ ಇಂಥ ಮರ್ಯಾದೆ ದೊರಕುವುದಾದರೆ ಸಂಪಾದಕರ ಕೃಪೆಗಾಗಿ ಕಾಯುತ್ತಿರುವ ಮಿಕ್ಕವರ ಪಾಡೇನು ? ಇಂಥ ವಿಷಯಕ್ಕೇ ನೀನು ಗಮನಕೊಟ್ಟು ಅವುಗಳನ್ನು ಸರಿಪಡಿಸಬೇಕೆಂದು ನಾನು ಹೇಳುವುದು.

೧೨.

ಒಕ್ಕಲಿಗರ ಪತ್ರಿಕೆ ಯಾವರೀತಿ ಸಚಿತ್ರ ಪತ್ರಿಕೆಯಾಗಬೇಕು, ಬಹು ಜನರ ಆದರಣೆಗೆ ಪಾತ್ರವಾಗಬೇಕು, ಪತ್ರಿಕೆಯುಲ್ಲಿರುವ ಕುಂದುಗಳೇನು, ಅದನ್ನು ನಿವಾರಿಸುವುದು ಹೇಗೆ, ಈ ವಿಷಯುವಾಗಿ ರಾಮಯ್ಯನವರಿಗೆ ಬರೆದ ಪತ್ರಗಳಲ್ಲಿನ ಸಾರಾಂಶವನ್ನು ಹಿಂದೆ ಸೂಚಿಸಿದ್ದೇನೆ. ಒಕ್ಕಲಿಗರ ಸಂಘ ಉತ್ತಮರೀತಿಯುಲ್ಲಿ ಕೆಲಸಮಾಡಬೇಕಾದರೆ ಯಾವರೀತಿ ಅಲ್ಲಿ

ಕೆಲಸ ನಡೆಯಬೇಕು ಎನ್ನುವ ವಿಷಯ ಕೂಡ ಇನ್ನು ಕೆಲವು ಪತ್ರಗಳಲ್ಲಿ ದೊರೆಯುತ್ತದೆ. ಈ ಪತ್ರಗಳು ಸಂಘದ ಕಾರ್ಯಕರ್ತರಲ್ಲೊಬ್ಬರಾದ ರಾಮಯ್ಯನವರ ಮಾವ ಶಾಮಗೌಡರಿಗೆ ಬರೆದುವು. ರಾಮಯ್ಯನವರಿಗೆ ಬರೆದ ಪತ್ರಗಳೆಲ್ಲದರಲ್ಲಿಯೂ ಸಂಘದ ವಿಷಯ ಒಂದಲ್ಲ ಒಂದು ರೀತಿ ಪ್ರಸ್ತಾಪ ಬಂದೇ ಬರುತ್ತದೆ. ಈ ಅಧ್ಯಾಯದಲ್ಲಿ ಸಂಘದ ಕೆಲಸ ಯಾವರೀತಿ ನಡೆಯಬೇಕು ಎನ್ನುವ ವಿಷಯವಾಗಿ ತಂದೆ ಬರೆದ ಸಂಗತಿಯನ್ನೆ ಸಂಗ್ರಹಿಸಿ ಕಾಣಿಸಿದ್ದೇನೆ—

ಶ್ಯಾಮಗೌಡರಿಗೆ—

ನಿಮ್ಮ ಕಾಗದ ಬಂದು ಸೇರಿತು. ಸಂಘದ ಕಾರ್ಯ ಇನ್ನೂ ಉತ್ತಮಗೊಂಡಿಲ್ಲವೆಂದು ತಿಳಿದು ದುಃಖವಾಯಿತು.

ವಿವರಗಳ ಕಡೆಗೆ ಗಮನಕೊಟ್ಟು ಅವುಗಳನ್ನು ಉತ್ತಮಪಡಿಸದ ಹೊರತು, ದಿನದಿನ ಕಚೇರಿಯ ಕೆಲಸಗಳು ತಮಗೆ ತಾವೆ ಯಾವೊಂದು ರೀತಿಯ ತಡೆಯೂ ಇಲ್ಲದೆ ನಡೆಯುವಂತೆ ಮಾಡದ ಹೊರತು, ನಾವು ಎಂದಿಗೂ ಉದ್ಧಾರವಾಗಲಾರೆವು. ಅದೇ ನನ್ನ ದೃಢವಾದ ನಂಬಿಕೆ. ಇಲ್ಲಿನ ಜನದ ಹೆಚ್ಚುಗಾರಿಕೆಯೆಲ್ಲ ಅವರ ಶಿಸ್ತು, ಕ್ರಮ, ನೀತಿ ಇವುಗಳಿಂದ; ಕೈಹಿಡಿದ ಕೆಲಸ ಸಣ್ಣದಾಗಲಿ ದೊಡ್ಡದಾಗಲಿ ಅದನ್ನು ನೆರವೇರಿಸುವುದರಲ್ಲಿ ತೋರಿಸುವ ಸಾಮರ್ಥ್ಯದಿಂದ. ನಮಗೆ ದಿನದಿನ ಬಂದುಹೋಗುವ ಕಾಗದಗಳು ಸುಲಭವಾಗಿ ಕೈಗೆ ಸಿಗುವಂತೆ ಮಾಡದೆ ಇದ್ದರೆ, ನಮ್ಮ ಲೆಕ್ಕಗಳನ್ನು ಓದುತ್ತಿರುವವರೂ ಸುಲಭವಾಗಿ ಗ್ರಹಿಸಿಕೊಳ್ಳುವಂತೆ ತೊಡಕಿಲ್ಲದೆ ಇಡದೆಹೋದರೆ, ನಮ್ಮ ಆಸ್ತಿಯನ್ನು ಅಣಿಯಾಗಿ ವ್ಯವಸ್ಥೆಯಿಂದ ಇಡುವುದು ಸಾಧ್ಯವಾಗದೆ ಹೋದರೆ, ಒಂದು ಕೆಲಸಕ್ಕೆ ಒಬ್ಬ ಇರುವಂತೆ ನಾವು ನೇಮಕಮಾಡದೆ ಹೋದರೆ, ಎಲ್ಲ ಕೆಲಸ ಸರಿಯಾಗಿ ನಡೆಯುವಂತೆ ನೋಡಿಕೊಳ್ಳುವ ಮೇಲ್ವಿಚಾರಕನೊಬ್ಬನನ್ನು ನೇಮಿಸದೆ ಹೋದರೆ, ಕೆಲಸ ಕಡಿಮೆಯಾಗುವಂಥ, ತೊಡಕುಗಳನ್ನು ನೀಗಿಸುವಂಥ, ಯೋಚನೆ ತೊಲಗಿಸುವಂಥ ವಿಧಾನಗಳನ್ನು ನಾವು ಬಳಕೆಗೆ ತರದೆ ಹೋದರೆ, ನನ್ನ ಮಾತು

ತೆಗೆದುಕೊಳ್ಳಿ, ನಾವು ಹಿಂದೆ ಬೀಳುತ್ತೇವೆ. ನಮ್ಮಿಂದ ಯಾವ ದೊಡ್ಡ ಕೆಲಸವೂ ನಡೆಯಲಾರದು. ನಿರ್ಜೀವಿಗಳಾಗಿ, ಸೋಮಾರಿಗಳಾಗಿ, ದಂಡದ ಹೊರೆಯಾಗಿ ಹೇಗೊ ಕಾಲ ತಳ್ಳುತ್ತೇವೆ. ಇದರಿಂದ ಯಾರಿಗೂ ಯಾವ ರೀತಿಯಲ್ಲಿಯೂ ಉಪಯೋಗವಾಗುವುದಿಲ್ಲ.

ಮಹತ್ತಾದ ಕಾರ್ಯಗಳಿಗೆ ಕೈಹಾಕಿ ಏನು ಪ್ರಯೋಜನ, ಅವುಗಳನ್ನು ನಾವು ಸಾಧಿಸದೆ ಹೋದರೆ? ಗಡಿಯಾರದ ಕಡೆ ನೋಡಿ. ಅದರಲ್ಲಿಯ ಒಂದೊಂದು ಸಣ್ಣ ಚಕ್ರ ಅದರದರಂತೆ ಕೆಲಸಮಾಡದೆ ಹೋದರೆ ಗಡಿಯಾರವೆ ನಿಂತುಹೋಗುತದೆ. ಕಾಲ ಗೊತ್ತಾಗುವುದಕ್ಕೆ ಬೇರೆ ಉಪಾಯುವೆ ಇರುವುದಿಲ್ಲ. ಅದರಂತೆಯೇ ನಾವೂ ಕೂಡ. ಗಡಿಯಾರದಷ್ಟು ಸುಗಮವಾಗಿ ಕ್ರಮವಾಗಿ ಕೆಲಸಮಾಡಬೇಕು. ಇದನ್ನು ಮಾಡದೆ ಕುಂಟಿಕೊಂಡು ನಡೆಯುವುದಕ್ಕಿಂತ ನಾವು ಸಾಯುವುದೇ ಲೇಸು

ನಮ್ಮ ಸಂಘದಲ್ಲಿ ನನಗೆ ಅತಿಯಾದ ಆಸೆ ಇದೆ. ಆದರೆ ಅದರ ಒಳ ಕೆಲಸಗಳನ್ನು ನೋಡಿಕೊಳ್ಳುವುದಕ್ಕೆ ಜನ ಬೇಕು. ಸಂಘದ ಉಪಯುಕ್ತತೆ ಹೆಚ್ಚುವಂತೆ, ಸಂಘ ಹೆಚ್ಚು ಜನಪ್ರಿಯವಾಗುವಂತೆ ಮಾಡಲು ನಾನು ಬಂದಮೇಲೆ ಹೊಸ ಕ್ರಮಗಳನ್ನು ಆಚರಣೆಗೆ ತರಬೇಕೆಂದಿದೇನೆ. ಇದರಲ್ಲಿ ನನಗೆ ಯಾರೂ ಸಹಾಯಮಾಡದೆ ಹೋದರೆ, ನನ್ನೆದುರಿಗೆ ಎಲ್ಲ ಚೆಲ್ಲಾಪಿಲ್ಲಿಯಾಗಿದ್ದರೆ ನಾನೇನು ಮಾಡಲು ಸಾಧ್ಯ? ಹೊಟ್ಟೆಗೆ ಹಿಟ್ಟು ಬೇಕು. ಆದರೆ ಕೈ ಹಿಟ್ಟನ್ನು ಬಾಯಿಯುವರೆಗೆ ತರದೆ ಹೋದರೆ ಪ್ರಯೋಜನವೇನು?

ಲೆಕ್ಕಗಳನ್ನೆಲ್ಲ ಹೊರಕ್ಕೆ ತಂದು ಅದನ್ನು ಸರಿಪಡಿಸಿ ಎಂದು ನಿಮ್ಮನ್ನು ಬೇಡಿಕೊಳ್ಳುತೇನೆ. ನಿಯಮದ ಪ್ರಕಾರ ಕೆಲಸಮಾಡುವುದನ್ನು ನೋಡಿಕೊಳ್ಳುವಂತೆ ಒಬ್ಬ ಮ್ಯಾನೇಜರನ್ನು ನೇಮಕಮಾಡಿ. ಸರಕಾರಿ ಕಚೇರಿಗಳಲ್ಲಿ ನಡೆದಂತೆ ಕ್ರಮವಾಗಿ ಕೆಲಸ ಆಗಬೇಕು. ಪತ್ರಗಳು ಯಾವುದು ಬೇಕಾದರೆ ಅದು ತಕ್ಷಣ ದೊರೆಯುವಂತಿರಬೇಕು. ಕಚೇರಿಯೊಳಕ್ಕೆ ಒಂದು ಚಿಂದಿ ಬಂದರೂ ಅದಕ್ಕೆ ಲೆಕ್ಕವಿರಬೇಕು. ಕಚೇರಿಗೆ

ಒಬ್ಬ ಮುಖ್ಯ, ಒಬ್ಬ ಮೇಲ್ವಿಚಾರಕ, ಗುಮಾಸ್ತರು ಇರಬೇಕು. ಪತ್ರಿಕೆಯಲ್ಲಿ ಸಂಘದ ಲೆಕ್ಕದ ವಿವರ ಕೊಡುತ್ತಿಲ್ಲ. ನಿಯಮಗಳನ್ನು ಪಾಲಿಸುತ್ತಿಲ್ಲ. ಪ್ರತಿಯೊಬ್ಬನೂ ತಾನೆ ದೊಡ್ಡ ಮನುಷ್ಯನೆಂದು ತಿಳಿದಿದ್ದಾನೆ. ಎಲ್ಲ ಅಸ್ತವ್ಯಸ್ತವಾಗಿದೆ. ಹೀಗಿದ್ದರೆ ಸಾಗುವುದಿಲ್ಲ.

ಸರಿಯಾದ ಹಿಡಿತವಿದ್ದರೆ, ಕೆಲಸಗಳಮೇಲೆ ಸರಿಯಾದ ಮೇಲ್ವಿಚಾರಣೆ ಇದ್ದರೆ, ಹಣ ತಾನಾಗಿ ಸಂಘಕ್ಕೆ ಬರುತ್ತದೆ ಎಂದು ನಾನು ದೃಢವಾಗಿ ನಂಬಿದ್ದೇನೆ. ಅಚ್ಚುಕೂಟದ ಯಂತ್ರಗಳನ್ನು ಸುಧಾರಿಸಬೇಕೆಂದು ನನ್ನ ಇಷ್ಟ. ಕಾಗದ ಲೇಖನಸಾಮಗ್ರಿಗಳನ್ನು ಮಾರಾಟಮಾಡಬೇಕೆಂದು, ಮೈಸೂರು ದೇಶದ ಸುಂದರ ನೋಟಗಳ ಚಿತ್ರಗಳನ್ನು ಅಚ್ಚುಹಾಕಿಸಬೇಕೆಂದು, ಸಂಸ್ಥಾನದ ರಮ್ಯಪ್ರದೇಶಗಳಿಗೆ ಸಚಿತ್ರ ಕೈಪಿಡಿಗಳನ್ನು ಪ್ರಕಟಿಸಬೇಕೆಂದು ಜನರ ಮನಸನ್ನು ಸೆಳೆಯುವ, ಆಕರ್ಷಿಸುವ, ಅದರ ಮೂಲಕ ತಿಳಿವನ್ನು ಕೊಡುವ, ಸಂಘಕ್ಕೆ ಏಳಿಗೆಯನ್ನು ತರುವ, ಚಿತ್ರಪಟ (Poster)ಗಳನ್ನು ಅಚ್ಚುಹಾಕಿಸಬೇಕೆಂದು ಮಾಡಿದ್ದೇನೆ. ನಮ್ಮ ಪತ್ರಿಕೆಯನ್ನು ಪೂರ್ತಿಯಾಗಿ ಸಚಿತ್ರಪತ್ರಿಕೆಯನ್ನಾಗಿ ಮಾಡಬೇಕೆಂದು ಸಂಕಲ್ಪಿಸಿದ್ದೇನೆ. ಫೋಟೋ ಅಚ್ಚುಮಾಡುವ ಯಂತ್ರವನ್ನು ಸ್ಥಾಪಿಸಬೇಕೆಂದಿದ್ದೇನೆ. ವಾಸ್ತವವಾಗಿ ನಮ್ಮ ಸಂಘ ಎಲ್ಲ ತರದ ಉಪಯುಕ್ತವಾದ ಕಾರ್ಯಗಳಲ್ಲಿಯೂ ಮೊದಲನೆಯದಾಗಿ ಮೆರೆಯಬೇಕೆಂದು ನನ್ನ ಅಭಿಲಾಷೆ. ಇವೆಲ್ಲ ನನ್ನ ಕನಸಾಗಿ ಮಾತ್ರ ಉಳಿಯಬೇಕೆ? ಉತ್ತರಹೇಳಿ?

* * *

ಪ್ರಿಯ ರಾಮು

ಮತ್ತೆ ಸಂತೋಷ ಕೂಟಗಳು, ಭಾಷಣಗಳು, ಅಸಾಧ್ಯ ಏರ್ಪಾಟುಗಳು, ಇವುಗಳಲ್ಲಿ ತೊಡಗಿದಂತೆ ಕಾಣುತ್ತದೆ. ಇಂಥ ಕಾರ್ಯಗಳಲ್ಲಿ ನಿನಗಿರುವ ಉತ್ಸಾಹವನ್ನೂ ನಿನ್ನ ಮುಖ್ಯವಾದ ಕಾರ್ಯಕ್ಷೇತ್ರವಾದ ಸಂಘದ ಕಡೆ ಇರುವ ಬೇಸರವನ್ನೂ ಕಂಡು ಆಶ್ಚರ್ಯವಾಗುತ್ತದೆ. ನಮ್ಮದೆನ್ನುವುದರ ಕಡೆಗೆ ಗಮನಬೀಳದು. ಅಲ್ಲದುದಕ್ಕೆ ನಮ್ಮ ಕಾರ್ಯವೆಲ್ಲ ಮೀಸಲು. ಇದು ತೀರ ಅನ್ಯಾಯವಾಗಿ ಕಾಣುತ್ತದೆ. ಇದನ್ನು ನಿಸ್ವಾರ್ಥವಾದ ಕೆಲಸ

ಎಂದು ನೀನು ಅನ್ನುವುದಿಲ್ಲ ಎಂದು ನಂಬಿದ್ದೇನೆ. ಇದು ನಿಸ್ವಾರ್ಥ ಕೆಲಸವೂ ಅಲ್ಲ, ಸ್ವಾರ್ಥವೂ ಅಲ್ಲ. ಇದಕ್ಕೆ ಗೊತ್ತು ಗುರಿಯಿಲ್ಲದ ಕೆಲಸ ಎಂದು ನಾನನ್ನುತ್ತೇನೆ. ಯಾವ ಕೆಲಸಮಾಡಿದರೂ ಅದನ್ನು ಸಂಘಕ್ಕಾಗಿ ಮಾಡಿದೆ ಎಂದು ಹೇಳುವುದರಲ್ಲಿ ನೀನು ಚತುರ. ಇದು ಸ್ವಲ್ಪಮಟ್ಟಿಗೆ ನಿಜ. ಆದರೆ ಸಂಪೂರ್ಣ ನಿಜವಲ್ಲ. ಸಂಘದ ಉನ್ನತಿಗೆ ಕೆಲಸಮಾಡಬೇಕಾದರೆ ಸಂಘದ ಒಳಗೇ ನಿಂತು ಕೆಲಸಮಾಡುವುದು ಉತ್ತಮವಾದ ದಾರಿ; ಹೊರಗೆ ನಿಂತಲ್ಲ. ಸಂಘದಲ್ಲಿಯೇ ನಿನ್ನ ಕೆಲಸವಿರುವಾಗ ಹೊರಗೆ ಏಕೆ ಹೋಗಬೇಕು?

ಅಲ್ಲದೆ ಸಂಘದಲ್ಲಿ ಮಾಡಬೇಕಾದ ಕೆಲಸ ಎಷ್ಟಿದೆ?

ಸಂಘದ ಲೆಕ್ಕವೆಲ್ಲ ತನಿಖೆಯಾಗುತ್ತಿದೆ ಎಂದು ಬರೆದಿದ್ದೀಯೆ. ಒಳ್ಳೆಯದು. ಲೆಕ್ಕಗಳನ್ನು ತನಿಖೆಮಾಡುವುದು, ಬಿಲ್ಲುಗಳನ್ನು ಲೆಕ್ಕದ ಪುಸ್ತಕದ ಹಾಳೆಗಳಲ್ಲಿ ತಾಳೆನೋಡುವುದು ಇವೆಲ್ಲ ಸುಲಭ. ಆದರೆ ಆಯವ್ಯಯವನ್ನು ಹಿಡಿತದಲ್ಲಿಟ್ಟುಕೊಳ್ಳುವುದು ಕಷ್ಟ. ಅದನ್ನು ಮುಖ್ಯವಾಗಿ ಹಿಡಿತದಲ್ಲಿಟ್ಟಿರಬೇಕು. ನನ್ನಿಷ್ಟಬಂದಷ್ಟು ನಾನು ಖರ್ಚುಮಾಡಬಹುದು; ತೋರಿದ ವಸ್ತುಗಳನ್ನೆಲ್ಲ ಕೊಳ್ಳಬಹುದು; ಪ್ರತಿ ಖರ್ಚಿಗೂ ಬಿಲ್ಲುಗಳನ್ನು ಕೊಟ್ಟು ಲೆಕ್ಕದ ಪುಸ್ತಕದಲ್ಲಿ ನಮೂದಿಸಬಹುದು; ಆದರಿಂದ ಏನೂ ಪ್ರಯೋಜನವಿಲ್ಲ. ಹಣ ಮಾತ್ರ ಉಳಿದಿರುವುದಿಲ್ಲ. ಇದು ನಮ್ಮ ತಂದೆ ಮಾಡುತಿದ್ದಂತೆ. ಎಲ್ಲ ಹಣವನ್ನು ಖರ್ಚು ಮಾಡಿಬಿಟ್ಟು, ಪ್ರತಿ ಖರ್ಚಿಗೂ, ನಶ್ಯ ಸುಣ್ಣ ಮೊದಲುಗೊಂಡು, ಲೆಕ್ಕವಿಟ್ಟು, ದೊಡ್ಡ ಪುಸ್ತಕದಲ್ಲಿ ಬರೆದು, 'ನೋಡು, ನನಗಾಗಿ ಏನಾದರೂ ಖರ್ಚುಮಾಡಿದೇನೆಯೇ ನೋಡು' ಎಂದು ನನ್ನ ಮುಖದ ಮುಂದೆ ಹಿಡಿಯುತಿದ್ದಂತೆ. ಪ್ರತಿ ಕಾಸಿಗೂ ಇಲ್ಲಿ ಲೆಕ್ಕವೇನೊ ಇದೆ. ಆದರೆ ಇವಲ್ಲ ನಮಗೆ ಬೇಕಾಗಿರುವುದು. ವೆಚ್ಚವನ್ನು ಹಿಡಿತದಲ್ಲಿಟ್ಟಿರಬೇಕು. ಕೊನೆಯಲ್ಲಿ ಹಣವನ್ನು ಉಳಿಸಬೇಕು. ಹತ್ತಾರು ಲೆಕ್ಕದ ಪುಸ್ತಕಗಳನ್ನಿಟ್ಟು ಖಾಲಿ ಬೊಕ್ಕಸವನ್ನು ತೋರಿಸುವುದಕ್ಕಿಂತಲೂ ಇದು ಮುಖ್ಯ. ನೀನು ಕರೆಸಿರುವ ಲೆಕ್ಕದವರು ಲೆಕ್ಕವೆಲ್ಲ ಸರಿಯಾಗಿದೆ, ಎಲ್ಲ ಬಾಬುಗಳಿಗೂ ಲೆಕ್ಕವಿದೆ ಎಂದು ರುಜುವಾತು ಮಾಡಬಹುದು. ಆದರೆ

ಹಣ ಉಳಿದಿದೆಯೋ ? ವೆಚ್ಚ ನೋಡಿಕೊಳ್ಳುವವರು ಯಾರು ? ಯಾರೂ ಈ ಕಡೆ ಗಮನಕೊಟ್ಟಂತೆ ಕಾಣೆ. ಹೇಗೊ ಕೆಲಸ ನಡೆಯುತ್ತಿರುವಂತೆ ಕಾಣುತ್ತದೆ. ಇದೇ ನಿನಗೆ ಸಮಾಧಾನವೇನೊ.

ನೀನು ಖಂಡಿತವಾಗಿ ನಡೆಯಲೊಲ್ಲೆಯೆಂದು ಕಾಣುತ್ತದೆ. ದಾಕ್ಷಿಣ್ಯಕ್ಕೊಳಗಾಗಿ ಹೇಗೆ ನಡೆಯುತ್ತದೋ ಹಾಗೆಯೇ ನಡೆದುಕೊಂಡು ಹೋಗಲಿ ಎಂದು ಸಡಿಲಬಿಟ್ಟಂತೆ ಕಾಣುತ್ತದೆ. ನೆಟ್ಟಗೆ ತಿದ್ದುವಂತೆ ತೋರುವುದಿಲ್ಲ. ಇದು ತೀರ ಕೆಟ್ಟುದು. ಒಬ್ಬನಿಗಾಗಿ ಸಂಘದ, ಹತ್ತು ಜನದ ಹಿತವನ್ನು ಬಲಿ ಕೊಡುತ್ತಿದೀಯೆ. ಹೀಗಿದ್ದರೂ ಸಂಘದ ಕೆಲಸ ಸರಿಯಾಗಿ ನಡೆಯುತ್ತಿದೆ ಎಂದು ಹೇಳುತ್ತೀಯೆ. ನಿನ್ನಿಷ್ಟ, ಸಂತೋಷಪಡು. ಆದರೆ ನೀನು ಜೀವಿಸಿರುವುದರೊಳಗೆ ಒಳ್ಳೆಯುದನ್ನು ಮಾಡಬೇಕೆನ್ನುವ ಆಸೆ ನಿನಗಿದ್ದರೆ ನಾನು ಹೇಳುವುದನ್ನು ನಂಬು. ಈ ರೀತಿ ಬೇಕಾಬಿಟ್ಟಿಯಾಗಿ ಸಂಘದ ಕೆಲಸ ನಡೆವರೆ ಆಗದು.

ಮೊದಲನೆಯುದು ಮತ್ತು ಮುಖ್ಯವಾದುದು : ಸಂಘದ ಲೆಕ್ಕವೆಲ್ಲ ತನಿಖೆಯಾಗಬೇಕು ; ಸರಿಯಾದ ಸ್ಥಿತಿಯಲ್ಲಿಡಿಸಬೇಕು. ಮುಂದೆ ತೊಡಕುಗಳು ಹುಟ್ಟಿಕೊಳ್ಳದಂತಾಗಬೇಕು. ವಾರವಾರ ಅದು ಹೊರಗಿನವರ ತಿಳಿವಳಿಕೆಗೆ ಪ್ರಕಟವಾಗಬೇಕು.

ಎರಡನೆಯುದು, ದಿನದಿನ ಬಂದ ದುಡ್ಡು ಅದು ಬಂದಂತೆ ಸಂಘದ ಬೊಕ್ಕಸಕ್ಕೆ ಸೇರುವಂತೆ ಏರ್ಪಾಡುಮಾಡಬೇಕು.

ಮೂರನೆಯುದು, ಕಾರಣವಿಲ್ಲದೆ, ಅಪ್ಪಣೆಪಡೆಯದೆ ಒಂದು ಕಾಸೂ ಹೊರಗೆ ಹೋಗದಂತೆ ನೋಡಬೇಕು. ಹಣಬೇಕಾದವರು ಏತಕ್ಕಾಗಿ ಬೇಕು ಎಂದು ಬರೆದುಕೊಟ್ಟಮೇಲೆಯೇ ಹಣ ಪಾವತಿಯಾಗಬೇಕು.

ನಾಲ್ಕನೆಯುದು, ಎಲ್ಲವೂ ನಿಯಮಬದ್ಧವಾಗಿ ಶಿಸ್ತಿನಿಂದ ಕೂಡಿರಬೇಕು. ಶಿಸ್ತು ಕ್ರಮ ಇವು ನಮ್ಮ ದೇಶಕ್ಕೆ ಸರಿಹೋಗುವುದಿಲ್ಲ ಎಂದು ಮ್ಯಾನೇಜರು ಅಭಿಪ್ರಾಯ ಪಡುವುದು ಸಹಜವಾಗಿಯೇ ಇದೆ. ಇನ್ನೇನು ಮಾಡಿಯಾರು ! ಆದರೆ ಅದು ಸರಿಹೋಗುವಂತೆ ಮಾಡಬೇಕು. ವಿಶ್ವೇ

ಶ್ವರಯ್ಯನವರು ಕ್ರಮದ (System) ವಿಷಯವಾಗಿ ಇಂಜನಿಯರುಗಳಿಗೆ ಕೊಟ್ಟ ಉಪದೇಶವನ್ನು ಗಮನದಲ್ಲಿಡು.

ಇದೆಲ್ಲವನ್ನು ನೀನು ಮಾಡಿದ ಮೇಲೆ ನಿನ್ನ ಕಾರ್ಯಕ್ಷೇತ್ರವನ್ನು ವಿಶಾಲ ಗೊಳಿಸಬಹುದು. ನೌಕರರನ್ನು ಹೆಚ್ಚುಮಾಡಿಕೊಳ್ಳಬಹುದು. ಭದ್ರವಾದ ತಳಹದಿಯಮೇಲೆ ಕಟ್ಟುತ್ತ ಹೋಗಬಹುದು. ಆಗ ಬಿದ್ದು ಹೋದೇ ವೆಂಬ ಭಯವಿರುವುದಿಲ್ಲ ....... ...

ನನ್ನ ಮಟ್ಟಿಗೆ ಹೇಳುವುದಾದರೆ ಸಂಘದಲ್ಲಿ, ಸಂಘದ ಕೀರ್ತಿಯನ್ನು, ಜನರ ಸೌಖ್ಯವನ್ನು ಹೆಚ್ಚಿಸುವಂಥ ಅನೇಕ ಕೆಲಸಗಳನ್ನು ಮೊದಲು ಮಾಡುವ ಅವಕಾಶ ಅಪಾರವಾಗಿದೆ. ಆದರೆ ಜನವಿಲ್ಲದೆ, ಹಣವಿಲ್ಲದೆ, ಕ್ರಮವಿಲ್ಲದೆ, ಏನುಮಾಡುವುದೂ ಸಾಧ್ಯವಿಲ್ಲ. ಶಿಸ್ತು ಕ್ರಮ ಇವು ಗಳನ್ನು ಪಾಲಿಸುವವರು ಕೆಲವರೇ ಆದರೂ ಅವರೇ ಸಾಕು, ಹಣವನ್ನು ಸಂಪಾದಿಸಿ ಕೊಡಬಲ್ಲರು. ಇಂಥ ಕೆಲಸ ಮಾಡಬೇಕು ಎಂದು ಸೂಚನೆ ಕೊಡುವುದಕ್ಕೆ, ಮುಖ್ಯವಾದ ಯೋಜನೆಗಳನ್ನು ಮುಂದಿಡುವುದಕ್ಕೆ ಒಬ್ಬನು ಸಾಕು. ಆದರೆ ಇವುಗಳನ್ನು ಕಾರ್ಯರೂಪಕ್ಕೆ ತರಲು ಮಿಕ್ಕವರಿಂದ ಸಹಾಯ ವಾಗಬೇಕು. ನಿನಗೆ ತೋರಿದಂತೆ ಮಾಡು. ಜೀವವಿರುವವರೆಗೂ ಮಾಡ ಬೇಕು ಎನ್ನುವ ಆಸೆ ಇದ್ದೇ ಇದೆ.

* * *

ಸಂಘದ ವರದಿ ಬರೆಯಬೇಕೆನ್ನುತ್ತೀಯೆ. ಎಲ್ಲ ವಿಷಯಗಳನ್ನೂ ಒಳಗೊಂಡ ಸಣ್ಣ ಪುಸ್ತಕವನ್ನು, ರಾಜ ರೈತ ಇಬ್ಬರ ಕೈಯಲ್ಲಿಯೂ ಇಡಲು ಯೋಗ್ಯವಾದಂಥ ಪುಸ್ತಕವನ್ನು ಮುದ್ರಿಸಬೇಕೆಂದಿದ್ದ ನನ್ನ ಆಸೆ ಯನ್ನು ನೀನು ಬಲ್ಲೆ. ಈಗ ಅದಕ್ಕೆ ಹೊತ್ತು ಬಂದಿರುವಂತೆ ಕಾಣುತ್ತದೆ. ವಿಷಯವೆಲ್ಲವನ್ನು ಒಟ್ಟುಗೂಡಿಸುವ, ವರದಿ ಬರೆಯುವ, ಎಲ್ಲವನ್ನು ಸೇರಿಸಿ ಸುಂದರವಾಗಿ ಇಲ್ಲಿಯೇ ಮುದ್ರಿಸುವ, ಈ ಎಲ್ಲ ಜವಾಬುದಾರಿಯನ್ನು ನಾನು ತೆಗೆದುಕೊಳ್ಳುತ್ತೇನೆ. ಕೆಲವು ಕಡೆ ಮೂರು ಬಣ್ಣದ ಬ್ಲಾಕುಗಳನ್ನು ಉಪಯೋಗಿಸಬೇಕಾಗಬಹುದು. ಬೆಲೆಬಾಳುವ ಪುಸ್ತಕವಾಗುತ್ತದೆ. ನೀನು

ಇಲ್ಲಿಗೆ ಬರುವಾಗ ನಾನು ವಿಷಯುವೆಲ್ಲವನ್ನು ಸಂಗ್ರಹಮಾಡಿಟ್ಟ fileನ್ನೂ ಇತರ ಸಾಧನಸಾಹಿತ್ಯವನ್ನೂ ಫೋಟೋಗಳನ್ನೂ ತೆಗೆದುಕೊಂಡು ಬಾ. ಅದೆಲ್ಲವನ್ನು ಇಲ್ಲಿ ಮುದ್ರಿಸಿ ಸೊಗಸಾದ ಪುಸ್ತಕವನ್ನು ಪ್ರಕಟಿಸಬಹುದು. ಈ ಸಲಹೆಯನ್ನು ನೀನು ಒಪ್ಪುವುದಾದರೆ, ಪುಸ್ತಕರೂಪದಲ್ಲಿ ವರದಿ ಬರೆಯಬೇಕೆನ್ನುವ ನಿನ್ನ ಇಷ್ಟವನ್ನು ಇನ್ನು ಸ್ವಲ್ಪಕಾಲ ತಡೆ. ನಾನು ನಿನಗೆ ಎಲ್ಲ ಸಹಾಯ ಮಾಡುವುದಕ್ಕೆ ಸಿದ್ಧನಾಗಿದ್ದೇನೆ.*

೧೩.

ದಿವಾನ್ ವಿಶ್ವೇಶ್ವರಯ್ಯನವರು ಏನುಮಾಡಬೇಕು ?

ವಿಶ್ವೇಶ್ವರಯ್ಯನವರು ಮೈಸೂರಿನ ದಿವಾನರಾಗಿ ಬರುತ್ತಾರೆಂಬ ಸುದ್ದಿಯನ್ನು ರಾಮಯ್ಯನವರು ತಂದೆಗೆ ತಮ್ಮ ಕಾಗದದಲ್ಲಿ ತಿಳಿಸಿರಬೇಕು. ವಿಶ್ವೇಶ್ವರಯ್ಯನವರು ದಿವಾನರಾಗಿ ಬಂದರೆ ಏನೇನುಮಾಡಬೇಕು ಎಂದು ನಮೂದಿಸಿ ಕಾಗದ ಒಂದನ್ನು ತಂದೆ ಬರೆದಿದಾರೆ. ಕಾಗದ ಬರೆದು ಮುವ್ವತ್ತು ವರ್ಷಗಳು ಕಳೆದುಹೋಗಿವೆ. ಆದರೂ ಅದರಲ್ಲಿ ನಮೂದಿತವಾಗಿರುವ ಎಷ್ಟೋ ವಿಷಯುಗಳು ದೇಶದಲ್ಲಿ ಇನ್ನೂ ಆಗಬೇಕಾಗಿವೆ. ಈ ಕಾಗೆದವನ್ನು ಇಲ್ಲಿ ಸಂಪೂರ್ಣವಾಗಿ ಕಾಣಿಸಿದ್ದೇನೆ

18-10-1912

ರಾಮು,

ವಿಶ್ವೇಶ್ವರಯ್ಯನವರು ದಿವಾನರಾಗಿ ಬರುತ್ತಾರೆಂದು ನೀನು ಹೇಳುತ್ತೀಯೆ ಇದು ಒಳ್ಳೆಯ ಚಿಹ್ನೆ. ಅವರ ತಲೆತುಂಬ ಹೆಬ್ಬಯಕೆಗಳು,

---

* ಈ ಸಲಹೆ ಫಲಕಾರಿಯಾಗದುದಕ್ಕೆ ಏನು ಅಡ್ಡಿ ಬಂತೋ ತಿಳಿಯದು. ಅಂತೂ ಈವರೆಗೆ ಸಂಘ ಹೇಗೆ ಹುಟ್ಟಿಕೊಂಡಿತು, ಮೊದಲ ವರ್ಷಗಳಲ್ಲಿ ಅದರ ಕಾರ್ಯ ಕಲಾಪಗಳೇನು, ಅದು ಸಾಧಿಸಲು ಹೊರಟ ಗುರಿ ಏನು, ಸಾಧಿಸಿದುದು ಏನನ್ನು, ಸಂಘದ ಕಾರ್ಯದಲ್ಲಿ ನೆರವಾದವರು ಯಾರು, ಇವನ್ನೆಲ್ಲ ತಿಳಿಸುವಂಥ ಯಾವ ವರದಿಯಾಗಲಿ ಪುಸ್ತಕವಾಗಲಿ ಇದ್ದಂತೆ ಕಾಣಲಿಲ್ಲ.

ಹೆಚ್ಚು ವೆಚ್ಚ ಹಿಡಿಯುವ ಅನೇಕ ಯೋಜನೆಗಳು ತುಂಬಿವೆ. ಅಭಿವೃದ್ಧಿಯ ಕಡೆಯೇ ಗಮನವಿರುವ ಮನಸು ಅವರದು. ಆದರೆ ಪಾಶ್ಚಾತ್ಯ ಮಾರ್ಗದ ಅನುಕರಣೆಯೇ ಹೆಚ್ಚೆಂದು ಕೇಳಿದ್ದೇನೆ. ಅಲ್ಲಿನ ಮಾರ್ಗವನ್ನು ನಮ್ಮ ದೇಶದ ಸ್ಥಿತಿಗೆ ಅಳವಡಿಸತಕ್ಕ ಬುದ್ಧಿ ಇಲ್ಲವೆಂದು ಕೇಳಿದ್ದೇನೆ ಅದೇ ನನಗೆ ದಿಗಿಲು. ಯೂರೋಪಿಯನರನ್ನು ಕಂಡರೆ ತೀರ ಅಭಿಮಾನ. ದೇಶೀಯರಿಗೆ ಪ್ರೋತ್ಸಾಹ ಕೊಡುತ್ತಾರೊ ಇಲ್ಲವೊ........ಅವರು ರೆಡ್ಡಿಯವರಿಗೆ ಪ್ರೋತ್ಸಾಹಕೊಡಬೇಕು. ಅವರ ಬೆಲೆಯನ್ನು ಅರಿತುಕೊಂಡು ಅವರ ಕೈಯಿಂದ ಅನೇಕ ಕೆಲಸಗಳನ್ನು ಮಾಡಿಸಬೇಕು. ಯೂರೋಪಿನಲ್ಲಿ ಮನ್ನಣೆಯನ್ನು ಪಡೆದಿರುವ ಶ್ರೀ. ಎಸ್. ವಿ. ಸೆಟ್ಟಿಯವರನ್ನು ಶ್ರೀ. ಆಚಾರ್ಯರನ್ನು ಮುಂದೆ ತರಬೇಕು. ಸುಬ್ಬರಾವ್, ರಾಘವೇಂದ್ರ ರಾವ್ ಇವರುಗಳಿಗೆ ಉತ್ತೇಜನ ಕೊಡಬೇಕು. ಇವರೆಲ್ಲ ಉತ್ತಮಪುರುಷರು. ಒಳ್ಳೆಯ ಸಂಸ್ಕಾರ ಹೊಂದಿದವರು. ಸುಮ್ಮನೆ ಯೂರೋಪಿಯನರನ್ನೆ ತಂದು ಅವರ ತಾಳಕ್ಕೆ ಕುಣಿಯುವುದು ಸರಿಯಲ್ಲ.

ಅವರು ಅಭಿವೃದ್ಧಿ ಕಾರಕವಾದ ಯೋಜನೆಗಳನ್ನು ಮುಂದಿಟ್ಟು ಮೈಸೂರಿನಲ್ಲಿ ಸ್ವಲ್ಪಮಟ್ಟಿಗೆ ಕ್ರಾಂತಿಯನ್ನುಂಟುಮಾಡಬಹುದು. ನಮಗೆ ಒತ್ತಾಯದ ಶಿಕ್ಷಣ ಬೇಕೆಂದು ಅವರಿಗೆ ಹೇಳು. ಸರಕಾರವನ್ನು ಬೆಂಗಳೂರಿನಿಂದ ಬದಲಾಯಿಸಕೂಡದೆಂದು ಹೇಳು. ಬೆಂಗಳೂರನ್ನು ಸೊಗಸಾದ ಒಂದು ಪುರಭವನದಿಂದ (Town Hall) ಒಂದು ಸಾರ್ವಜನಿಕ ಪುಸ್ತಕಾಲಯದಿಂದ (Public Library) ಒಂದು ರಾಷ್ಟ್ರೀಯ ಕಲಾಶಾಲೆಯಿಂದ ತುಂಬುವಂತೆ ಹೇಳು. ಶಿಲ್ಪಕಲೆಯನ್ನ ಚಿತ್ರಕಲೆಯನ್ನ ಮತ್ತು ಇತರ ಕುಶಲಕಲೆಗಳನ್ನ ಅವರು ಪ್ರೋತ್ಸಾಹಿಸಲಿ. ರಂಗಾಚಾರ್ಲು, ಶೇಷಾದ್ರಿ ಅಯ್ಯರ್ ಮತ್ತು ಇತರ ದಿವಾನರುಗಳ ಪ್ರತಿಮೆಯನ್ನ ಜನ ನೆರೆಯುವ ಚೌಕಗಳಲ್ಲಿ ಇಡಲಿ. ಈಗಿರುವ ಮ್ಯೂಸಿಯಂನ್ನು ವಿಸ್ತರಿಸಿ ಅದನ್ನು ಅಭಿವೃದ್ಧಿಪಡಿಸಲಿ. ಅಲ್ಲಿ ಪ್ರದರ್ಶಿತವಾಗಿರುವ ವಸ್ತುಗಳನ್ನು ಹೆಚ್ಚು ವಿತರಣೆಯಿಂದ ಜೋಡಿಸಿ ಒಂದೊಂದಕ್ಕೂ ವಿವರವಾದ ಚರಿತ್ರೆಯನ್ನು ಬರೆಸಿ ಇಡಿಸಲಿ. ನಮ್ಮ ಲಾಲ್‌ಬಾಗನ್ನು, ಮಾರುಕಟ್ಟೆಯನ್ನು

ಉತ್ತಮಪಡಿಸಲಿ ; ಸುಂದರವಾಗಿ ಕಾಣುವಂತೆ ಮಾಡಲಿ. ಜನರು ಎಲ್ಲ ಮುಖ್ಯಸ್ಥಳಗಳನ್ನು ಪೋಲೀಸರ ಭಯವಿಲ್ಲದೆ ನೋಡಿಕೊಂಡು ಬರುವಂತೆ ಏರ್ಪಾಡುಮಾಡಲಿ. ಪೋಲೀಸು ಪಡೆಯನ್ನು ಕ್ರಮಗೊಳಿಸಲಿ. ಉತ್ತಮ ರೀತಿಯ ಸಂಘಗಳನ್ನು (Clubs) ಉತ್ತಮವರ್ಗದ ಪತ್ರಿಕೆಗಳನ್ನು ಪ್ರೋತ್ಸಾಹಿಸಲಿ. ಮುನಿಸಿಪಾಲಿಟಿಗಳಿಗೆ ವೋಟು ಕೊಡಲಿ. ಆದಷ್ಟು ಮಟ್ಟಿಗೆ ಅವುಗಳನ್ನು ಸರಕಾರದ ಹಿಡಿತದಿಂದ ತಪ್ಪಿಸಲಿ. ಪ್ರತಿನಿಧಿ ಸಭೆಯಲ್ಲಿ ಪ್ರಶ್ನೆಗಳನ್ನ ಕೇಳಿದರೆ ಅವುಗಳಿಂದ ನೊಂದುಕೊಳ್ಳದೆ ಇರಲಿ. ಮೈಸೂರು ಸಂಸ್ಥಾನದಲ್ಲಿರುವ ಪ್ರತಿಯೊಬ್ಬ ಪ್ರಜೆಯೂ ತಾನು ಸ್ವತಂತ್ರ ವಾದ ಸೀಮೆಯಲ್ಲಿದ್ದಾನೆಂದು ಭಾವಿಸುವಂತಾಗಲಿ ಬುದ್ಧಿ ಕೌಶಲಗಳಿ ಗನುಸಾರವಾಗಿ ಮನುಷ್ಯನಿಗೆ ಮರ್ಯಾದೆ ದೊರೆಯಲಿ. ನಮ್ಮ ಮಹಾರಾಜ ಯುವರಾಜರುಗಳನ್ನು ಇಂಗ್ಲೆಂಡ್ ಅಮೆರಿಕಗಳಿಗೆ ಕಳುಹಿಸಿ ಕೊಡಲಿ. ಬೆಂಗಳೂರಿಗೆ ಸೊಗಸಾದ ಅಠಾರ ಕಚೇರಿಯೊಂದನ್ನು ಕೊಡಲಿ. ಒಂದು ಬೆಂಕಿಕಡ್ಡಿ ಕಾರ್ಖಾನೆ, ಒಂದು ಪೆನ್ಸಿಲ್ ಕಾರ್ಖಾನೆ, ಒಂದು ಚಾಕು ಕತ್ತಿಯ ಕಾರ್ಖಾನೆ, ಒಂದು ಕಾಗದ ತಯಾರುಮಾಡುವ ಮಿಲ್ಲು, ಇವೇ ಮುಂತಾದ ಉಪಯುಕ್ತ ಕೈಗಾರಿಕೆಗಳನ್ನು ಸ್ಥಾಪಿಸಿ ಪ್ರೋತ್ಸಾಹಿಸಲಿ. ಸಂಸ್ಥಾನದ ಒಂದೊಂದು ಜಿಲ್ಲೆಯ ಮುಖ್ಯರನ್ನು, ಜಿಲ್ಲಾಧಿಕಾರಿಗಳನ್ನು ಒಂದು ಆರು ತಿಂಗಳು, ಜಪಾನು ಪಾಶ್ಚಾತ್ಯ ದೇಶಗಳನ್ನು ಸುತ್ತಿಬರುವಂತೆ ಏರ್ಪಾಟುಮಾಡಲಿ. ಇವೆಲ್ಲವನ್ನು ಮಾಡಲಿ. ಆಗ ವಿಶ್ವೇಶ್ವರಯ್ಯನವ ರನ್ನು ಮೈಸೂರಿನ ಹೆಸರನ್ನು ಮುಂದಕ್ಕೆ ತಂದ ಮಹನೀಯರೆಂದು ಜನರು ಗೌರವಿಸುವುದನ್ನು ನೀನು ನೋಡುವೆ. ಅವರ ಪ್ರತಿಮೆ ಮೈಸೂರು ಬೆಂಗ ಳೂರು ನಗರದ ಮುಖ್ಯ ಬೀದಿಗಳಲ್ಲಿ ಪ್ರದರ್ಶಿತವಾಗುತ್ತವೆ. ಮೈಸೂರು ದೇಶದ ಗ್ಲಾಡ್‌ಸ್ಟನ್ ಪಿಟ್ ಅಥವಾ ಛತಾಮನೆಂದು ಮೈಸೂರು ಜನ ಅವರನ್ನು ಸ್ಮರಿಸಿಕೊಳ್ಳುತ್ತಾರೆ.

ಮೈಸೂರು ದೇಶದ ಉದ್ದಗಲವನ್ನು ರೈಲುಮಾರ್ಗಗಳಿಂದ ತುಂಬಲಿ. ಒಂದು ವಿವಿಧಕಲಾಶಾಲೆ (Polytechnic) ಏರ್ಪಡಿಸಿ ಅದರಲ್ಲಿ ಹೆಚ್ಚು ತ್ತಿರುವ ನಮ್ಮ ಫೇಲಾದ ಮೆಟ್ರಿಕ್ಯುಲೇಟ್ ಬಳಗಕ್ಕೆ ಒಂದು ದಾರಿ ಕಲ್ಪಿಸಲಿ. ರಾಷ್ಟ್ರೀಯ ಮಂದಿರ (National Edifice) ಒಂದನ್ನು ಕಟ್ಟಿ ಅದರಲ್ಲಿ

ಮೈಸೂರಿನ ಮುಖ್ಯ ಮಹನೀಯರ, ಹಿಂದೂದೇಶದ ಮುಖ್ಯ ನಾಯಕರ ಪ್ರತಿಮೆಗಳನ್ನು ಇರಿಸಲಿ. ಮಹಾಭಾರತ, ರಾಮಾಯಣಗಳಿಂದ ಎತ್ತಿ ಕೊಂಡು ನೋಡುತ್ತಲೆ ಉತ್ತಮವಾದ ನೀತಿ ನಡತೆ ತಿಳಿಯುವಂತೆ ಸೊಗಸಾದ ಶಿಲ್ಪಕೃತಿಗಳಿಂದ ತುಂಬಲಿ. ನಮ್ಮ ಪುರಾಣದ ವಸ್ತುಗಳು ಕೆಲವನ್ನು ಆರಿಸಿಕೊಂಡು, ಅವುಗಳನ್ನು ಸುಂದರವಾದ ಕಲ್ಲಿನಲ್ಲಿ ರೂಪಿಸಿ, ಭವ್ಯವಾದ ಭವನಗಳಲ್ಲಿಟ್ಟು ಜನರ ಮನಸನ್ನು ವಿಕಾಸಗೊಳಿಸಿ ಅವರ ಮನಸನ್ನು ಆನಂದಗೊಳಿಸಲು ನಾನೆಷ್ಟು ಆಸೆಪಡುತ್ತೇನೆ ಬಲ್ಲೆಯಾ? ದ್ರೌಪದಿ ತನ್ನ ಮಾನವನ್ನು ಕಳೆಯುತ್ತಿರುವ ಶತ್ರುಗಳಿಂದ ತನ್ನನ್ನು ಕಾಪಾಡು ಎಂದು ಮೊರೆಯಿಡುವುದನ್ನ, ದಮಯಂತಿ ಗಂಡನಾದ ನಳನಿಗೆ ತನ್ನ ಅರ್ಧಸೀರೆ ಕೊಡುವುದನ್ನ, ರಾಕ್ಷಸರಿಂದ ಸುತ್ತುವರಿಯಲ್ಪಟ್ಟು ಅಶೋಕದ ಮರದ ಕೆಳಗೆ ಕುಳಿತು ಏಕಮನದಿಂದ ರಾಮನ ಧ್ಯಾನವನ್ನು ಮಾಡುತಿರುವ ಸೀತೆಯನ್ನ, ನತದೃಷ್ಟನಾದ ಆದರೂ ಸತ್ಯವನ್ನು ಬಿಡದ ಹರಿಶ್ಚಂದ್ರನನ್ನು ಹಿಂಬಾಲಿಸುತ್ತಿರುವ ಚಂದ್ರಮತಿಯನ್ನ, ಸಾವಿತ್ರಿ ತನ್ನ ಪ್ರಾಣಪ್ರಿಯನನ್ನು ಯಮನ ದವಡೆಯಿಂದ ಬಿಡಿಸಿಕೊಂಡು ಬರುವುದನ್ನ, ಇವೆಲ್ಲವನ್ನು ತೋರಿಸುವ ನೋಟ ನಮ್ಮಜನದ ಮನಸನ್ನು ಮುಟ್ಟುವು ದಿಲ್ಲವೆ? ಯಾವನು ತಾನೆ ಧರ್ಮರಾಯ ಎಂಥ ಕಷ್ಟಕಾಲ ಬಂದರೂ ಧರ್ಮವನ್ನೂ ಸತ್ಯವನ್ನೂ ಎಡಬಿಡದೆ ಪಾಲಿಸುತ್ತಿರುವ ಚಿತ್ರವನ್ನು ನೋಡಿ, ಅಥವಾ ಹರಿಶ್ಚಂದ್ರ ರಾಜ್ಯವನ್ನೂ ಸುಖವನ್ನೂ ಬಿಟ್ಟು ಸತ್ಯಕ್ಕಾಗಿ ಪಡುವ ಕಷ್ಟ ತೋರಿಸುವ ದೃಶ್ಯವನ್ನು ನೋಡಿ, ತನ್ನನ್ನೇ ದಾನವಾಗಿ ಕೊಟ್ಟುಕೊಂಡ ಬಲಿಯ ದೃಶ್ಯವನ್ನು ನೋಡಿ, ಒಳ್ಳೆಯ ನಡತೆ ಏನೆನ್ನು ವುದನ್ನು ಕಲಿಯದೆ ಹೋಗುವನು? ಕೃಷ್ಣ ಉಪದೇಶಮಾಡುತಿರುವ ಗೀತೆಯನ್ನ ಅರ್ಜುನ ಭಕ್ತಿಯಿಂದ ನಿಂತು ಕೇಳಲಿ; ಮೈತ್ರೇಯಿ ತನ್ನ ತಂದೆಯಿಂದ ತತ್ವ ಕಲಿಯಲಿ; ಜನಕ ರಾಜ್ಯವಾಳಿ ಋಷಿಯಂತೆ ಬಾಳಲಿ; ಕೃಷ್ಣ ಕ್ರೂರ ರಾಕ್ಷಸರಿಂದ ಈ ಲೋಕವನ್ನ ಉದ್ಧಾರಮಾಡಲಿ; ಪ್ರಹ್ಲಾದ ತನ್ನ ಧ್ಯಾನವಾಣಿಯನ್ನ ಮೇಲೆತ್ತಿ ದೇವರಿಗೆ ಮೊರೆ ಇಡಲಿ. ನಮ್ಮಲ್ಲಿ ಗಾಢವಾದ ಭಕ್ತಿಯನ್ನು ಉಂಟುಮಾಡುವಂಥ, ಒಳ್ಳೆಯ ನೀತಿ ನಡತೆ ಯನ್ನು ಬೋಧಿಸುವಂಥ, ಯಾವುದು ಉಚ್ಚವೊ, ಯಾವುದು ಉದಾತ್ತವೊ

ಅಂಥದೆಲ್ಲವನ್ನೂ ಚಿತ್ರದಲ್ಲಿ ರೂಪಿಸಲಿ ; ನಮ್ಮ ಕಣ್ಣ ಮುಂದೆ ಇಡಲಿ. ನಮ್ಮ ಭಾವನೆ ಭಕ್ತಿಯಿಂದ ಪ್ರೇರಿತವಾಗಲಿ. ಹೀಗೆ ಮಾಡುವುದರಿಂದ ಕುಶಲ ಕಲೆಗಳಿಗೆ, ಸ್ಥಳೀಯರ ಮೇಧಾಶಕ್ತಿಗೆ ಪ್ರೋತ್ಸಾಹಕೊಟ್ಟಂತಾಗು ವುದಿಲ್ಲವೆ ? ನಮ್ಮ ಜನ ನಿಜವಾಗಿ ಮನುಷ್ಯರಾಗುವಂತೆ ಮಾಡಿ ಅವರ ಬುದ್ಧಿ ಕೌಶಲ್ಯಗಳು ಹೊರಗೆಕಾಣುವ ಅವಕಾಶವನ್ನು ಕಲ್ಪಿಸಿಕೊಟ್ಟಂತಾಗು ವುದಿಲ್ಲವೆ ?

ಹೆಣ್ಣಾದವಳು, ಧೈರ್ಯವನ್ನೂ ಪರಾಕ್ರಮವನ್ನೂ ಶೀಲವನ್ನೂ ಗೌರವಿಸಿ, ಇವೆಲ್ಲವನ್ನೂ ತೋರಿಸುವಂಥವನ ಕೈಹಿಡಿಯುವುದನ್ನು ತೋರಿ ಸುವ ಸ್ವಯಂವರದ ಭವ್ಯವಾದ ದೃಶ್ಯವನ್ನು ನಮ್ಮ ಮುಂದಿಡಲಿ. ರಾಮಾ ಯಣದ ದಿವ್ಯ ಸುಂದರ ದೃಶ್ಯಗಳನ್ನು ಇಲ್ಲಿ ಕಾಣೋಣ. ರಾವಣ ವಿಭೀ ಷಣನ ಮಾತು ಕೇಳದೆ ಅಧೋಗತಿಗೆ ಬೀಳುವುದನ್ನು, ಸುಂದರವಾದ, ಭವ್ಯವಾದ ವನಗಳ ಮಧ್ಯೆ ನಿಸ್ವಾರ್ಥವಾದ, ಸ್ವಚ್ಛವಾದ, ಸಾಮಾನ್ಯವಾದ ಬಾಳು ಬಾಳಿದ ಋಷಿಜೀವನವನ್ನು ತೋರಿಸುವ ಚಿತ್ರ ಕಾಣೋಣ. ಭಗೀ ರಥ ಗಂಗೆಯನ್ನು ಭೂಮಿಗೆ ತರುವುದನ್ನೂ. ಆ ಗಂಗೆ ಚಿತ್ರಮಯವಾದ ಕಲ್ಲುಗಳ ಮಧ್ಯೆ ಹರಿದು ಹೋಗುತಿರುವ ದೃಶ್ಯವನ್ನೂ ಕಾಣೋಣ. ಒಂದು ಮಾತಿನಲ್ಲಿ ಹೇಳುವುದಾದರೆ ಯಾವುದು ಅತಿ ಉತ್ತಮವಾದುದೋ, ಅತಿ ಉಚ್ಚವಾದುದೋ, ಅತಿ ಭವ್ಯವಾದುದೋ, ಉದಾತ್ತವಾದುದೋ ಅದೆಲ್ಲ ವನ್ನೂ ಪಡೆಯೋಣ. ಬರಿಯ ಓದಿನಿಂದ ತೃಪ್ತರಾಗುವುದಿರಲಿ, ಸ್ವಂತ ವಾಗಿ ಕಣ್ಣಿಂದ ಕಾಣೋಣ. ಆ ಅದ್ಭುತವಾದ ಭಾರತದಲ್ಲಿ ಅದೆಷ್ಟು ದೃಶ್ಯ ಗಳು ಅಡಕವಾಗಿವೆ ! ಇವೆಲ್ಲ ನಮ್ಮ ಸ್ವದೇಶಾಭಿಮಾನವನ್ನು ಕೆರಳಿಸುತ್ತವೆ. ರಾಷ್ಟ್ರೀಯ ಭಾವನೆಯನ್ನು ಉಜ್ವಲಗೊಳಿಸುತ್ತವೆ. ರಾಷ್ಟ್ರೀಯ ಕಲಾ ಶಾಲೆಯ ಆದರ್ಶವನ್ನು ಗುರಿಯಾಗಿ ನಾವಿಟ್ಟುಕೊಳ್ಳಬೇಕು. ಅದಕ್ಕಾಗಿ ಕೆಲಸಮಾಡಬೇಕು. ಮೈಸೂರಿನವರು ಮುಂದೆ ಹೆಜ್ಜೆ ಇಟ್ಟು ಮಿಕ್ಕವರಿಗೆ ದಾರಿ ತೋರಿಸಿಯಾರೆ ?

ನಮ್ಮ ಮೈಸೂರು ಬೆಂಗಳೂರು ನಗರಗಳು ಸೊಗಸಾದ ಉದ್ಯಾನ ಗಳಿಂದ, ಸುಂದರವಾದ ಕಾರಂಜಿಗಳಿಂದ, ಮೈಸೂರಿನದೇ ಏಕೆ, ಭಾರತದ

ಪ್ರಸಿದ್ಧ ಪುರುಷರ ಭವ್ಯವಾದ ಪ್ರತಿಮೆಗಳಿಂದ ಅಲಂಕೃತವಾಗುವುದನ್ನು ನೋಡುವ ಇಷ್ಟ ನನಗೆ ಬಹಳ. ವಿವೇಕಾನಂದರ ಪ್ರತಿಮೆ ಒಂದಿಟ್ಟರೆ ಮೈಸೂರಿನವರಾದ ನಮಗೆ ಗೌರವ ಬರುತ್ತದೆ. ಹೈದರ್, ಟಿಪ್ಪು ಇವರು ಗಳ ಪ್ರತಿಮೆಯೂ ಬೇಕು. ಈ ಪಟ್ಟಣಗಳನ್ನು ಸೌಂದರ್ಯದ, ಸೌಖ್ಯದ ತವರುಮನೆಯಾಗಿ ಮಾಡಿ. ಪ್ರತಿ ಮೈಸೂರಿನವನೂ ಇಲ್ಲಿಯ ಸ್ಕಾಚ್ ಜನ ತಮ್ಮ ಎಡಿನಬರೋ ನಗರವನ್ನು ಕಂಡು ಹೆಮ್ಮೆಪಡುವಂತೆ ಈ ನಗರ ಗಳ ಕಡೆ ಹೆಮ್ಮೆಯಿಂದ ಉತ್ಸಾಹದಿಂದ ನೋಡಲಿ. ಸೌಂದರ್ಯದ ನೆಲವೀಡು ಇವು ಎಂದು ಬೇರೆಯವರಿಗೆ ತೋರಿಸಿ ಹೇಳಲಿ.

ಪ್ರತಿ ಜಿಲ್ಲೆಯಲ್ಲಿಯೂ, ಎಲ್ಲೆಲ್ಲಿಯೂ ಮ್ಯೂಸಿಯಂಗಳಾಗಲಿ. ಪ್ರತಿ ಜಿಲ್ಲೆಯಲ್ಲಿ ದೊರೆಯುವ ವಸ್ತು, ಅಲ್ಲಿ ತಯಾರಾಗುವ ಸಾಮಾನುಗಳು ಈ ಮ್ಯೂಸಿಯಂಗಳಲ್ಲಿ ಪ್ರದರ್ಶಿತವಾದರೆ ಸಾಕು.

ವಿದ್ಯೆ, ವಿದ್ಯೆ—ಎಲ್ಲ ಅವಕಾಶವನ್ನು ಪಡೆದು, ಎಲ್ಲ ಅನುಕೂಲವನ್ನು ಪಡೆದು, ಪುಸ್ತಕಗಳ ಮೂಲಕ, ಇತರ ವಸ್ತುಗಳ ಮೂಲಕ ವಿದ್ಯೆ ದೊರ ಕಿಸಿಕೊಡಬೇಕು. ಯಾವ ಕಡೆ ತಿರುಗಿನೋಡಲಿ ಮನಸನ್ನು ಮುಟ್ಟು ವಂಥ, ಕಲ್ಪನೆಯನ್ನು ಕೆರಳಿಸುವಂಥ ವಸ್ತು ಕಾಣುವಂತಿರಬೇಕು.

ಇವೆಲ್ಲ ಬರಿಯ ಕಲ್ಪನೆ ಕನಸು ಎಂದು ಹೇಳುವೆಯಲ್ಲವೆ. ರಾಮು, ನೀನು ಹೇಳುವುದು ಸುಳ್ಳು. ನಾನು ಹೇಳಿದುದೆಲ್ಲ ಕಾರ್ಯರೂಪಕ್ಕೆ ತರಲು ಸಾಧ್ಯ. ಜನಕ್ಕೆ, ಅವನ್ನು ಕಾರ್ಯರೂಪಕ್ಕೆ ತರುವಂಥವನಿಗೆ ಮನ್ನಣೆ ಯನ್ನು, ಗೌರವವನ್ನು ತರತಕ್ಕವು. ಏನೇ ಆಗಲಿ ಈ ಆದರ್ಶವೆ ನಮ್ಮ ಗುರಿಯಾಗಬೇಕು. ಈ ಗುರಿಯನ್ನು ಮುಟ್ಟಲು ಯಾವನು ಸ್ವಲ್ಪವಾದರೂ ಶ್ರಮಿಸುತ್ತಾನೋ ಅವನು ದೇಶದ ಪುನರುದ್ಧಾರ ಕಾರ್ಯದಲ್ಲಿ ಮೂಲೆಕಲ್ಲನ್ನು ನೆಟ್ಟಂತೆ ಎಂದು ನಾನು ಭಾವಿಸುತ್ತೇನೆ. ಇಂಥ ಆದರ್ಶಗಳ ಕಲ್ಪನೆ ಎಂದರೆ ನನಗೆ ಇಷ್ಟ. I love to cherish ideals if it is only for the beauty, the glory, the thrill and the fire of it all. Glorious would be the day when

ideals could be realised and not pooh-poohed and scattered to the winds.

೧೪.

ಈ ವಾರ ಆತ್ಮತ್ಯಾಗಕ್ಕೆ ಸಂಬಂಧಿಸಿದ ಎರಡು ಮುಖ್ಯ ಸಂಗತಿಗಳನ್ನು ನೋಡುವ ಅವಕಾಶ ನನಗೆ ದೊರೆಯಿತು. ಜನರಲ್ ಬೂತನ ಸಾವು ಇದರಲ್ಲಿ ಒಂದು ಈತನ ಸಾವಿನಿಂದ ಎಷ್ಟು ಜನ ಇವನನ್ನು ಗೌರವಿಸು ತಿದ್ದರು ಎನ್ನುವುದು ತಿಳಿಯ ಬಂತು. ರಾಜರುಗಳು ಕಂಡು ಕರುಬುವಷ್ಟು ಮರ್ಯಾದೆ ಈತನಿಗೆ ದೊರೆಯಿತು. ನಾನು ಕಳುಹಿಸಿರುವ ಚಿತ್ರಪತ್ರಿಕೆ ಗಳಿಂದ ಈ ಮಹನೀಯುನನ್ನು ಎಷ್ಟುಜನ ಪ್ರೀತಿಸುತ್ತಿದ್ದರೆನ್ನುವುದನ್ನು ತಿಳಿಯುವೆ. ಅವನ ಧರ್ಮ, ಅವನ ಪದ್ಧತಿ, ಈ ದೇಶದಲ್ಲಿ ಸಧ್ಯ ಇರುವ ನಡವಳಿಕೆಗೆ ತೀರ ವಿರುದ್ಧವಾದುವು. ಹೀಗಿದ್ದರೂ ಜನ ಅವನನ್ನು ಗೌರವಿಸಿದರು, ಮರ್ಯಾದಿಸಿದರು. ಇದಕ್ಕೆ ಕಾರಣವೇನೆಂದರೆ ಆತ ತಾನು ಯಾವುದನ್ನು ಬೋಧಿಸಿದನೊ ಅದನ್ನೆ ಆಚರಣೆಗೆ ತಂದನು. ಮಿಕ್ಕವರು ಮಾತಿನಲ್ಲೆ ಎಲ್ಲ ಮುಗಿಸಿ ಏನೂಮಾಡದೆ ಇದ್ದ ಕಡೆ ಸ್ಪಷ್ಟವಾಗಿ ಮಾಡಿ ತೋರಿಸಿದನು. ಸ್ವಂತವಾಗಿ ಬಡವರ ಮನೆಗಳಿಗೆ ಹೋಗಿ ಹಸಿದ ಬಾಯಿಗೆ ರೊಟ್ಟಿ ಕಾಣಿಸಿದನು. ಒಣಗಿಕೊಂಡಿದ್ದ ಹೊಟ್ಟೆಗೆ ಹಾಲು ಹುಯ್ದನು. ಕಷ್ಟದಲ್ಲಿದ್ದವರಿಗೆ ಸಹಾಯುಮಾಡಿ, ಬೆತ್ತಲೆ ಇದ್ದವರಿಗೆ ಬಟ್ಟೆ ಹೊದಿಸಿ, ಬಡವ ಅನಾಥ ಒಬ್ಬಂಟಿಗ ಪಾತಕ ದಾರಿತಪ್ಪಿದವ ಇವರಿಗೆ ದಿಕ್ಕಾಗಿ ಸಹಾಯಕನಾಗಿ ಸ್ನೇಹಿತನಾಗಿ ನಿಂತನು. ಕತ್ತಲ ಕೂಪದಲ್ಲಿ ನರಳುತ್ತಿದ್ದ ಆತ್ಮಗಳಿಗೆ ಬೆಳಕು ಕಾಣಿಸಿದನು. ಹೀಗೆ ಕಾರ್ಯತಃ ಮಾಡಿದುದರಿಂದ ಅವನ ಹೆಸರು ಎಲ್ಲೆಲ್ಲಿಯೂ ಕೇಳಿಬಂತು. ಎಲ್ಲರಿಂದಲೂ ಮನ್ನಣೆಪಡೆ ಯಿತು. ಜನರಿಗೆ ಉಪಕಾರವಾಗುವ ಇಂಥ ಕಾರ್ಯವನ್ನೆ ನಾವು ಮಾಡ ಬೇಕಾಗಿರುವುದು. ಅಸ್ಪೃಶ್ಯರನ್ನು ಉದ್ಧಾರಮಾಡಬೇಕು ಇತ್ಯಾದಿ, ಇತ್ಯಾದಿ, ಉಪನ್ಯಾಸದ ಮೇಲೆ ಉಪನ್ಯಾಸ ಕೊಡುವುದು ಇನ್ನು ಸಾಕು. ಅವರ ಗುಡಿಸಲುಗಳಿಗೆ ನುಗ್ಗಿ ಬೆತ್ತಲೆ ಇರುವ ಪರಯುನನ್ನು ಅಪ್ಪಿ

ಕೊಂಡು, ಹಸಿದಿರುವ ಹೊಲೆಮಗನಿಗೆ ಊಟ ತಂದುಕೊಡುವಂಥವನನ್ನು ನಾವು ಹುಡುಕಬೇಕಾಗಿದೆ........ಚಿತ್ರ ಪತ್ರಿಕೆಯಲ್ಲಿರುವ ಜನರಲ್ ಬೂತನ ಜೀವನವನ್ನು ಓದು.

ಇಂಗ್ಲೀಷ್ ಡಿಗ್ರಿಯನ್ನು ಪಡೆಯಬೇಕೆಂದು ನನಗೇನೊ ಇಷ್ಟ. ಆದರೆ ನನಗೆ ಸ್ವಲ್ಪ ಕೂಡ ವಿರಾಮವಿಲ್ಲ. ಡಿಗ್ರಿ ಪಡೆಯುವುದು ಆಗುವ ಹಾಗೆ ಇಲ್ಲ.

* * *

ಜನಸೇವೆಯಲ್ಲಿಯೇ ತೊಡಗಿರುವ ಮನುಷ್ಯ ನೀನು Lord Morley ಉಪನ್ಯಾಸದಲ್ಲಿ ಹೇಳಿದ ಮಾತನ್ನು ನಿನಗೆ ತಿಳಿಸಬೇಕೆಂದು ಇಷ್ಟ-

" Public life is a noble sphere. Whether it is municipal or national, it is fit for any body who has decent brains, a stout heart, a persistant temperament and a good mixture of the intrepid with the sedate, the bold with the sensible. I think that pluck, a certain delightful and frankness of speech, independence of mind and a thorough hatred of affectation are useful qualities.

Hold on to popular self-government as being the very essence of good government. Democracy has no inherited title, but must show to the world by experience that it is a good and effective form of government."

ಜನಸೇವೆಯಲ್ಲಿ ನಿರತನಾದ ಮನುಷ್ಯನ ಎಂಥ ನೈಜವಾದ ಚಿತ್ರವಿದು. ನೀನು ಈ ಚಿತ್ರವನ್ನು ಎಷ್ಟು ಚೆನ್ನಾಗಿ ಹೋಲುತೀಯೆ ! ನೀನು ಮಾತ್ರ ಉದಾಸೀನನಾಗಿ, ದಾರಿ ತಪ್ಪಿದವನಾಗಿ ಇಲ್ಲದಿದ್ದರೆ ! !

* * *

ಜನರಲ್ ಬೂತ್ ತೀರಿಹೋದನು. ಯಾವ ರಾಜನಿಗೂ ಸತ್ತಾಗ ನಡೆಯದ ಮರ್ಯಾದೆ ಈ ಜನರಲ್ಲನಿಗೆ ನಡೆಯಿತು. ಈತ ಬಡಜನರಿಗಾಗಿ ಬದುಕಿ, ಅವರ ಉದ್ಧಾರಕ್ಕಾಗಿ ಜನೋಪಕಾರಿಗಳ ದೊಡ್ಡ ದಂಡನ್ನೆ ಕಟ್ಟಿದ. ನಮ್ಮ ಸಂಘದಲ್ಲಿಯೂ ಇದೇ ರೀತಿ ಕೆಲಸಮಾಡುವ ಅವಕಾಶವಿದೆ. ನಾವೂ ನಮ್ಮ ಬಡಬಂಧುಗಳ ಕತ್ತಲು ತುಂಬಿದ ಕೋಣೆಗಳಿಗೆ ಬೆಳಕನ್ನು ಸುಖ ವನ್ನು ತರಬಹುದು. ನಮ್ಮ ಸಂಸ್ಥಾನವನ್ನಾದರೂ ನಮ್ಮ ಧರ್ಮಕಾರ್ಯ ಗಳಿಂದ ತುಂಬಬಹುದು.

ಡಾಕ್ಟರ್ ಬರ್ನಾರ್ಡೊ ಅವರು ಬಡ ಮಕ್ಕಳಿಗಾಗಿ ಅನಾಥರಿಗಾಗಿ ಬಾಳಿದರು, ಬಾಳು ನೀಗಿದರು. ಬಡವರಿಗಾಗಿ ಮರುಗಿದರು. ಅವರಿ ಗಾಗಿ ದೇವರಲ್ಲಿ ಮೊರೆಯಿಟ್ಟರು. ದೇವರು ಅವರ ಕೂಗಿಗೆ ಓ ಗೊಟ್ಟನು. ಅದರ ಫಲವಾಗಿ ಸಾವಿರಾರು ಮಂದಿ ಅನಾಥರು, ದಿಕ್ಕಿಲ್ಲದವರು ಸುಖಿಗ ಳಾದರು, ಆರೋಗ್ಯವಂತರಾದರು, ವಿದ್ಯಾವಂತರಾದರು, ಒಳ್ಳೆಯ ಪೌರ ರಾದರು. ಈ ರೀತಿಯ ಕಾರ್ಯವನ್ನು ನಮ್ಮ ಸಂಘ ಕೂಡ ಮಾಡಬಹುದು. ನೋಡಿಕೊಳ್ಳುವವರು ಯಾರೂ ಇಲ್ಲದೆ ಬೆಳೆಯುತ್ತಿರುವ ಅಸಂಖ್ಯಾತ ಮಕ್ಕಳುಗಳಿಗೆ ಪ್ರೀತಿಯನ್ನು, ಬಂಧು ಪ್ರೇಮವನ್ನು ತೋರಿಸುವ ಅವಕಾಶ ನಮ್ಮ ಸಂಘಕ್ಕೆ ವಿಶೇಷವಾಗಿದೆ.

ರಾಜಕೀಯ, ಸಾಮಾಜಿಕ, ನೈತಿಕ, ಧಾರ್ಮಿಕ ಈ ಎಲ್ಲ ಬಗೆಯ ಕಾರ್ಯಗಳು ಇನ್ನೂ ಬಾಲ್ಯಾವಸ್ಥೆಯಲ್ಲಿರುವ ನಮ್ಮ ಸಂಘದಲ್ಲಿ ಅಡಗಿವೆ. ಕಷ್ಟಪಟ್ಟು ದೃಢಮನಸಿನಿಂದ ಮಾಡುವ ಕೆಲಸ ಅದ್ಭುತವಾದ ಫಲ ಕೊಟ್ಟೇ ಕೊಡುತ್ತದೆ.

ಇಲ್ಲಿನ ಎಲ್ಲ ತರದ ಕಾರ್ಯಗಳನ್ನು ಚಟುವಟಿಕೆಗಳನ್ನು ನೋಡುತ್ತ ಮೇಲಿನಂತೆ ಯೋಚನೆಮಾಡುತ್ತಿದೇನೆ.

೧೫.

ಇಲ್ಲಿನ ಹೆಂಗಸರನ್ನು ನಾವು ಅನುಕರಿಸುವುದು ಸರ್ವಥಾ ಕೂಡದು. ಗಂಡಸಿನೊಡನೆ ಪೈಪೋಟಿ ಹೂಡುವಂತೆ ನಮ್ಮ ಹೆಂಗಸರನ್ನು ಎಂದಿಗೂ ಎಳೆದು ತರಬಾರದು. ಹೆಂಗಸು ಗಂಡಸಿನೊಡನೆ ಯಾವಾಗಲೂ ತಿರುಗಾಡುವುದು. ಅವನ ಜೊತೆಗೇ ನಿಂತು ಕೆಲಸಮಾಡುವುದು, ಈ ನಡವಳಿಕೆಯನ್ನು ಕಂಡು ಅಸಹ್ಯಪಡುತ್ತೇನೆ. ಹೆಣ್ಣುಗಳು ತಮ್ಮ ಮನಬಂದ ಯುವಕರೊಡನೆ ಓಡಾಡಲು, ಬಹಿರಂಗವಾಗಿ ಮುದ್ದಾಟವಾಡಲು, ಅರೆ ಬೆತ್ತಲೆ ಕುಣಿಯಲು, ಇಂಥ ಕೆಲಸಗಳಿಗೆಲ್ಲ ಒಪ್ಪಿಗೆ ಕೊಡುವಂಥ ಸಮಾಜದ ಶೀಲ ಶೀರ ಕೆಳಮಟ್ಟದ್ದೆಂದು ನನ್ನ ಅಭಿಪ್ರಾಯ. ನಮ್ಮ ಹೆಂಗಸರಿಗೆ ಸ್ವಾತಂತ್ರ್ಯ ಕೊಡಬೇಕು ನಿಜ. ಅವರು ವಿದ್ಯಾವಂತರಾಗಬೇಕು ನಿಜ. ನನ್ನ ಅಭಿಪ್ರಾಯದಲ್ಲಿ ಹೆಂಗಸರು ಅವರ ಆವರಣದಲ್ಲಿರುವುದೇ ಒಳ್ಳೆಯದು. ಸ್ತ್ರೀ ಸಮಾಜಗಳಿರಲಿ, ಲೇಡೀಸ್ ಕ್ಲಬ್‌ಗಳಿರಲಿ, ಅವರದೇ ಕಾರ್ಖಾನೆಗಳಿರಲಿ. ಆದರೆ ಬಹಿರಂಗವಾಗಿ ಗಂಡು ಹೆಣ್ಣು ಬೆರೆತು ಕೆಲಸಮಾಡುವುದು ಬೇಡ. ಹೀಗೆ ಮಾಡುವುದರಿಂದ ಹೆಂಗಸು ಗಂಡುಬೀರಿಯಾಗುತ್ತಾಳೆ. ಹೆಣ್ಣಿಗಿರುವ ಸಹಜವಾದ ನಾಚಿಕೆ ವೈಯಾರ, ಲಾವಣ್ಯ, ಮಾಧುರ್ಯ ಎಲ್ಲ ಹೋಗುತ್ತದೆ. ಹೆಣ್ಣನ್ನು ಎಲ್ಲಿಯಾದರೂ ಗಂಡಾಗಿ ಮಾಡುವುದೆ ? ಗಂಡಸಿನೊಡನೆ ಪೈಪೋಟಿ ಹೂಡುವುದೆ ? ಇಲ್ಲಿನ ಸಫ್ರಜೆಟ್ ಹೆಂಗಸರನ್ನು ನೋಡಿ ದಿಗಿಲುಬಿದ್ದೆ. ನಮ್ಮ ಹೆಂಗಸರು ಅವರಿಗೆ ಸಹಜವಾದ ನಡೆನುಡಿಗಳನ್ನು ಬಿಡದೆ ಇರಲಿ. ಅವರ ನವುರಾದ ಹಾವಭಾವಗಳಿಂದ ನಮ್ಮ ಬಳಲಿದ ಚಿತ್ತವನ್ನು ಆನಂದಗೊಳಿಸಲಿ. ನಮ್ಮೆಲ್ಲ ದುಃಖಗಳನ್ನು ಪರಿಹರಿಸುವ ದೇವತೆಗಳಾಗಿ ಉಳಿಯಲಿ. ಮನೆಯೇ ಅವರಿಗೆ ರಾಜ್ಯವಾಗಲಿ. ಅವರಿಗೆ ಅಲ್ಲಿ ಪಟ್ಟ ಕಟ್ಟೋಣ. ಅವರು ನಮ್ಮ ಮನೆಯ, ನಮ್ಮ ಮನಸಿನ ಇವೆರಡರ ರಾಣಿಗಳಾಗಲಿ. ಅವರಿಗಾಗಿ ಎಲ್ಲವನ್ನೂ ತ್ಯಾಗಮಾಡೋಣ. ಹಿಂದೂ ಸ್ತ್ರೀತ್ವದ ಸೌಂದರ್ಯವೆ ! ಶೀಲವೆ ! ಅವರ ಉಡುಪು ಏನು ಮನೋಹರವಾದುದು ! ಅವರ ಸೌಂದರ್ಯ ಎಷ್ಟು ಮೋಹಕವಾದುದು ! ಅವರ ಶೀಲ ಎಷ್ಟು ಅಮೂಲ್ಯವಾದುದು ! ಈ ಜಗತ್ತಿನಲ್ಲಿ ಇವು ಬೇರೆಲ್ಲಿಯೂ

ದೊರೆಯಲಾರವು. ನಮ್ಮ ಹೆಂಗಸರನ್ನು ಹೊರಕ್ಕೆ ಎಳೆದು, ಎಲ್ಲರೆದುರಿಗೆ ಕೈಕಾಲುಕಟುವ, ಮುತ್ತಿಡುವ, ಕಂಡು ಕೇಳಿದವರೆಲ್ಲರೂ ಬಂದು ವೈತಾಕ ಲಾಡಿಸುವ ಕಾಲ ಬಂತೊ ನಾವು ಹಾಳಾದಂತೆಯೇ ಸರಿ.

೧೬.

[ನಮ್ಮ ಅಜ್ಜಿ ತಿಮ್ಮಮ್ಮನಿಗೆ ಪಚ್ಚಮ್ಮ ಎಂಬ ಹೆಸರಿನ ತಂಗಿ ಇದ್ದರು. ಶ್ರೀ ಕೆ. ಹೆಚ್. ರಾಮಯ್ಯನವರ ತಂದೆ ಶ್ರೀ ಹನುಮಯ್ಯ ಮೇಸ್ತ್ರಿಗಳ ಮೊದಲನೆಯ ಹೆಂಡತಿ ಈಕೆ. ಇವರಿಗೆ ಇಬ್ಬರು ಹೆಣ್ಣುಮಕ್ಕಳಿದ್ದರು. ಒಬ್ಬರ ಹೆಸರು ಲಕ್ಷ್ಮಮ್ಮ, ಇನ್ನೊಬ್ಬರ ಹೆಸರು ಕೆಂಪಮ್ಮ. ಕೆಂಪಮ್ಮ ನಮ್ಮ ಮನೆಯಲ್ಲೇ ಮನೆಯವರಲ್ಲೊಬ್ಬರಾಗಿ ಬೆಳೆದರೆಂದು ನಾನು ಕೇಳಿದ್ದೇನೆ. ತಂದೆಗೆ ಕೆಂಪಮ್ಮನಲ್ಲಿ ವಿಶೇಷವಾದ ಅಕ್ಕರೆ ಇತ್ತು. ತಂದೆ ಇಂಗ್ಲೆಂಡಿಗೆ ಹೋಗಿದ್ದಾಗ ತಂದೆಗೆ ಇಷ್ಟವಿಲ್ಲದ ಒಂದು ಕಡೆಗೆ ಕೆಂಪಮ್ಮನನ್ನು ಕೊಟ್ಟು ಮದುವೆಯಾಗಿ ಹೋಯಿತು. ಈ ಸಂದರ್ಭದಲ್ಲಿ ತಂದೆ ಬರೆದ ಎರಡು ಕಾಗದಗಳು ದೊರೆತಿವೆ. ತಂದೆಯ ಮನಸಿನ ಭಾವನೆಗಳನ್ನು ಇವು ಸೊಗಸಾಗಿ ಚಿತ್ರಿಸುವುದರಿಂದ ಅವುಗಳನ್ನು ಕಾಣಿಸಿದ್ದೇನೆ.]

ಪ್ರಿಯ ರಾಮು,

ಕೆಂಪಮ್ಮ ನಾನು ಅವಳ ಮದುವೆಯ ಸಮಯದಲ್ಲಿ ಇರಲಿಲ್ಲವೆಂದು ದುಃಖಿಸಿ ಕಾಗದ ಬರೆದಿದ್ದಾಳೆ. ನಡೆದ ಎಲ್ಲ ಸಂಗತಿಗಳನ್ನೂ ನನ್ನ ಮನಸಿನಲ್ಲಿ ಚಿತ್ರಿಸಿಕೊಂಡಿದ್ದೇನೆ. ನನ್ನ ಕಣ್ಣೀರಿಂದಲೆ ಧಾರೆ ಎರೆದಿದ್ದೇನೆ. ಇನ್ನು ನಮ್ಮನ್ನು ಮರೆತು ಕೈಹಿಡಿದ ಗಂಡನನ್ನ ಸುಖದಲ್ಲಿ ದುಃಖದಲ್ಲಿ ಅನುಸರಿಸಿ, ತನ್ನ ಮುಂದೆ ಸೀತಾ, ಸಾವಿತ್ರಿ, ದಮಯಂತಿ, ದ್ರೌಪದಿ ಮುಂತಾದ ಆದರ್ಶ ಸ್ತ್ರೀಯರ ಉದಾಹರಣೆಯನ್ನಿಟ್ಟುಕೊಂಡು ಬಾಳು ಎಂದು ಕಾಗದ ಬರೆದಿದ್ದೇನೆ. ನಮ್ಮ ಮನೆಯಲ್ಲಿ ಇನ್ನು ಆಕೆಯನ್ನು ಕಾಣಲಾರೆ ಎನ್ನುವ ಯೋಚನೆಯೇ ಹೆಚ್ಚಾಗಿ ನಾನು ಹೆಂಗಸಿನಂತೆ ಅತ್ತು ಕಾಗದ ಬರೆದೆ. ಆಕೆ ಎಲ್ಲೇ ಇರಲಿ ಕಾಗದ ತಲಪುವಂತೆ ಮಾಡು. ನಿನಗೆ

ಕಾಗದ ನೋಡಬೇಕೆಂದು ಇಷ್ಟವಿದ್ದರೆ ನೋಡು. ನಮ್ಮ ಹೆಂಗಸರು ಮದುವೆಯಾಗುವಾಗ ತಮಗೆ ಏನೂ ತಿಳಿಯದ, ಕಂಡು ಕೇಳಿಲ್ಲದ, ಗುಣ ಚರ್ಯೆ ಒಂದೂ ತಿಳಿಯದ, ನಾವು ಚುನಾಯಿಸುವ ಗಂಡನೊಬ್ಬನನ್ನು ಪ್ರೀತಿಸ ಬೇಕಾಗುತ್ತದೆ. ನಮ್ಮಮೇಲೆ ನಂಬಿಕೆಯನ್ನಿಟ್ಟು ಆಕೆ ಮದುವೆಯಾಗು ತ್ತಾಳೆ; ಗಂಡನನ್ನು ಮೆಚ್ಚಿ ಅಲ್ಲ. ನಮ್ಮಮೇಲಿನ ಅತಿ ನಂಬಿಕೆಯಿಂದ ತನ್ನ ಮುಗ್ಧಜೀವನವನ್ನು ಗಂಡನ ವಶಕ್ಕೆ ಒಪ್ಪಿಸಿಬಿಡುತ್ತಾಳೆ. ಎಂಥ ಜವಾಬುದಾರಿ ನಮ್ಮದು. ನಮ್ಮಲ್ಲಿ ಎಷ್ಟು ಅಗಾಧ ನಂಬಿಕೆ ಆಕೆಗೆ. ದೇವರೆ! ಅಂಥ ಪರಿಶುದ್ಧವಾದ ನಂಬಿಕೆಯನ್ನು ನಾವು ದುರುಪಯೋಗ ಪಡಿಸದಂತಾಗಲಿ.

*   *   *

ಸೌ. ಕೆಂಪಮ್ಮನಿಗೆ ತನ್ನ ಹೊಸ ದಾಂಪತ್ಯ ಜೀವನದಲ್ಲಿ ಸುಖ ಸಂತೋಷಗಳು ಒದಗಲಿ ಎಂದು ಮನಮುಟ್ಟಿ ಹಾರೈಸುತ್ತೇನೆ. ನಾನು ಯಾವರೀತಿ ಆಕೆಯನ್ನು ನೋಡಿಕೊಳ್ಳಬೇಕೆಂದಿದ್ದೆನೋ ಆರೀತಿ ಆಗದುದ ಕ್ಕಾಗಿ ನನ್ನ ಮನಸು ಅತಿಯಾಗಿ ಕೊರೆಯುತ್ತದೆ ಆಕೆ ನನ್ನ ಪಾಲಿಗೆ ದೇವತೆಯಂತೆ ಬಂದು, ತನ್ನ ಸುಖವನ್ನು ಗಮನಿಸದೆ ಉಪಚಾರಮಾಡಿ ದಳು. ಅದನ್ನು ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತೇನೆ. ಅವಳು ನಮ್ಮ ಮನೆಯನ್ನು ಬಿಟ್ಟುಹೋದಳೆಂದು ತಿಳಿದು ನನ್ನ ಕಣ್ಣಲ್ಲಿ ನೀರು ತುಂಬು ತ್ತದೆ; ಹೃದಯ ಹೊಡೆದುಕೊಳ್ಳುತ್ತದೆ. ಮನುಷ್ಯಮಾತ್ರದವನು ಕೊಡ ಲಾಗದಂಥ ಸಮಾಧಾನವನ್ನೂ ಆನಂದವನ್ನೂ ದೇವರು ಆಕೆಗೆ ಕೊಡಲಿ. ಆಕೆಯ ಬಾಳು ಬೆಳಕಾಗಲಿ, ಸುಖದಿಂದ ಕೂಡಿರಲಿ ಎಂದು ದೀನನಾಗಿ ಪ್ರಾರ್ಥಿಸುತ್ತೇನೆ.

## ೧೭.

ಪ್ರಸಿದ್ಧನಾದ ಇಂಗ್ಲೀಷ್ ಕವಿ ಥಾಮಸ್‌ಗ್ರೇ ಯಾವ ಚರ್ಚ್ ಆವ ರಣದಲ್ಲಿ ತನ್ನ ಮೋಹಕ ಗೀತವನ್ನು ಬರೆದನೋ ಆ ಚರ್ಚಿಗೆ ಹೋಗಿ ಬಂದ ಚಿತ್ರ ಒಂದು ಪತ್ರದಲ್ಲಿದೆ ಇಂಗ್ಲೀಷಿನಲ್ಲಿ ಸೊಗಸಾಗಿ ವರ್ಣಿತ

ವಾಗಿರುವ ಈ ಚಿತ್ರವನ್ನು ಅನುವಾದಮಾಡದೆ ಮೂಲದಲ್ಲಿರುವ ಹಾಗೆಯೇ ಕಾಣಿಸಿದ್ದೇನೆ.

Yesterday I went with a party of Indian students, about 30 in number on an outing arranged by the National Indian Association.........On reaching Slough we found a huge motor capable of seating all of us was ready at the station awaiting our arrival. As soon as we seated ourselves we were driven away to Stoke Poges church two and half miles distant.

The church is rendered memorable as the place in whose churchyard Thomas Gray wrote his famous "Elegy in a Counry Churchyard." So, on reaching the church we were conducted by a lady into the interior and shown the ancient relics of the past—the old fashioned walls, an ageworn coffin, curious black images of bygone days and the so called 'bycicle window' named from a naked figure bestriding a curions resemblance of a bicycle going so far back as 1643. Looking over all these things with interest and purchasing a small pamphlet which gives a concise account of the history of the church we came out. There we were shown the old ewe tree in the churchyard—the tree grown grey with age and still betokening the solemn aspect among the crumbling tombstones clustering

round it—where the poet Gray used to sit contemplating the silence of the dead and, being inspired by the solemn grandeur and majestic awe of the surrounding graveyard, penned those immortal and soul stirring lines. All of us squatted ourselves in the green sward and a lady of our party standing beneath the very ewe tree of dear memories gave us a short biographical sketch of the poet Gray and then read to us in feeling, elevating and thrilling tones the lines of the Elegy.

Beneath those rugged elms, that ewe tree's shade,
Where heaves the turf in many a mouldering heap,
Each in his narrow cell for ever laid,
The rude forefathers of the hamlet sleep.

The whole scene was borne in upon us with a vivid flash and as she proceeded along reading those entrancing lines, I felt drops of tears rolling down my eyes. Oh! it was a most thrilling and solemn and grave affair, and I can never forget the noble and inspiring feelings that animated me at the time. The whole atmosphere held a "solemn stillness" and the murmur of the trees around, the silence of the voiceless graves, the majesty of the soul elevating church and the pregnant meaning of those noble lines all combined to carry away my soul to the boundless beyond and inspired me with edifying and ennobling thoughts of great import. We

then proceeded to inspect the actual tomb of the poet. He is lying by the side of his mother for whom he had a passionate love and an inscription on a slab attached to a window of the church opposite the tomb tells us that the great poet's remains are interred there. It was significant that no epitaph was actually carved on his tomb itself. We next admired the beauty of the surrounding country, the lovely green meadows, the clustering elm and beech trees beyond, the beautiful and enchanting flowers in the beds alongside the paths, the neatly trimmed edges and pretty looking chimney-topped cottages—the whole scene being lovely in the extreme. We passed out and about 100 yards away we saw a marble monument—a sacrophagus on a square basement—erected to the memory of Gray with the stanzas from his elegy inscribed on the four sides of the square. We then purchased a few picture postcards of the church, entered the motor and were driven away.

೧೮.

ಶಾಮುಗೌಡರಗೆ—

ನಾನು ರಾಮಯ್ಯನಿಗೆ ಪ್ರತಿ ವಾರ ಕಾಗದ ಬರೆಯುತ್ತಿದೇನೆ. ನನ್ನ ಈ ಕಾಗದಗಳು ಕೈತಪ್ಪಕೂಡದು. ನನ್ನ ಮನಸಿನಲ್ಲಿ ಹುಟ್ಟಿಕೊಂಡ ಭಾವನೆಗಳು ಕನಸುಗಳು ಎಲ್ಲವೂ ಈ ಕಾಗದಗಳಲ್ಲಿ ಅಡಗಿವೆ. ಇವುಗಳನ್ನು

ಬಿಸುಡದೆ ಜೋಪಾನವಾಗಿಡುವಂತೆ ರಾಮಯ್ಯನಿಗೆ ಹೇಳಿ. ನಿಮಗೆ ಬರೆಯುವ ಕಾಗದಗಳೂ ಅದೇರೀತಿ....ನಾನು ಬರೆಯುವುದು ಒಳ್ಳೆಯದೋ ಕೆಟ್ಟದೊ ಆದರೆ ನಾನು ಬರೆಯುವ ಕಾಲದಲ್ಲಿ ನನ್ನ ಮನಸು ಯಾವರೀತಿ ಇತ್ತೆನ್ನುವುದನ್ನು ಈ ಪತ್ರಗಳಲ್ಲಿ ಕಾಣುವೆನಾದ್ದರಿಂದ, ಇವುಗಳು ನನ್ನ ಹಿಂದಿನ ಜೀವದ ನೆನಪನ್ನು ತಂದುಕೊಟ್ಟಾವು.

ನನ್ನ ತಂದೆಯನ್ನೇನಾದರೂ ನೋಡುವ ಅವಕಾಶ ದೊರೆತರೆ ಅವರಿಗೆ ನನ್ನ ಸೈಕಲನ್ನು ಎಷ್ಟು ಹೆಚ್ಚು ಬೆಲೆಗೆ ಹೋಗುತ್ತದೊ ಅಷ್ಟಕ್ಕೆ ಮಾರಿ ಬಿಡುವಂತೆ ಹೇಳಿ. ಬಾಕಿ ಇರುವ ಮನೆಬಾಡಿಗೆಯನ್ನು ಬರುವ ಹಣ ದಿಂದ ತೀರಿಸಿಬಿಡಲಿ. ನಿಮ್ಮ ಮನೆಗೆ ಅವರು ಆಗಾಗ ಬರುವರೆಂದು ನಂಬಿದ್ದೇನೆ. ಅವರೇನಾದರೂ ಖಿನ್ನರಾಗಿದ್ದರೆ ಅವರ ಮನಸನ್ನು ಉಲ್ಲಾಸ ಗೊಳಿಸಿ ಕಳಿಸಿ.

ರಾಮಯ್ಯ ಎಂಥ ಒಳ್ಳೆಯ ಮನುಷ್ಯ. ಆತನಲ್ಲಿ ಏನೇ ಕುಂದುಗೆಳಿರಲಿ ನಾನು ಪ್ರೀತಿಸುತ್ತೇನೆ. His very failings seem to invest him with so much charm. ಆತನಿಗೆ ಹೃದಯ ಬಿಚ್ಚಿ ಎಲ್ಲ ಹೇಳಬೇಕೆಂದರೆ ನನಗೆ ಬಲು ಇಷ್ಟ. ಯಾವಾಗ ನನ್ನ ಮನವೆಲ್ಲ ಯೋಚನೆಗಳು ತುಂಬುವವೋ ತಕ್ಷಣವೆ ರಾಮಯ್ಯನಿಗೆ ಕಾಗದವನ್ನು ಬರೆದು ಹಾಕಿಬಿಡುತ್ತೇನೆ. ಆಮೇಲೆ ಮನಸು ಎಷ್ಟೊ ಹಗುರವಾಗುತ್ತದೆ. ನನ್ನನ್ನು ಸಂಪೂರ್ಣವಾಗಿ ಅರ್ಥಮಾಡಿಕೊಂಡಿರುವನು ಅವನೊಬ್ಬನೆ.

* * *

ಪ್ರಿಯ ರಾಮು

ನಾನು ಸ್ವಂತವಾದ ಡಯರಿ ಯಾವುದನ್ನೂ ಇಡಲಾರೆ. ಸ್ವಂತದ್ದಾಗಿ ಬರೆದಿಡುವಂಥದೇನೂ ಇಲ್ಲ. ನನ್ನ ತಲೆ ಯಾವಾಗ ತುಂಬಿರುತ್ತದೆಯೋ ಆಗ ಬರೆಯಬೇಕೆನ್ನುವ ಅಭಿಲಾಷೆ ಬಂದೇ ಬರುತ್ತದೆ. ಆದರೆ ನನ್ನ ಸ್ವಂತ ಸಂತೋಷಕ್ಕಾಗಿ ಬರೆಯಲು ನನ್ನ ಮನಸು ಒಪ್ಪುವುದಿಲ್ಲ. 'ನನ್ನ ಅಭಿಪ್ರಾಯಗಳಲ್ಲಿ ಭಾಗಿಯಾಗುವಂಥವನಿಗೆ ಬರೆಯಬೇಕೆಂದೇ ನನ್ನ ಇಷ್ಟ.

ಆದರಿಂದಲೇ ನಿನಗೆ ಬರೆಯಲು ನನಗೆ ತೀರಸಂತೋಷ....ನನಗೆ ತೋರಿದು ದೆಲ್ಲವನ್ನೂ ನಿನಗೆ ಯಾವರೀತಿಯಲ್ಲಾದರೂ ಬರೆಯಬೇಕು ಎನ್ನುವ ನಿರ್ಧಾರಕ್ಕೆ ಬಂದಿದ್ದೇನೆ. ಇವುಗಳನ್ನು ನೀನು ತಾಳ್ಮೆಯಿಂದ ನೋಡಬೇಕು. ತಪ್ಪಿದ್ದರೆ ನನ್ನ ತಪ್ಪನ್ನು ತಿದ್ದಿಕೊಡಬೇಕು.........

ಇಲ್ಲಿ ಆಕ್ಸ್‌ಫರ್ಡ್ ಅಥವಾ ಕೇಂಬ್ರಿಜ್‌ನಲ್ಲಿ ಬಿ. ಎ. ಡಿಗ್ರಿ ಪಡೆಯುವು ದೇನೊ ಸುಲಭ, ಆದರೆ term ಹಾಕುವುದಕ್ಕೆ ನನಗೆ ಕಾಲವಿಲ್ಲ. ಸದ್ಯದಲ್ಲಿ ನಾನೇನೂ ಮಾಡಲಾರೆ. ಇನ್ನು ಸ್ವಲ್ಪ ಕಾಲ ತಡೆದು ಹೆಚ್ಚಿನ ಜ್ಞಾನವನ್ನು ಅನುಭವವನ್ನು ಸಂಪಾದಿಸಿಕೊಳ್ಳಬೇಕೆಂದಿದ್ದೇನೆ. ನಮ್ಮ ಜನಕ್ಕೆ ಯಾವುದು ಉಪಯೋಗವಾಗಬಹುದೊ ಅಂಥದೆಲ್ಲವನ್ನು ನಾನು ನೋಡಿ ತಿಳಿದುಕೊಳ್ಳು ತ್ತೇನೆ. ಆದರಲ್ಲಿ ಸಂದೇಹವಿಟ್ಟುಕೊಳ್ಳಬೇಡ.

• • •

ಹದಿನಾಲ್ಕು ಪುಟದ ಬರವಣಿಗೆಯನ್ನು ಕಳುಹಿಸಿಕೊಟ್ಟಿದ್ದೇನೆ ನೋಡು, ಎಲ್ಲ ವಿಷಯಗಳ ಮೇಲೆ ಈರೀತಿ ಅತಿಯಾಗಿ ಬರೆಯುವ ಚಟ ನನಗಿದೆ. ಆದರೆ ನನ್ನ ನರಗಳು ಬಲವಿಲ್ಲದವು. ಅವುಗಳ ಮೇಲೆ ಪರಿ ಣಾಮ ಬಹಳ. ಇಲ್ಲಿ ಯಾವಾಗ ನೋಡಿದರೂ ಅವಸರ, ಅತಿಯಾದ ಗಲಾಟೆ ಮನಸಿಗೆ ಶಾಂತಿ ಇಲ್ಲ. ಬೆಳಿಗ್ಗೆ ಐದು ಗಂಟೆಯಿಂದ ಹಿಡಿದು ರಾತ್ರಿ ಎರಡು ಗಂಟೆಯವರೆಗೂ ಟ್ರಾಮುಗಳು, ಇಂಜಿನುಗಳು, ಮೋಟಾರು ಗಳು, ಬಸ್ಸುಗಳು ಒಂದೇ ಸಮನೆ ನುಗ್ಗುತ್ತಿರುತ್ತವೆ. ರಾಮ ರಾಮ! ಏನು ಹುಚ್ಚುವೇಗ, ಗಲಾಟೆ, ಅವಸರ! ನನಗಂತೂ ಇದನ್ನು ತಡೆಯು ವುದು ಅಸಾಧ್ಯ. ಬೆಳಿಗ್ಗೆ ರೈಲಿನಲ್ಲಿ ಕೆಲಸಕ್ಕೆ ಹೋಗುತ್ತೇನೆ. ನಮ್ಮ ಕೆಲ ಸದ ಮನೆ ಇರುವುದು ಆರುಮೈಲಿ ದೂರದಲ್ಲಿ. ಹಿಂದಿರುಗುವಾಗಲೂ ರೈಲಿನಲ್ಲೆ ಬರುತ್ತೇನೆ. ನೋಟನೋಡಬೇಕೆಂದು ಹೋಗಬೇಕಾದರೂ ಇಂಥದೇ ಹುಚ್ಚುವೇಗದಿಂದ ಹೋಗುವ ವಾಹನ ಒಂದರಲ್ಲಿ ಹೋಗ ಬೇಕಾಗುತ್ತದೆ. ಮನೆಗೆ ಬರುವಾಗ ತೀರ ಸುಸ್ತಾಗಿ ಬಿಡುತ್ತೇನೆ. ಆದರೆ ವಿಶ್ರಾಂತಿ ಮಾತ್ರ ತೆಗೆದುಕೊಳ್ಳಲಾರೆ. ತಲೆ ತುಂಬ ಹತ್ತಾರು ತರದ ಯೋಚನೆ ಸುತ್ತು ಹಾಕುತಿರುತ್ತವೆ. ಎಷ್ಟೊಂದು ನೋಡಿರುತ್ತೇನೆ.

ಎಷ್ಟೊಂದು ತಿಳಿದಿರುತ್ತೇನೆ, ಎಷ್ಟೊಂದು ವಿಚಾರಮಾಡುವುದು ಇರುತ್ತದೆ, ಮತ್ತೆ ಬರೆಯುವುದು ಕೂಡ ಎಷ್ಟೊಂದು ಇರುತ್ತದೆ. ಯೋಚನೆಗಳು ಸರಸರನೆ ಒಂದರಹಿಂದೊಂದು ಬಂದು ಸರಿಯುತಿರುತ್ತವೆ. ಬರವಣಿಗೆ ಅದರ ಸಮಕ್ಕೆ ಹೆಜ್ಜೆ ಹಾಕದು. ಮನಸಿನಮೇಲೆ ಭಾರ ಹೆಚ್ಚು. ಅದರಿಂದಲೇ ನಾನು ನರಳುತ್ತಿದೇನೆ.

ಲಂಡನಿನಲ್ಲಿ ನಾನು ನೋಡಿರುವ ಸ್ಥಳಗಳು, ರೈಲುಪ್ರಯಾಣ, ನನ್ನ ಅನುಭವಗಳು ಎಲ್ಲವನ್ನೂ ನಿನಗೆ ಬರೆಯುಬೇಕೆಂದು ಇಷ್ಟ. ನನಗೆ ವೇಳೆ ಇಲ್ಲ. I am weary, restless and quite done up. I feel I could grasp the whole world in one grasp. I feel I had the power to visualize everything out here for the gaze of the people of India. Oh ! this foreign travel sets your brain whirling, gives you no calmness and steadiness. There is too much to think and grasp for a poor mind like mine. I see how little India is understood here and I almost burst with dreams to let these people know something of the glories of Indian civilization.

೧೯.

If I were Ramiah possessing as he does many fine qualities I should at once purchase a motor car, fill it up with Sangha literature and have a spin round Mysore visiting villages and preaching to the people from the platform of the motor car. I should combine business with pleasure and enjoy the fine, fresh bracing morning air of the country,

take immense delights in the chirrups and songs of the birds, drink in with avidity the glorious beauties of nature, enjoy the scenes of forest and town and be all the better, all the nobler, all the wiser for it. I should rouse the people to their duties, should kindle their innate nobility, stir them to the sense of their responsibility and pass a thrill of pulsating life through the whole community......................

He must move in high society always, never mingle and keep undue company with men whose mental equipment ill fits them to be his associates. He must discuss the future of the Sangha with the members, rouse them and infuse them with energy and enthusiasm. He must travel in India, visit prominent institutions, speak to prominent people and always be associated with ennobling influence. It is no good to simply soar high in uplifting meditation at home and then go and mingle with ordinary commonplace people in the world outside, thus neglecting the greatest and the highest work on hand. He must give up playful habits, become more sedate and grave and inspire respect and reverence. He must always be occupied with deep problems as to the future of the association and try to arrange for their solution. He knows all this

and yet he acts as one who does not know. His malady is incurable. That is the more pitiable part of it.

ನಾವು ವಿದ್ಯಾವಂತರಾದವರು ಎಚ್ಚರಿತ್ತುಕೊಳ್ಳಬೇಕು. ನಾವು ಸರಕಾರದ ನೌಕರರಾದರೇನಂತೆ: ಜನಪ್ರಿಯವಾದಂಥ ಭಾಷಣಗಳನ್ನು ಕೊಟ್ಟರೆ, ವ್ಯಾಪಾರದ ಉಪಯೋಗ, ಏರೋಪ್ಲೇನುಗಳ ಹುಟ್ಟು, ಬೆಳೆವಣಿಗೆ, ಅನ್ಯದೇಶಗಳ ಚರಿತ್ರೆ, ಅವುಗಳ ಬೆಳವಣಿಗೆ, ಕೈಗಾರಿಕೆಗಳು ಈ ವಿಷಯಗಳಮೇಲೆ ಉಪನ್ಯಾಸ ಕೊಟ್ಟರೆ ಸರಕಾರವೇನು ನಮ್ಮನ್ನು ನೇಣುಹಾಕುತ್ತದೆಯೆ? ಸ್ಥಳದ ಪತ್ರಿಕೆಗಳಲ್ಲಿ ಉಪಯುಕ್ತವಾದ ಲೇಖನಗಳನ್ನು ಬರೆದರೆ, ಬರೆಯಬೇಡಿ ಎಂದು ಸರಕಾರ ತಡೆಯುತ್ತದೆಯೆ? ರಾತ್ರಿ ಶಾಲೆಯಲ್ಲಿ ಪಾಠ ಹೇಳುವುದು, ಬಡವರ ಸಹಾಯಾರ್ಥವಾಗಿ ಧರ್ಮಕಾರ್ಯ ಏರ್ಪಾಡುಮಾಡುವುದು, ಜನರ ಸಲುವಾಗಿ ಇರುವ ಸಂಸ್ಥೆಗಳಲ್ಲಿ ದುಡಿಯುವುದು ಇಂಥ ಸೇವಾಕಾರ್ಯಗಳನ್ನು ಮಾಡತೊಡಗಿದರೆ, ಕೂಡದು ಎಂದು ಸರಕಾರ ನಿಷೇಧಿಸುತ್ತದೆಯೆ? ಇಂಥ ಕೆಲಸಗಳನ್ನು ಎಷ್ಟು ಜನ ನಾವು ಮಾಡುತ್ತಿದೇವೆ. ಇಂಥ ಕೆಲಸಗಳಿಂದ ಎಷ್ಟು ಹೆಚ್ಚು ಸೌಖ್ಯವನ್ನು ಜನರಿಗೆ ಒದಗಿಸಿಕೊಡಬಲ್ಲೆವೊ, ಅಷ್ಟು ಹೆಚ್ಚು ಅಭಿವೃದ್ಧಿಹೊಂದುತ್ತದೆ ನಮ್ಮ ದೇಶ. ಯಾವವರೆಗೆ ವಿದ್ಯಾವಂತರುಗಳಾದ ನಾವು ಏನುಮಾಡಬೇಕೊ ಅದನ್ನು ಮಾಡುವುದಿಲ್ಲವೋ, ಅಲ್ಲಿಯವರೆಗೆ ತಿಳಿವಿಲ್ಲದ ಅಸಂಖ್ಯ ಜನರನ್ನು ಅಂದು ಪ್ರಯೋಜನವೇನು? ಆ ನೆವಮಾಡಿಕೊಂಡು ತಟಸ್ಥವಾಗಿದ್ದರೆ ಉಪಯೋಗವೇನು?

ನಾವು ಒಕ್ಕಲಿಗರು. ಮರಗೆಲಸ ಒಕ್ಕಲಿಗರ ಕಸಬು. ನವೀನವಾದ ವಿಧಾನಗಳನ್ನು ಬಳಸಿಕೊಂಡು ಆಧುನಿಕ ರೀತಿಯಲ್ಲಿ ಮರಗೆಲಸ ಮಾಡಬಲ್ಲ ಒಬ್ಬನನ್ನು ನೀನು ಕಂಡುಹಿಡಿಯಬಲ್ಲೆಯೊ ಇಲ್ಲವೊ? ನಾನು ಸಂಘಕ್ಕೆ ಹೋಗಿಬರುತ್ತ ದಾರಿಯಲ್ಲಿ ಕೆಂಗೇರಿ ಪೋಲೀಸ್ ಸ್ಟೇಷನಿನ ಹತ್ತಿರ ಮರದ ಡಿಪೋಗಳ ಮುಂದೆಯೇ ದಿನವೂ ಹಾದುಹೋಗುತಿದ್ದೆ. ಅಲ್ಲಿ ಜನ ಮರ ಕುಯ್ಯುವುದನ್ನು ನೋಡುತಿದ್ದೆ. ದೊಡ್ಡದೊಡ್ಡ ದಿಮ್ಮಿ

ಗಳನ್ನು ಒಬ್ಬ ಮೇಲೆ ನಿಂತು ಒಬ್ಬ ಕೆಳಗೆ ನಿಂತು ಇಬ್ಬರು ಶ್ರಮಪಟ್ಟು ಕುಯ್ಯುತ್ತಿರುವುದನ್ನು ನೋಡುತ್ತಿದ್ದೆ. ಇವರು ಏಕೆ ಒಂದು ಯಂತ್ರದ ಸಹಾಯದಿಂದ ಮರ ಕುಯ್ದು, ಹಳ್ಳ ತೋಡುವುದನ್ನೂ ಬೆವರು ಸುರಿಸು ವುದನ್ನೂ ನಿಲ್ಲಿಸಬಾರದು. ಮರಕೆಲಸವನ್ನು ಕೂಡ ಸಂತೋಷವಾಗಿ ಗೆಲುವಿನಿಂದ ಮಾಡಲು ಅನುಕೂಲಿಸುವ ಎಷ್ಟೊ ಯಂತ್ರಸಾಧನಗಳಿವೆ. ಬುದ್ಧಿವಂತನಾದ ಒಬ್ಬನು ನವೀನವಿಧಾನಗಳನ್ನು ಏಕೆ ಬಳಕೆಗೆ ತಂದು ಒಂದು ಕಾರ್ಖಾನೆಯನ್ನು ನಡೆಸಬಾರದು! ಇಲ್ಲಿ ಯಂತ್ರಗಳು ಕೆಲಸಮಾಡು ವುದನ್ನು ನೋಡಿದಾಗ ನನಗೆ ಈ ಯೋಚನೆ ತೋಳೆಯಿತು. ನೋಡಿದಾ ಗೆಲ್ಲ ಇದೇ ಯೋಚನೆ ಹೊಳೆಯುತ್ತದೆ. ಯೋಚನೆ ಹೊಳೆದ ಮಾತ್ರ ದಿಂದ ಅದನ್ನು ಮಾಡಿದಂತಾಗಲಿಲ್ಲ ನಿಜ. ಆದರೆ ನನ್ನ ಈ ಯೋಚನೆ ಯನ್ನು ಮಿಕ್ಕವರಾದರೂ ಕಾರ್ಯರೂಪಕ್ಕೆ ತಂದಾರೊ ಏನೊ? ಮಿಷನರಿಗಳು ಬುದ್ಧಿವಂತರು. Salvation Army ಯವರು ಇನ್ನೂ ಬುದ್ಧಿವಂತರು. ಇವರುಗಳು ದೊಡ್ಡ ಮರಗೆಲಸದ ಕಾರ್ಖಾನೆಗಳನ್ನು ಇಂಡಿಯಾದಲ್ಲಿ ಇಟ್ಟಿ ದಾರಂತೆ. ಸಂಘ ಕೂಡ ಒಂದು ಮಾದರಿಯ ಮರಗೆಲಸದ ಕಾರ್ಖಾನೆ ಯನ್ನು ಸ್ಥಾಪಿಸಿ, ಈ ಮೂಲಕ ಒಕ್ಕಲಿಗರಿಗೆ ಸಹಾಯಮಾಡಬಹುದು. ಸರಕಾರವೇ ಸ್ಥಾಪಿಸಿದರೆ ಇನ್ನೂ ಅನುಕೂಲ. ಆದರೆ ಜನರೇ ಒಟ್ಟುಸೇರಿ ಮೊದಲುಮಾಡುವುದೇ ನನಗೆ ಹೆಚ್ಚು ಇಷ್ಟ. ಇದೆಲ್ಲ ಜನದ ಕೆಲಸ; ಸರಕಾರದ್ದಲ್ಲ. ಆದರೆ ನಮ್ಮ ಜನ ಹಳೆಯ ಕಂದಾಚಾರದವರು. ಒಂದು ಇಂಚು ಕೂಡ ಮುಂದೆ ಹೆಜ್ಜೆ ಇಡಲಾರರು. ಇನ್ನು ನಮ್ಮ ಸರಕಾರವೊ 'ಜನ ಮುಂದೆ ಹೆಜ್ಜೆ ಇಡಲಿ, ನಾವೂ ಹೆಜ್ಜೆ ಇಡುತೇವೆ' ಎನ್ನುವ ಸರಕಾರ!

## ೨೦.

ರಾಮು —

ನಿನ್ನ ಕಾಗದ ಬಂತು. ನಾನು ನಿನ್ನನ್ನು ಸೋಲಿಸಿದೇನೆಂದು ಹೇಳು ತ್ತೀಯೆ. ಸೋತು ಹೋದೆನಲ್ಲ ಎಂದು ಆತಂಕಪಡುತ್ತಿರುವ ನಿನ್ನ ಮನಸು ಸೋಮಾರಿಯಾಗಿರುವ ನಿನ್ನನ್ನು ಹೊಡೆದೆಬ್ಬಿಸಿ ಕಾರ್ಯರಂಗಕ್ಕಿಳಿಯುವಂತೆ

ಮಾಡಿದರೆ ನಾನು ಸೋಲಿಸಿದುದು ವ್ಯರ್ಥವಾಗುವುದಿಲ್ಲ. " ಎಲ್ಲ ವಿಷಯದಲ್ಲೂ ನನಗಿಂತ ಕಡಿಮೆಯುವನಾದ ಇವನೇ ನನ್ನನ್ನು ಸೋಲಿಸಿದನಲ್ಲ; ಬಹುವಿಧದಲ್ಲಿ ಇವನಿಗಿಂತ ಎಷ್ಟೋ ಉತ್ತಮನಾದ ನಾನು ಇವನಲ್ಲಿ ಸೋಲು ಒಪ್ಪಿಕೊಳ್ಳಬೇಕೆ? ನಾನೂ ನನ್ನ ಜೀವಾಳ ತೋರಿಸಿ ಇವನನ್ನು ಸೋಲಿಸುತ್ತೇನೆ " ಎಂದು ನೀನು ಅಂದುಕೊಳ್ಳುವಂತಾಗಬೇಕು. ಹೀಗೆ ಮಾಡು. ನಾನು ಬೇಡಿಕೊಳ್ಳುತ್ತೇನೆ. ಕೆಲಸಮಾಡಲು ಮೊದಲು ಮಾಡು. ಸಂಘದ ಒಳ ಆಡಳಿತವನ್ನು ನೆಟ್ಟಗೆ ಮಾಡು. ಮನುಷ್ಯನಾಗು. ಸಂಘದ ಲೆಕ್ಕವನ್ನೆಲ್ಲ ನಿನ್ನ ಮಾವನಿಗೆ ಒಪ್ಪಿಸು. ಲೆಕ್ಕವನ್ನು ಮಾತ್ರ ಸಂದೇಹದಿಂದ ದೂರವಾಗಿರಿಸು. ಸಂಘದ ಉದ್ದೇಶದಲ್ಲಿ ಯಾರ ದಾಕ್ಷಿಣ್ಯವೂ ಬೇಡ. ಎಲ್ಲಿ ದೃಢವಾದ ಚಿತ್ತ ಬೇಕೊ ಅಲ್ಲಿ ದೃಢ ಮನಸಿನಿಂದ ಕೆಲಸಮಾಡು.

ಇಲ್ಲಿಯು ಜನ ತಮ್ಮ ನೌಕಾಬಲದ ಮಹಾವೀರನಾದ ನೆಲ್ಸನ್ನನಿಗೆ ಮಹಾವೈಭವದಿಂದ ಮರ್ಯಾದೆಮಾಡಿದುದನ್ನು ಮೂಕನಾಗಿ ನಿಂತು ನೋಡಿದೆ. ಈ ದೃಶ್ಯ ನನ್ನ ಮನಸನ್ನು ಅತಿಯಾಗಿ ಕಲಕಿತು. ಇಲ್ಲಿನ ಮುಖಂಡರುಗಳು 'ನಿಮ್ಮ ನಾಡನ್ನು ಕಾಯುವುದಕ್ಕೆ ಜನಗಳನ್ನು ಕೊಡಿ' ಎಂದು ಮಾಡುವ ಉಜ್ವಲ ಉಪನ್ಯಾಸಗಳನ್ನು ಕೇಳಿ ನಾನು ಮೆಚ್ಚಿದೆ. ನನ್ನ ಮನಸಿನಮೇಲೆ ಇದರಿಂದಾದ ಪರಿಣಾಮವನ್ನು ಮರೆಯಲಾರೆ. ನೆಲ್ಸನ್ ಹೇಳಿದ 'England expects every man to do his duty' ಎಂದು. ನಾನೂ 'Sangha expects you to do your duty' ಎಂದು ನಿನಗೆ ಒಪ್ಪಿಸಲೆ?

* * *

Your kind letter of the 7th instant depicting your ideal to hand. I have never doubted in the sublimity of your ideals or in your disinterestedness to attain them. But what astonishes me is that man should have wonderful powers and yet he should be unable to exercise them to the fullest

extent. Every man has got some defect or other which puts into shade all his capabilities and throw him to the background. In the measure a man is able to conquer his weakness and disclose his true spirit he attains to the full measure of his abilities and does something which enables him to leave the world in a better state than when he found it. And so long this holds true, it behoves all of us to try and overcome our defects to fulfil our noblest purposes in life.

We think so nobly, we feel so sublimely and we dream so beautifully thatwhen we come to the doors of action we are at a standstill. We receive so many checks. Our weak nature tries to assert itself, the weak natures of other people come in the way and our progress is hampered. It is only the indomitable will and the lofty, abiding and sincere conviction that are able to force their way through disinterestedness supplies the momentum for this attack, and the purely unselfish surely carry the day.

And the unselfish have not a very hard task to do as is commonly supposed. It is daily borne in upon me that a purer a man tries to be, the easier his progress seems. He feels he is helped in his undertakings and whatever he tries to do

receives an easy welcome. Providence comes to the help of such a man, and the man feels that he is not at all the doer.

ಈ ದಿನ ನನ್ನ ಮನಸೆಲ್ಲ ಈ ದೇಶದ ಜನರ ದಿನದಿನದ ದುಡಿತವೆ ಆಕ್ರಮಿಸಿಕೊಂಡಿದೆ. ಕೆಲಸಗಾರರ ಮಧ್ಯವೆ ನಾನಿದೇನೆ. ಅದೊಂದು ಅನುಕೂಲ. ಈ ಕೆಲಸಗಾರರೇ ಈ ದೇಶದ ಜೀವನಾಡಿ. ಹಗಲು ರಾತ್ರಿ ಒಂದೇ ಸಮನೆ ದುಡಿಯುತ್ತಾರೆ. ಅವರ ಕಷ್ಟದ ಕಡೆ ಅವರು ಯೋಚನೆ ಇಟ್ಟುಕೊಂಡಂತೆಯೇ ಕಾಣುವುದಿಲ್ಲ ; ಎಲ್ಲ ಸುಲಭವಾಗಿ ತೆಗೆದುಕೊಳ್ಳುತ್ತಾರೆ. ಸಾಯುಬಡಿಯುವಂಥ ಈ ಕೆಲಸವನ್ನು ಕೂಡ ಇಷ್ಟು ಸುಲಭದಲ್ಲಿ ಈ ಜನ ತೆಗೆದುಕೊಳ್ಳುವುದನ್ನು ಕಂಡು ನನಗೆ ತೀರ ಆಶ್ಚರ್ಯ. ಎಂಟು ಗಂಟೆ ಬೆಳಿಗ್ಗೆಯಿಂದ ಹಿಡಿದು ರಾತ್ರಿ ಹನ್ನೆರಡು ಗಂಟೆಯುವರೆಗೆ ಕೆಲಸಮಾಡುವುದು ಇಲ್ಲಿಯ ಕೆಲಸಗಾರನಿಗೆ ತೀರ ಅಲ್ಪವಾಗಿ ಕಾಣುತ್ತದೆ. ಮಾರನೆಯ ದಿನ ಬೆಳಿಗ್ಗೆ ಎಂಟು ಗಂಟೆಗೆ ಮತ್ತೆ ಕೆಲಸದ ಸ್ಥಳದಲ್ಲಿ ಇದ್ದೇ ಇರುತ್ತಾನೆ. ಮನೆಗೆ ಬರುತ್ತ ಈ ರೀತಿ ಯೋಚಿಸಿಕೊಂಡು ಬಂದೆ— "ಹೌದು, ಏಷ್ಯಾ ಆಫ್ರಿಕ ನಿದ್ದೆ ಮಾಡುತ್ತಿವೆ. ಯೂರೋಪು ಮಾತ್ರ ಜೀವಂತವಾಗಿದೆ. ಈ ಜನ ಈ ರೀತಿ ಕೆಲಸಮಾಡದೆ ಇದ್ದಿದ್ದರೆ, ನಾವು ನಮ್ಮ ದೇಶದಲ್ಲಿ ಸೊಗಸಾದ ಸೂಟುಗಳನ್ನು ಕಾಲರುಗಳನ್ನು ಹಾಕಿಕೊಂಡು, ಮೋಟಾರು ಕಾರುಗಳಲ್ಲಿ ಈಗಿನಂತೆ ಮೆರೆಯುವುದು ಸಾಧ್ಯವಾಗುತಿತ್ತೆ. We are drones living on the busy bees of these people. ನಾವೂ ಕೆಲಸಮಾಡಕೂಡದೇಕೆ ? ಎಲ್ಲವನ್ನು ಈ ಜನ ಮಾಡುತ್ತಿದ್ದಾರೆ. ಏನನ್ನೂ ನಾವು ಮಾಡುತ್ತಿಲ್ಲ."

ರಾಮು, ಈ ವಿಷಯವಾಗಿ ನೀನೂ ಯೋಚನೆಮಾಡು.

* * *

'ಸಾಧ್ವಿ'ಯಲ್ಲಿ ನಿನ್ನಮೇಲೆ ಬಂದ ಟೀಕೆಯನ್ನು ನೋಡಿದೆ. ಬ್ರಾಹ್ಮಣರ ಬುದ್ಧಿ ಎರಡೂ ಕಡೆ ಹರಿತವಾದ ಕತ್ತಿ ಇದ್ದಂತೆ. ಅದು ಎರಡು ಕಡೆಯೂ ಕತ್ತರಿಸುತ್ತದೆ. ಅವರ ಬುದ್ಧಿ ಎರಡೂ ಕಡೆ ತಿದ್ದಿ ಹರಿತವಾಗಿದೆ.

ಅವರಿಗೆ ಅತಿಬುದ್ಧಿಯಾಗಿ ಅದರಿಂದ ಏನೂ ಉಪಯೋಗವಿಲ್ಲದೆ ಹೋಗಿದೆ ಬರಿಯ ಬುದ್ಧಿ ಪ್ರತಿಭೆಯ ಮುಂದೆ, ಉನ್ನತವಾದ ಆದರ್ಶಗಳ ಮುಂದೆ ಹಿಂದೆ ಬೀಳುತ್ತದೆ. ನಾವೋ ಕನಸು ಕಾಣುತಿರುವವರು, ಗುರಿಯೊಂದ ನ್ನಿಟ್ಟುಕೊಂಡು ಅದನ್ನು ಸಾಧಿಸಲು ಪ್ರಯತ್ನಿಸುತ್ತಿರುವವರು. ಅವರಿಗೆ ಅಂಥ ಗುರಿಯಿಲ್ಲ. ಅಂಥ ಭಾವನೆಯಿಲ್ಲ. ಅಂಥ ಸಂಕಲ್ಪವಿಲ್ಲ. ಪ್ರಾಯಶಃ ಸ್ವಪ್ರತಿಷ್ಠೆ ಬಿಟ್ಟು ಬೇರೇನೂ ಇಲ್ಲ. ಅದರಿಂದೇನು ಪ್ರಯೋಜನ? ಅವರ ಗುರಿ ಇಷ್ಟು ಕೆಳವುಟ್ಟದ್ದಾದ್ದರಿಂದ ಅವರು ಕೆಳಗೆ ಬೀಳಲೇ ಬೇಕು. ನಾವು ನಮ್ಮ ಜನ ಬುದ್ಧಿವಂತರಾಗಲಿ, ಇರುವ ನಮ್ಮ ಕೈಗಾರಿಕೆಗಳು ಏಳಿಗೆ ಹೊಂದಲಿ, ಹೊಸವು ಹುಟ್ಟಿಕೊಳ್ಳಲಿ, ಸರ್ವರಿಗೂ ಒಳ್ಳೆಯದಾಗಲಿ ಎಂದು ಹಾರೈಸುತ್ತಿದೇವೆ. ಅವರು ನಮ್ಮಲ್ಲಿ ಹುಳುಕು ಕಂಡುಹಿಡಿಯಲು ಕೆದಕು ತ್ತಿದಾರೆ. ಬೇರೇನೂ ಮಾಡುತಿಲ್ಲ. ನಾವು ಸರಿಯಾದ ದಾರಿಯಲ್ಲಿ ನಡೆಯು ತ್ತಿದೇವೆ. ಅದೇ ನಮಗೆ ಸಾಕು

೨೧

ನಮ್ಮ ದೇಶದಲ್ಲಿ ಬದುಕಿ ಬಾಳಿ, ಮುಂದಿನ ತಲೆಮಾರಿನವರಿಗೆ ಅಮೂಲ್ಯವಾದ ಭಾವನೆಗಳನ್ನೂ, ಆದರ್ಶಗಳನ್ನೂ ತೋರಿಸಿಟ್ಟು ಹೋದ ಮಹಾ ವ್ಯಕ್ತಿಗಳ ಸ್ಮಾರಕಗಳು ಯಾವುವೂ ದೇಶದೊಳಗೆ ಇಲ್ಲದಿರುವುದನ್ನು ನೋಡಿ ನನಗೆ ಬಹಳ ದುಃಖವಾಗುತ್ತದೆ. ಷೇಕ್ಸ್‌ಪಿಯರ್, ಮಿಲ್ಟನ್, ವರ್ಡ್ಸ್‌ವರ್ತ್, ಗ್ರೇ, ಡಿಕನ್ಸ್, ಥ್ಯಾಕರಿ, ನೆಲ್ಸನ್, ವಿಲಿಂಗ್ಟನ್ ಮೊದ ಲಾದವರು ನಮಗೆ ಕಾಳಿದಾಸ, ಭವಭೂತಿ, ಬಾಣ, ಭರ್ತೃಹರಿ, ಶಂಕರಾ ಚಾರ್ಯ, ಚಾಣಕ್ಯ ಇವರುಗಳಿಗಿಂತ ಹೆಚ್ಚು ನಿಜವಾಗಿ ತೋರುತ್ತಾರೆ. ನನ್ನ ಮನಸಿನಮೇಲೆ ಅತಿಯಾಗಿ ಪರಿಣಾಮ ಉಂಟುಮಾಡಿರುವಂಥವನ ಸ್ಮಾರಕವನ್ನು ನೋಡಿದರೆ ನನ್ನ ಕಣ್ಣಲ್ಲಿ ನೀರು ತುಂಬುತ್ತದೆ. ನಮ್ಮ ದೇಶದಲ್ಲಿಯೂ ಮಹಾವ್ಯಕ್ತಿಗಳು ಇರಲಿಲ್ಲವೆ. ಈ ಹೊರಗಿನವರಿಗಿಂತ ಹೆಚ್ಚಾಗಿ ನಮ್ಮ ಮನಸನ್ನು ಆಕರ್ಷಿಸುವವರು ಇರಲಿಲ್ಲವೆ, ಇದ್ದರು. ಆದರೆ ಅವರಿಗಾಗಿ ನಾವು ಮರುಗಲಾರೆವು. ನಮ್ಮ ಭಾವನೆಗಳನ್ನು

ಮೇಲೆತ್ತಿ, ಆ ಹಿರಿಯವ್ಯಕ್ತಿಗಳಿದ್ದ ಕಾಲದ ಕಡೆ ನಮ್ಮ ಮನಸು ಹರಿಯು ವಂತೆ ಮಾಡಿ, ಅವರೊಂದಿಗೆ ಒಂದಾಗುವ ಅನುಭವವನ್ನು ನಮ್ಮಲ್ಲಿ ಉಂಟುಮಾಡುವುದಕ್ಕೆ ಯಾವ ಒಂದು ಚಿಹ್ನೆಯೂ ಇಲ್ಲದೆ ಹೋಗಿದೆ. ನಮ್ಮಲ್ಲಿಯೂ ವೆಸ್ಟ್‌ಮಿನಿಸ್ಟರ್ ಅಬ್ಬೆಯಂಥ ಒಂದು ಸ್ಥಳ ಇದ್ದಿದ್ದರೆ, ಏನು ಸೊಗಸಾಗಿರುತಿತ್ತು. ಎಂಥ ಆದರ್ಶ ಎಂಥ ತಿಳಿವು ಕೊಡಬಲ್ಲುದು. ಎಂಥ ದೇಶಭಕ್ತಿಯನ್ನು ಹುಟ್ಟಿಸಬಲ್ಲುದು. ನಮ್ಮ ಪುರಾತನರ ಮಹಿಮೆ ಯನ್ನು ಕಂಡು, ಅವರ ಚರಿತ್ರೆಯನ್ನು ತಿಳಿದು, ಎಂಥ ಕೆಚ್ಚು ಉದಿಸಿರ ಲಾರದು. ಮುಂದೆ ಬರಲಿರುವ ಜನತೆಗೆ ಎಂಥ ಉದಾತ್ತವಾದ ಆದರ್ಶ ವಾಗಿ ಉಳಿದಿರಲಾರದು. ಇಂಗ್ಲೀಷು ಜನ ತಮ್ಮ ಇಂಗ್ಲೆಂಡೆಂದರೆ ಹೆಮ್ಮೆ ಪಡುತ್ತಾರೆ. ನಾಡಿಗಾಗಿಯೇ ಬದುಕಿ ದುಡಿಯುತ್ತಾರೆ. ಏಕೆಂದರೆ ಅವರ ಊರು ಊರಿನ ಸಂದುಗೊಂದುಗಳಲ್ಲಿಯೂ, ಆತ್ಮತ್ಯಾಗಮಾಡಿ ಕೆಲಸ ಮಾಡಿದ ಅನೇಕ ಹಿರಿಯ ವ್ಯಕ್ತಿಗಳ ಸ್ಮಾರಕಗಳು ಅವರ ಕಣ್ಣೆದುರಿಗೆ ನಿಂತು ಸದಾ ಅವರ ಧರ್ಮ, ಅವರ ದೇಶದ ಹಿರಿಮೆಯನ್ನ ಜ್ಞಾಪಕಮಾಡಿ ಕೊಡುತಿರುತ್ತವೆ. ನಮ್ಮ ಜನಗಳ ಮೇಲೆ ಇದೇಬಗೆಯ ಪರಿಣಾಮ ವನ್ನುಂಟುಮಾಡತಕ್ಕ ಸ್ಮಾರಕಗಳು ಎಲ್ಲಿಯೂ ಇಲ್ಲ. ನಮ್ಮದೇಶ ಹಿಂದಿನ ಕಾಲದಲ್ಲಿ ಬಹು ವೈಭವದಿಂದ ಬಾಳಿತು ಎಂದು ಹೇಳಿಕೊಡುತ್ತಾರೆ. ಅದ ಕ್ಕಾಗಿ ಹೆಮ್ಮೆಪಡಿ ಎಂದು ಹೇಳುತ್ತಾರೆ. ಆದರೆ ನಮ್ಮ ಕಣ್ಣಿಗೆ ಹಬ್ಬ ವನ್ನುಂಟುಮಾಡಿ, ನಮ್ಮನ್ನು ರೋಮಾಂಚಗೊಳಿಸುವ ಆಗಿನ ಕಾಲದ ಒಂದು ಚಿಹ್ನೆಯಾದರೂ ಇದೆಯೆ. ಆ ವೈಭವವೇನಿದ್ದರೂ ಕೆಲವು ಜನರ ತಲೆಯಲ್ಲಿ ಮಾತ್ರ ಉಳಿದುಕೊಂಡಿವೆ. ಈಚೆಗೆ ಕೆಲವು ಪುಸ್ತಕಗಳಲ್ಲಿ ಅಡಕವಾಗಿದೆ. ಎಲ್ಲೊ ವಿದ್ಯಾವಂತರು ಸ್ವಲ್ಪಜನ ಮಾತ್ರ ತಿಳಯಬಲ್ಲರು, ತಿಳಿದು ಆನಂದಪಡಬಲ್ಲರು. ಈ ಪುಣ್ಯಭೂಮಿಯ ಉದ್ದಗಲವೂ ಜನ ತಮ್ಮ ದೇಶವನ್ನು ಕಂಡು ಹೆಮ್ಮೆ ಗೌರವಪಟ್ಟುಕೊಳ್ಳುವಂತಾಗಬೇಕಾದರೆ ಎಲ್ಲೆಲ್ಲೂ ಸ್ಮಾರಕಗಳನ್ನು ಕಟ್ಟುತ್ತ ಹೋಗಬೇಕು. ನಮ್ಮದೇಶದ ಪುಣ್ಯ ನದಿಗಳು, ದೇವಸ್ಥಾನಗಳು, ಹಿಂದಿನ ಕಾಲದ ದಿವ್ಯವಾದ ಧಾರ್ಮಿಕ ಜೀವನದ ನೆನಪು ಉಂಟುಮಾಡಿಕೊಡುತ್ತವೆ. ಅದೇರೀತಿ ಚಾರಿತ್ರಿಕವಾದ

ಸ್ಮಾರಕಗಳೂ ಇದ್ದುವಾದರೆ ಜನರಲ್ಲಿ ಕೆಚ್ಚನ್ನೂ ಅಭಿಮಾನವನ್ನೂ ಹುಟ್ಟಿಸಲು ವಿಶೇಷವಾಗಿ ಸಹಾಯವಾಗುತ್ತದೆ.

* * *

Our work in the world where we live and actually see things with our own eyes would be productive of immense good to our fellow beings and our country if performed in an altruistic spirit. You can see even before you die the wondrous work you have wrought. But on the other hand if you are engaged in speculating the future possibilities of life, the fatalistic theories of karma, the bliss of realising a heaven and the consolation and happiness of a mere dream, of a mere conviction or of a mere vision—of what use is it to the people among whom you live. How have you helped them to rise upwards in the scale of civilization? It may be such as age may give soul-stirring discourses and obtain a following and eventually be recognised as a God as Ramakrishna, Swami Vivekananda, and others have unfortunately been: but what is the use? You multiply the Gods and the schemes of worship, that is all. People do not become any the better for it. Though hinduism has persisted through centuries the people themselves have never been wiser and better for it. They are still dragging on the same inert mass in the ebb and flow of the inundating flood

of speculation, dream and conflicting philosophy. The doctrine of karma has been grossly misunderstood with the result that fatalism has taken a firm hold on the people's belief robbing them of all their individual efforts and enterprise. Worship of any and everybody as Gods has prevented the people from deriving any benefit whatsoever from the beautiful lessons taught by old masters............ We must cease to worship men as Gods. We must work on this earth, do our best to better the lot of our fellow beings, to leave the world, the country or the place we were born, where we lived and worked, a little better than when we found it, as to win for it a place of esteem and honour in the eyes of the world and certainly in the eyes of God.

............I am sure India will not be better in the scale of nations while her sons are still souring high on mental aeroplanes.

* * *

The Indian students in so far as I have come across them, have one and all of them cherish a love for India. They peep behind the scene here; they are not glamoured by the apparent wealth and bustle of the civilization of the west ; they have sense enough to reason and think out. The madrasee seems to be the worst of the lot. He is

either bent on idle gossip and pleasure or is a book-worm. He seems to have lost his head and heart. The Punjabi, the Bengalee, and the Bombayette preserve the grace of his nationality and thinks and acts as behoves an Indian.

ನಮ್ಮ ಅನುಭವ ಮಿಕ್ಕವರಿಗೂ ದೊರೆತು, ಏಳಿಗೆಗೆ ಸಹಾಯವಾಗಲೆಂದು ನಮ್ಮನ್ನು ವಿದೇಶಗಳಿಗೆ ಕಳುಹಿಸಿದ್ದಾರೆ. ಅಲ್ಲವೆ? ಅದರಿಂದಲೆ ಕೇಳಿದವರಿಗೆಲ್ಲ ನಾನು ಬರೆಯುತ್ತ ಹೋಗುತ್ತೇನೆ. ರಾಶಿಗಟ್ಟಲೆ ಬರೆಯುತ್ತಿದೇನೆ. ಶನಿವಾರ ಅರ್ಧರಜ. ಅದನ್ನು ನೋಟ ನೋಡುವುದಕ್ಕೆ ಮೀಸಲಾಗಿಟ್ಟಿದೇನೆ. ಭಾನುವಾರವೆಲ್ಲ ಬರೆಯುವುದರಲ್ಲಿ ತೊಡಗುತ್ತೇನೆ. ರಾತ್ರಿವೇಳೆಯಂತೂ ನನ್ನದೆ ಅಲ್ಲವೆ. ಅಲ್ಲದೆ ದಿನದಿನ ಎಷ್ಟು ಹೊಸ ವಿಷಯ ತಿಳಿಯುತ್ತೇನೆ! ಇಷ್ಟೆಲ್ಲವನ್ನೂ ತಿಳಿದಮೇಲೆ ಅದನ್ನು ಹೊರಗೆಡಹುವವರೆಗೂ ಮನಸಿಗೆ ನೆಮ್ಮದಿಯಿಲ್ಲ. ಅಲ್ಲದೆ ಎಷ್ಟೊಂದು ಜನ ವಿಷಯ ತಿಳಿಯಬೇಕೆಂದು ಕುತೂಹಲಿಗಳಾಗಿದಾರೆ. ಅವರಿಗೆ ನಿರಾಸೆ ಉಂಟುಮಾಡುವುದು ತೀರ ಅನ್ಯಾಯ. ನಾನು ಎಲ್ಲಿಯವರೆಗೆ ಗಟ್ಟಿಮುಟ್ಟಾಗಿರುತ್ತೇನೊ ಅಲ್ಲಿಯವರೆಗೆ ಕೆಲಸಮಾಡುತ್ತ ಹೋಗುತ್ತೇನೆ.

* * *

ವೈಸರಾಯಿನ ಮೇಲೆ ಬಾಂಬು ಹಾಕಿದ ಪ್ರಕರಣವನ್ನು ಓದಿ ಬೆಚ್ಚಿಬೀಳುವಂತಾಯಿತು. ಕಾಡುಕಿಚ್ಚಿನಂತೆ ಸುದ್ದಿ ಇಲ್ಲಿ ಹಬ್ಬಿತು. ಎಲ್ಲೆಲ್ಲೂ ಈ ವಿಸ್ಮಯಕಾರಕವಾದ ಸುದ್ದಿಯನ್ನು ದೊಡ್ಡ ಕಾಗದಗಳಮೇಲೆ ಅಚ್ಚುಹಾಕಿ ಬೀದಿಬೀದಿಯಲ್ಲಿ ಪ್ರಚಾರಮಾಡಿದರು. ಪಿತೂರಿ, ರಾಜದ್ರೋಹ, ಕ್ರಾಂತಿ, ಎಲ್ಲವನ್ನೂ ಆಗಲೆ ನಮ್ಮ ದೇಶದವರ ಮೇಲೆ ಹೊರೆಸುತ್ತಿದ್ದಾರೆ. ಹೇಗೆ ಇದಕ್ಕೆ ಕಾರಣ ಕಂಡುಹಿಡಿಯುವುದೊ ನನಗೆ ತಿಳಿಯದು,

ಈ ವೈಸರಾಯಿಗಳು, ಇತರ ಸರಕಾರದ ನೌಕರರುಗಳು ತಮಗೆ ದೊರೆತಿರುವ ಅಧಿಕಾರವನ್ನು ತೀರ ಅತಿಗೆ ತೆಗೆದುಕೊಂಡು ಹೋಗುತ್ತಿದ್ದಾ

ರೆಂದು ನನಗೆ ಅನಿಸುತ್ತದೆ. ತಾವೆ ಚಕ್ರವರ್ತಿಗಳೊ ಎನ್ನುವ ಹಾಗೆ ಮೆರೆದುಹೋಗುತ್ತಾರೆ. ದರಬಾರುಗಳನ್ನು ನಡೆಸುವುದು, ಆನೆಯಮೇಲೆ ಅಂಬಾರಿಯಲ್ಲಿ ಹೊರಟು ಹಿಂದಿನಿಂದ ಪ್ರಖ್ಯಾತರಾದ ರಾಜಮಹಾರಾಜರುಗಳನ್ನು ಕಡೆಗಣಿಸಿ ಮೆರೆಯುವುದು, ರಾಜರುಗಳ ಮಕ್ಕಳನ್ನು ತನ್ನ ಕಾವಲಿನವರನ್ನಾಗಿ ನೇಮಿಸಿಕೊಳ್ಳುವುದು, ಇದೆಲ್ಲ ತೀರ ಅತಿ. ಅದನ್ನು ಸಹಿಸಿಕೊಳ್ಳುವುದು ರಾಜರಿಗೂ ಆಗದು, ಜನಕ್ಕೂ ಆಗದು. ವೈಸರಾಯಿಗಳಾಗಿ ಬರುವ ಇವರೆಲ್ಲ ಬರಿಯ ಮನುಷ್ಯರು ಮಾತ್ರ. ಯಾವಾಗ ಅಧಿಕಾರ ಮುಗಿಯಿತೊ ಆಗ ಕೆಳಗೆ ಬೀಳುತಾರೆ. ಯಾರೂ ಅವರನ್ನು ಗಣನೆಗೆ ತಂದುಕೊಳ್ಳುವುದಿಲ್ಲ. ಇಂಥ ಮನುಷ್ಯರು ಚಕ್ರವರ್ತಿಗಳಂತೆ ಮೆರೆಯುವುದನ್ನು ನೋಡಿ ಜನರ ಮನಸಿನಲ್ಲಿ ತೀರ ಜುಗುಪ್ಸೆ, ಅಸಹನೆ ಹುಟ್ಟುತ್ತದೆ. ನನಗೇನೋ ಇದೇ ಈ ದುರಂತ ಪ್ರಕರಣಕ್ಕೆ ಕಾರಣ ಎನಿಸುತ್ತದೆ. ರಾಜನ ಮನೆತನದವರೇ ಯಾರಾದರೂ ಈ ದೇಶವನ್ನು ಆಳುತಿದ್ದರೆಂದಿಟ್ಟುಕೊ. ಆಗ ಈ ಅನಾಹುತ ನಡೆಯುತ್ತಿರಲಿಲ್ಲ........

ಲಾರ್ಡ್ ಹಾರ್ಡಿಂಜ್ ಏನಾದರೂ ಜನರೆಲ್ಲರ ಮುಂದೆ, ಆನೆಯ ಮೇಲೆ ಅಂಬಾರಿಯಲ್ಲಿ ಕುಳಿತು ರಾಜರುಗಳನ್ನು ತುಚ್ಛವಾಗಿ ಎಣಿಸಿ ಹೋಗದೆ ತನ್ನದೇ ಒಂದು ಗಾಡಿಯಲ್ಲಿ ಹೋಗಿದ್ದರೆ ಅವನಿಗೆ ಯಾವ ತೊಂದರೆಯೂ ಇರುತ್ತಿರಲಿಲ್ಲ. ಲಾರ್ಡ್ ಕರ್ಜನ್ ತೊಂದರೆಯ ಬೀಜ ಬಿತ್ತಿದ. ಅವನ ಮುಂದೆ ಬಂದವರು ಅದರ ಫಲವನ್ನು ಉಣ್ಣಬೇಕಾಗಿದೆ.

೨೨.

ಹೊಸ ವರ್ಷವನ್ನು "Life on Life's difficulties" ಎಂಬ ಪುಸ್ತಕದಿಂದ ಮೊದಲುಮಾಡಿದೆ. ಬಹಳ ಸೊಗಸಾದ ಪುಸ್ತಕ ಇದು. James Allen ನ ಕೃತಿಗಳಲ್ಲೆಲ್ಲ ಅತ್ಯುತ್ತಮವಾದುದು. ಅದನ್ನು ಮುಗಿಸಿದ ದಿವಸ ಅದೆಷ್ಟೋ ಆನಂದ ಅನುಭವಮಾಡಿದೆ. ಗೆಲುವು ಮನಸಿನಿಂದ ಮಲಗಲು ಹೋದೆ. ನನ್ನಲ್ಲಿ ಉಳಿದುಕೊಂಡಿದ್ದ ಕೆಟ್ಟ ಭಾವನೆಗಳನ್ನೆಲ್ಲ ಕೊಡವಿಬಿಟ್ಟಂತೆ ಅನುಭವವಾಯಿತು. ಈಗಿರುವಂತೆ ಯಾವಾಗಲೂ ಇಷ್ಟು

ಗೆಲವು ಮನಸಿನಿಂದ ನಾನಿರಲಿಲ್ಲ. ಈತ ದೊಡ್ಡ ಜ್ಞಾನಿ. ಜೀವನದ ಮೂಲತತ್ವಗಳನ್ನು ತಿಳಿಯಾಗಿ, ಸಂದೇಹಗಳನ್ನು ತಾನಾಗಿ ನಿವಾರಿಸುವ ದೃಢವಾದ ನಂಬಿಕೆಯಿಂದ ತಿಳಿಸುತ್ತಾರೆ. ಸತ್ಯಜೀವನದಲ್ಲಿ ಯಾವುದು ನಿಜವೋ, ಯಾವುದು ದೃಢವೋ ಅಂಥದರ ಎದುರು ತಂದು ನಮ್ಮನ್ನು ನಿಲ್ಲಿಸುತ್ತದೆ ಈತನ ಬೋಧೆ. ಎಲ್ಲಿಯೂ ತಡಕಾಡುವ ಗೋಜಿಲ್ಲ. ಸುಲಭವಾಗಿ ತಿಳಿಯುತ್ತದೆ........ಪ್ರಪಂಚದ ಎಲ್ಲ ಮತಗಳ ಬಾಗಿಲನ್ನು ತೆರೆದು, ಅವುಗಳೆಲ್ಲದರಲ್ಲೂ ಕಂಡುಬರುವ ಏಕತೆಯನ್ನು ತೋರಿಸುವ ಕೀಲಿ ಇವನ ಬೋಧೆ. ಯಾವ ಮತ ಅಥವಾ ಮತಾಚಾರಗಳೊಂದಿಗೆ ನಮಗೆ ಜಗಳವಿಲ್ಲವೆಂದು ತಿಳಿಯುತೇವೆ. In fact his teaching is the harbinger of peace to one's own soul, and he lives in harmony with all, loving all, quarelling with none, at peace with himself and with all the world.

So my friend, let us weed out all petty annoyances, worries and troubles from our hearts and without fear of any kind let us work with honest motives in this world where we are living, moving and having our being, perfectly satisfied that if we work with peace ourselves here, work now, work for the betterment of the people and we need not concern ourselves with working for salvation in the other world. Take care of the present and the future will take care of itself. Don't waste precious present. That is or ought to be our ideal.

ಆದಿನಾರಾಯಣನನ್ನು ಪಡೆದುದಕ್ಕೆ ನಿನ್ನನ್ನು ಅಭಿನಂದಿಸುತ್ತೇನೆ.... ಎಂಥ ಕುತೂಹಲ ಕೆರಳಿಸುವ ಮಕ್ಕಳು ನಿನ್ನವು. ಹೆಸರುಗಳು ಕೂಡ ಎಷ್ಟು ಸೊಗಸಾಗಿವೆ ! ನೆನಪುಮಾಡಿಕೊಳ್ಳುತೇನೆ. ಯಶೋಧರ (ಬುದ್ಧ

ದೇವನ ನೆನಪು ಕೊಡುತ್ತದೆ). ಮರು (flavour of philosophy) ವಿಶ್ವನಾಥ (ಕಾಶಿಯ ನೆನಪು) ಮೈತ್ರೇಯಿ (ವೇದಕಾಲದ ಸವಿ ನೆನಪು), ಆದಿನಾರಾಯಣ (ಆದಿಯಲ್ಲಿದ್ದ ನಾರಾಯಣ, ಎರಡನ್ನು ಕಂಡರಿಯದ ಏಕಮೇವಾದ್ವಿತೀಯ) ಮುಂದೆ ಹುಟ್ಟುವ ಮಗನಿಗೆ (ಮಗನೇ ಹುಟ್ಟುತಾನೆ ಅದು ಸಿದ್ಧ) James Allen ಎಂದು ಹೆಸರಿಡುತೀಯೆಂದು ನಂಬಿದೇನೆ. Dare it you will!

* * *

ಕೇಟರ್‌ಹಾಂ ಸೇನಿಟೋರಿಯುಮಿನಲ್ಲಿ ಒಂದು ದಿನವನ್ನು ಆನಂದ ದಿಂದ ಕಳೆದೆ. ಇದು ಬಹಳ ಸುಂದರವಾದ ಸ್ಥಳ. Good Health ಸಂಪಾದಕರಾದ Dr. Obsen ಅವರ ನೇತೃತ್ವದಲ್ಲಿ ನಡೆಯುತ್ತಿದೆ. ಈತ ಬಹು ಒಳ್ಳೆಯ ಮನುಷ್ಯರು. ಊಟಕ್ಕೆ ವಸತಿಗೆ ಎಲ್ಲ ಅನುಕೂಲ ವನ್ನು ಕಲ್ಪಿಸಿದ್ದಾರೆ. ಊಟವೆಲ್ಲ ಶಾಖಾಹಾರ. ಸುಲಭವಾದ ಚಿಕಿತ್ಸೆ, ಸುಲಭವಾದ ಆಹಾರ, ರಮ್ಯ ದೃಶ್ಯ, ಸೊಗಸಾದ ಮನೆ. ಕೇಟರ್‌ಹಾಂ ಲಂಡನಿಗೆ ಹದಿನೇಳು ಮೈಲಿ ಮಾತ್ರ ದೂರವಾಗಿದೆ. ವಾರದ ಕೊನೆಯಲ್ಲಿ ಬರುವ ರಜವನ್ನು ಕಳೆಯುವುದಕ್ಕೆ ಅಲ್ಲಿ ಹೋಗುತ್ತೇನೆ. ಇಂಥ ಮನೆ, James Allen ನಂಥ ಮನುಷ್ಯನ ಸಹವಾಸ, ಇವೆರಡೂ ಇರುವಾಗ ಈ ಭೂಲೋಕ ಕೂಡ ಸ್ವರ್ಗಕ್ಕೆ ಸಮಾನ.

## ಮಿ. ಏಟ್ಸ್‌ರವರಿಗೆ ಬರೆದ ಪತ್ರಗಳು

ಕಳೆದ ಪುಟಗಳಲ್ಲಿ ನಮ್ಮ ತಂದೆ ಲಂಡನಿನಿಂದ ಬರೆದ ಪತ್ರಗಳ ದೀರ್ಘ ಪರಿಚಯವನ್ನು ಮಾಡಿಕೊಟ್ಟಿದೇನೆ. ಮನಸಿನಮೇಲೆ ಪರಿಣಾಮ ವಾಗುವಂಥ ವಯಸ್ಸಿನಲ್ಲಿ ಬರೆದ ಈ ಕಾಗದಗಳು ತಮ್ಮದೇ ಆದ ಒಂದು ಸೊಗಸನ್ನು ಪಡೆದುಕೊಂಡಿವೆ. ವಿಚಾರ ಪ್ರಚೋದಕನಾಗಿವೆ. ಮೇಲೆ ಕೊಟ್ಟಿರುವ ಪತ್ರಗಳಲ್ಲಿ ಒಂದೆರಡು ವಿನಹ ಮಿಕ್ಕವೆಲ್ಲವೂ ಗೆಳೆಯರಾದ ಶ್ರೀ. ಕೆ. ಹೆಚ್. ರಾಮಯ್ಯನವರಿಗೆ ಬರೆದವು. 1913 ರ ಸುಮಾರಿಗೆ ರಾಮಯ್ಯನವರೂ ಇಂಗ್ಲೆಂಡಿಗೆ ಹೋದ ಕಾರಣ ಇವರಿಬ್ಬರ ನಡುವೆ ನಡೆಯುತಿದ್ದ ಪತ್ರವ್ಯವಹಾರ ಒಮ್ಮೆಗೆ ನಿಂತುಹೋಯಿತು. ಲಂಡನಿನಲ್ಲಿ ತಂದೆ ಇನ್ನೂ ಎರಡು ವರ್ಷಕಾಲ ಇದ್ದರು. ಆ ಕಾಲದಲ್ಲಿ ಯಾರಿಗೆ ಪತ್ರ ಬರೆಯುತ್ತಿದ್ದರೋ, ಆ ಪತ್ರಗಳು ಎಲ್ಲಿವೆಯೋ ತಿಳಿಯದು. ಮನೆಯ ವರಿಗೆ ಬರೆದ ಕ್ಷೇಮಸಮಾಚಾರದ ಪತ್ರಗಳಲ್ಲದೆ ಬೇರೆ ಯಾವುವೂ ನನಗೆ ದೊರೆತಿಲ್ಲ. 1914–1915 ರ ಕಾಲ ಯೂರೋಪಿನಲ್ಲಿ ಮೊದಲ ಮಹಾ ಯುದ್ಧ ಪ್ರಾರಂಭವಾದ ಕಾಲ. ಯುದ್ಧ ಮೊದಲಾದಾಗ ಅಲ್ಲಿನ ಜನ ಯಾವ ರೀತಿ ನಡೆದುಕೊಂಡರು, ಏನೇನು ಸಂಗತಿಗಳು ನಡೆದವು ಇವೆಲ್ಲವನ್ನು ರಾಮಯ್ಯನವರು ಇಂಗ್ಲೆಂಡಿಗೆ ಹೋಗದೆ ಇಲ್ಲಿಯೇ ಉಳಿದಿದ್ದರೆ ಅವರಿಗೆ ಬರೆದು ತಿಳಿಸುತಿದ್ದರೋ ಏನೊ. ಮನೆಗೆ ಮಾತ್ರ ಆ ಕಾಲದ ಸ್ಥಿತಿಗತಿ ಗಳನ್ನು ತೋರಿಸುವ ಅನೇಕ ಚಿತ್ರದ ಕಾರ್ಡುಗಳು ಬರುತಿದ್ದುವು. ಆ ಚಿತ್ರಗಳು, ಪತ್ರಿಕೆಗಳು ಹೇರಳವಾಗಿ ಈಗಲೂ ನಮ್ಮ ಮನೆಯಲ್ಲಿ ಉಳಿ ದಿವೆ. ಯಾವ ವರ್ಣನೆಯೂ ತಿಳಿಸದಷ್ಟು ಚೆನ್ನಾಗಿ ನಡೆದ ಸಂಗತಿಗಳನ್ನು ಚಿತ್ರಗಳೇ ತಿಳಿಸುತ್ತವೆ.

ಮನೆಯವರಿಗೆ, ರಾಮಯ್ಯ ಮತ್ತು ಶಾಮಗೌಡರಿಗೆ ಬರೆಯುತಿದ್ದುದೇ ಅಲ್ಲದೆ ತಮ್ಮ ಇಲಾಖೆಯ ಮುಖ್ಯರೂ ಹಿತಚಿಂತಕರೂ ಆದ ಏಟ್ಸ್‌ರವ ರಿಗೆ ತಂದೆ ತಾವು ದಿನ ದಿನ ಕಲಿತ ಸಂಗತಿಗಳ ವಿಷಯವಾಗಿ ಬರೆಯುತ್ತ ಹೋದರು. ಈ ಪತ್ರಗಳನ್ನು ಹಾಸ್ಯಪ್ರಕೃತಿಯವರಾದ ಏಟ್ಸ್‌ರವರು "Your Puttaiya's weekly came to hand yesterday"—

"Your weekly budget came safely to hand"—"I read your weekly lecture to Mrs. Yates" ಎಂದು ಸಂಬೋಧಿಸಿ ಕರೆಯುತ್ತಿದ್ದರು. ಏಟ್ಸ್‌ರವರಿಗೆ ಬರೆದ ಪತ್ರಗಳು ಯಾವುವೂ ನನಗೆ ದೊರೆತಿಲ್ಲ.......ಆದರೆ ತಂದೆ ಬರೆದ ಪತ್ರಗಳಿಗೆ ಮಾರುತ್ತರ ಬರೆದ ಏಟ್ಸ್‌ರವರ ಕಾಗದಗಳೆಲ್ಲ ಇವೆ. ಇವುಗಳಿಂದ ಅವರಿಬ್ಬರಲ್ಲಿ ನಡೆದ ಪತ್ರ ವ್ಯವಹಾರದ ಸ್ವಲ್ಪಮಟ್ಟಿನ ಪರಿಚಯವಾಗುತ್ತದೆ.

ತಂದೆಯಮೇಲೆ ಏಟ್ಸ್‌ರವರಿಗೆ ಅತಿಯಾದ ಅಭಿಮಾನವಿತ್ತೆಂದು ಕಾಣುತ್ತದೆ ಅವರು ಲಂಡನಿಗೆ ಹೋಗಿ ಪ್ರಿಂಟಿಂಗ್ ಶಾಲೆಯನ್ನು ಸೇರಿದ ಕೆಲವೇ ತಿಂಗಳಲ್ಲಿ My dear Puttaiya—I expect you to gain nothing less than a gold medal as a final wind up at the end of three years ಎಂದು ಬರೆದರು. ತಂದೆ ಕೂಡ ಏಟ್ಸ್‌ರವರ ಆಸೆ ನಿರಾಸೆಮಾಡಲಿಲ್ಲ. ಕೀರ್ತಿಗಳಿಸಿಕೊಂಡೇ ಬಂದರು.

ಲಂಡನಿಗೆ ಹೋಗಿ, ಅಲ್ಲಿನ ಕೆಲಸಕಾರ್ಯಗಳನ್ನು ನೋಡಿ, ಮುದ್ರಣ ಕಲೆಯ ವ್ಯಾಪ್ತಿಯನ್ನು ಕಂಡು, ನಮ್ಮ ಮೈಸೂರು ಸರಕಾರದ ಮುದ್ರಣ ಶಾಲೆಯನ್ನು ಇದೇ ರೀತಿ ಮಾಡಬೇಕು. ಹೊಸ ಯಂತ್ರಗಳನ್ನು ತರಿಸಬೇಕು. ಮೂರು ಬಣ್ಣದಲ್ಲಿ ಚಿತ್ರಗಳನ್ನು ಅಚ್ಚುಮಾಡುವುದಾಗಬೇಕು' ಎಂದು ಹುಮ್ಮಸಿನಿಂದ, ತಾರುಣ್ಯದ ಉತ್ಸಾಹದಿಂದ, ಏಟ್ಸ್‌ರವರಿಗೆ ಪತ್ರ ಬರೆಯುತ್ತಿದ್ದರು. ಇಲ್ಲಿನ ವಿದ್ಯಮಾನಗಳನ್ನು ಅರಿತವರೂ, ಅನುಭವಸ್ಥರೂ ಆದ ಏಟ್ಸ್‌ರವರು ಇವರ ಉತ್ಸಾಹ ಮೇರೆಮೀರದಂತೆ ನೋಡಿಕೊಂಡರು. ಒಂದು ಸಣ್ಣ ಯಂತ್ರವನ್ನ ತರಿಸುವುದಕ್ಕೆ, ಇದ್ದುದರಲ್ಲೆ ಸ್ವಲ್ಪ ಅನುಕೂಲ ಕಲ್ಪಿಸಿ ಮುದ್ರಣಶಾಲೆಯನ್ನು ಅಭಿವೃದ್ಧಿಸ್ಥಿತಿಗೆ ತರುವುದಕ್ಕೆ, ಸರಕಾರದೊಡನೆ ವರ್ಷಗಟ್ಟಲೆ ಹೋರಾಡಬೇಕೆನ್ನುವುದನ್ನು ಅವರು ಕಂಡಿದ್ದರು. ಒಂದು ಸಂದರ್ಭದಲ್ಲಿ—"I have agitated for this improvement for nine years. A simple calculation may enable you to predict how long before you will be able to take the next step forward. It is

a very trying ordeal to constantly have to contend with and against a host of assistant secretaries whenever anything is wanted." ಎಂದು ಬರೆದರು.

ಈ ಕಷ್ಟವನ್ನು ಬಲ್ಲವರಾದುದರಿಂದಲೇ, ಮುದ್ರಣಶಾಲೆಯನ್ನು ಇನ್ನಿಲ್ಲದಂತೆ ಅಭಿವೃದ್ಧಿಗೊಳಿಸುವೆನೆಂದು ತಂದೆ ಕಾಣುತ್ತಿದ್ದ ಕನಸು ಕನಸಾಗಿಯೆ ಉಳಿಯುವುದೆಂದು ಅವರು ಭಾವಿಸಿದರು :

I am afraid your picture of the immediate future of printing in Mysore was too rosy. It was at least in three colours, if not a many coloured litho, when it would have been more correct to have printed it in one colour, and that colour black, if black can be said to be a colour. Suggestions and propositions are made, but when it comes to the actual doing it is a very different matter and I question whether the many airy castles will ever find a solid earthly foundation, at least not in my time.

ಅವರು ಹೇಳಿದಂತೆಯೇ ಈ ಹೊಸ ಏರ್ಪಾಡು ಏಟ್ಸ್‌ರವರ ಕಾಲದಲ್ಲಿ ಆಗಲಿಲ್ಲ. ತಂದೆ ಅಧ್ಯಕ್ಷರಾದ ಕಾಲದಲ್ಲೂ ಆಗಲಿಲ್ಲ. 30 ವರ್ಷಗಳು ಕಳೆದುಹೋಗಿದ್ದರೂ ಈಗ ಕೂಡ ಮೂರು ಬಣ್ಣದಲ್ಲಿ ಅಚ್ಚುಮಾಡುವ ವಿಧಾನ ಸರಕಾರದ ಮುದ್ರಣಶಾಲೆಯಲ್ಲಿ ಇರುವಂತೆ ಕಾಣಲಿಲ್ಲ. ಅನುಭವಿಗಳಾದ ಏಟ್ಸ್‌ರವರ ಮಾತಿನ ಸತ್ಯ ಇದರಿಂದ ವ್ಯಕ್ತವಾಗುತ್ತದೆ.

ಇನ್ನೊಂದು ಪತ್ರದಲ್ಲಿ ತಂದೆ, ಮುದ್ರಣಶಾಲೆಯಲ್ಲಿ ಹಗಲಿನಿಂದ ರಾತ್ರಿಯವರೆಗೆ apprentice ಕೆಲಸಗಾರನಾಗಿ ದುಡಿಯುವ ದುಡಿತ ಕಂಡು ಬೇಸರಬಿದ್ದು ಕಾಗದ ಬರೆದಿದ್ದರೆಂದು ಕಾಣುತ್ತದೆ. ಇದಕ್ಕೆ ಏಟ್ಸ್‌ರವರು

ಹೇಳಿರುವ ಸಮಾಧಾನ ಸೊಗಸಾಗಿದೆ. Like a blacksmith's apprentice men and boys like the leaving off part best. ನೀನು ಹಾಗಾಗಬೇಡ. "You know the definition of a difficulty is something to be overcome." "Spell luck with an initial 'P' and all will be well in good time." ಪ್ರತಿ ಕಾಗದದಲ್ಲೂ ಒಂದಲ್ಲ ಒಂದು ಕಡೆ ಇನ್ನೇನು ನಿನ್ನ ಓದು ಮುಗಿಯಿತು, ಬಂದುಬಿಡುತೀಯೆ Next year you will be home again, how quickly the time passes ಎಂದು ಹಿಂದಕ್ಕೆ ಬರುವ ದಿನವನ್ನು ನೆನಪುಮಾಡಿಕೊಡುತ್ತ, ಬೇಸರ ನೀಗಿಸುತ್ತ ಹಿತವಚನ ನುಡಿಯುತ್ತಿದ್ದರು.

ಇನ್ನೊಂದು ಸಂದರ್ಭದಲ್ಲಿ ತಂದೆ ಏಟ್ಸ್‌ರವರು ಹೊಸದಾಗಿ ಮುದ್ರಿಸಿದ Stampಗಳನ್ನು ಟೀಕೆಮಾಡಿದರೆಂದು ತೋರುತ್ತದೆ. ಅದಕ್ಕೆ ಸಿಟ್ಟುಗೊಳ್ಳದೆ—why I like your crlticisms is because you not only point out weaknesses, but you point the way to something better ಎಂದು ತಂದೆ ಟೀಕೆಮಾಡುವ ವಿಷಯವಾಗಿ ಮೆಚ್ಚಿಕೆಯ ಮಾತು ಆಡಿದರು.

ಸರಕಾರದ ನೌಕರಿಗೆ ಸೇರಿಕೊಂಡಮೇಲೆ, ನೌಕರರು ಸರಿಯಾಗಿ ಕೆಲಸಮಾಡಲಿ ಮಾಡದೆ ಹೋಗಲಿ ಕೆಲಸದಿಂದ ತೆಗೆದುಹಾಕುವುದು ಕಷ್ಟ. ಸೋಮಾರಿಗಳಾಗಿ ನಿಂತುಬಿಡುತ್ತಾರೆ. ಈ ವಿಷಯವಾಗಿ ತಮ್ಮ ಸ್ವಂತ ಅನುಭವವನ್ನು ಸ್ಪಷ್ಟವಾಗಿ ವಿವರಿಸಿ ಏಟ್ಸ್‌ರವರು ಒಂದು ಕಡೆ ಹೇಳಿದ್ದಾರೆ. ಈಗಲೂ ಬಹುಮಟ್ಟಿಗೆ ಏಟ್ಸ್‌ರವರು ಹೇಳಿದುದು ಸತ್ಯವಾಗಿಯೇ ಇದೆ.

Another trouble I have is with the men, especially with the man on top. Not only is he not capable, but he does not try to be ..............This is one of the defects of Government service ; a man gets in and it is a job to get him out. It is a bad

system. In a private firm a man has to win his position and maintain it. Here neither the one nor the other is done. A man is the son of his father and there you are ! You know the american phrase 'firing out the fools.' That is clearing out the duffers. It is a pity that duffers should ever get in, and a greater pity that they should ever remain in, what say you.

ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ಆಗತಾನೆ ಮೈಸೂರು ದಿವಾನರಾಗಿ ಬಂದಿದ್ದರು. ಅವರ ಚಟುವಟಿಕೆ ಮುದ್ರಣಕಾರರಾದ ಶ್ರೀ. ಏಟ್ಸ್‌ರವರಿಗೆ ಯಾವರೀತಿ ಕಂಡಿತು ಎಂದು ತೋರಿಸುವ ಕೆಲವು ಮಾತು ಅವರ ಪತ್ರವೊಂದರಲ್ಲಿವೆ.

'The active Dewan is always providing new work for us, and is always impatient till he gets it. We are for ever breaking the sabbath to meet his requirements............

'The Dewan surely excels all his predicissors in his ability to do endless corrections in his proofs. It is only when time absolutely prevents him making any more he ceases.

ತಂದೆ ವ್ಯಾಸಂಗವನ್ನು ಮುಗಿಸಿಕೊಂಡು ಬೆಂಗಳೂರಿಗೆ ಹಿಂದಿರುಗುವವರೆಗೂ ಏಟ್ಸ್‌ರವರೊಡನೆ ಪತ್ರವ್ಯವಹಾರ ತಡೆಯಿಲ್ಲದೆ ಸಾಗಿತು. ಆ ವ್ಯವಹಾರದ ಸ್ವಲ್ಪ ಮಾತ್ರದ ಪರಿಚಯವನ್ನು ಮೇಲೆ ಮಾಡಿಕೊಟ್ಟಿದೇನೆ. ಏಟ್ಸ್‌ರವರ ವ್ಯಕ್ತಿತ್ವ ಇದರಿಂದ ಸ್ವಲ್ಪಮಟ್ಟಿಗಾದರೂ ತಿಳಿದೀತು.

## ಮನೆಯವರಿಗೆ ಬರೆದ ಪತ್ರಗಳು

ತಂದೆಯ ಈ ಕಾಲದ ಪತ್ರವ್ಯವಹಾರದ ಪರಿಚಯವನ್ನು ಮುಗಿಸುವ ಮೊದಲು, ಅವರು ಮನೆಯವರಿಗೆ, ಎಂದರೆ ವಿದ್ಯಾರ್ಥಿಗಳಾಗಿ ಓದುತ್ತಿದ್ದ, ಮನೆಯ ಎಲ್ಲ ಕೆಲಸಕಾರ್ಯಗಳನ್ನು ಯಾರೊಬ್ಬರ ಸಹಾಯವಿಲ್ಲದೆ ನಿರ್ವಹಿಸಿ ಕೊಂಡು ಹೋಗುತ್ತಿದ್ದ ತಮ್ಮ ಇಬ್ಬರು ತಂಗಿಯರಿಗೆ ಬರೆದ ಕಾಗದಗಳು ಕೆಲವುದರ ಪರಿಚಯ ಮಾಡಿಕೊಡಬೇಕಾಗಿದೆ :

ಪ್ರಿಯ ಪಾಪ,

ನೀನು 19ನೆಯ ತಾರೀಖು ಬರೆದ ಕಾಗದ ಬಂದು ಸೇರಿತು. ಪುನಃ ನೀನು ತಲೆನೋವಿಗೆ ತುತ್ತಾದೆ ಎಂದು ಕೇಳಿ ವ್ಯಸನವಾಯಿತು. ನನಗೆ ಹೊಟ್ಟೆನೋವಿನ ಬಾಧೆ. ನಿನಗೆ ತಲೆನೋವಿನ ಬಾಧೆ. ತಾಳಿಕೊ, ಗೆಲು ವಾಗಿರು. ನೀನು ಯಾವುದಾದರೂ ಒಂದು ಔಷಧವನ್ನು ಖಾಯಂ ಆಗಿ ತೆಗೆದುಕೊಳ್ಳುತ್ತ ಹೋಗಬೇಕು. ನೀನು ಸುಮ್ಮನೆ ಬದಲಾಯಿಸುತ್ತ ಹೋಗುತೀಯ. ಯಾವುದೂ ನಿನ್ನನ್ನು ಗುಣಪಡಿಸುವ ಹಾಗೆ ಕಾಣುವುದಿಲ್ಲ. ಇನ್ನೂ ನನ್ನ ಫೋಟೋ ಕಳುಹಿಸಲಾರೆ. ಸ್ವಲ್ಪಕಾಲ ನೀನು ಕಾಯಬೇಕು. ಅಮ್ಮ, ಮಿಕ್ಕವರು ಎಲ್ಲರೂ ಸುಖವಾಗಿದೀರೆಂದು ನಂಬಿದ್ದೇನೆ. ಹಣದ ವಿಚಾರ ಮನಸಿಗೆ ತೆಗೆದುಕೊಳ್ಳಬೇಡ. ಒಳ್ಳೆಯ ವಿಷಯ ಮಾತ್ರ ಕಾಗದ ಬರೆಯುತ್ತ ಹೋಗು. ಅದೇ ನನ್ನ ಇಷ್ಟ. ನಾನು ಕಳುಹಿಸಿದ Daily Mirror Year Bookನ್ನು, Darily Mirror Pantomineನ್ನು ನೋಡಿದೆಯಾ, ಅವು ಹೇಗಿವೆ ?

ನನ್ನ ಪ್ರಿಯ ತಂಗಿ,

ನಿನ್ನ ಕಾಗದ ಕಂಡು ನನಗೆ ಅತಿಯಾದ ಸಂತೋಷವಾಯಿತು. ಅದೂ ಎಂಥ ಸಂತೋಷದ ಸಮಾಚಾರ ! ಎಷ್ಟೋ ಕಷ್ಟಪಟ್ಟು ಓದಿ ಗೆದ್ದು ದಕ್ಕೆ ಷಹಬಾಸುಗಿರಿ ಕೊಡುತ್ತೇನೆ. ಇಷ್ಟು ಕಷ್ಟಪಟ್ಟಿದ್ದರೂ ನಿನ್ನ ಆರೋಗ್ಯ ಕೆಡಲಿಲ್ಲವೆಂದು ಕೇಳಿ ನನಗೆ ಸಂತೋಷ. ಫೋಟೋವಿನಲ್ಲಿ ನೀನು ಬಹಳ ಚೆನ್ನಾಗಿ ಕಾಣುತೀಯೆ. ಆದರೆ ಸುಸ್ತಾದವಳ ಹಾಗೆ ತೋರುತ್ತೀಯೆ.

ನಿನ್ನ ಕಣ್ಣು ಸರಿಪಡಿಸಿಕೊಳ್ಳುವುದಕ್ಕೆ ನೀನೊಂದು ಕನ್ನಡಕ ಕೊಂಡು ಕೊಳ್ಳಬೇಕು. ಫೋಟೋ ಚೆನ್ನಾಗಿ ತೆಗೆದಿದ್ದಾರೆ. ಆದರೆ ಹಿಂದುಗಡೆಯ ಪರದೆ ಮಾತ್ರ ನನಗೆ ಸರಿಯಾಗಿ ಕಾಣುವುದಿಲ್ಲ. ಚಿತ್ರದ ಅಂದವನ್ನೆ ಕೆಡಿಸಿ, ಕೆಳವುಟ್ಟದ್ದನ್ನಾಗಿ ಮಾಡಿಬಿಟ್ಟಿದೆ. ನೀವೆಲ್ಲರೂ ಗೆಲುವಾಗಿ ಆರೋಗ್ಯವಂತರಾಗಿ ಕಾಣುತ್ತೀರಿ. ರಾಮಕೃಷ್ಣ ಹುಡುಗಿಯ ವೇಷದಲ್ಲಿ ತೀರ ಮುದ್ದಾಗಿ ಕಾಣುತ್ತಾನೆ....ಬೇರೆ ಲಕೋಟೆಯಲ್ಲಿ ಬೇಕಾದ ಹಾಗೆ ಚಿತ್ರದ Post cardಗಳನ್ನು ಕಳುಹಿಸಿದ್ದೇನೆ. ಪ್ರತಿವಾರ ಕಳುಹಿಸುತ್ತ ಹೋಗುತ್ತೇನೆ. ಒಂದು allbumನ್ನು ಕಳುಹಿಸಬೇಕೆಂದಿದ್ದೇನೆ

ಪ್ರೀತಿಯ ತಂಗಿ,

ಆಗಸ್ಟ್ ೨೯ರ ನಿನ್ನ ಕಾಗದ ಬಂದು ಸೇರಿತು. ನಾನು ಇಲ್ಲಿ ಆರೋಗ್ಯವಾಗಿದ್ದೇನೆ. ನೀವೂ ಆರೋಗ್ಯದಿಂದಿರುವಿರೆಂದು ನಂಬಿದೇನೆ. ಮನೆಯ ಕಡೆ ತೊಂದರೆ ಎಂದು ನೀನು ಯಾವುದಕ್ಕೆ ಹೇಳುತೀಯೊ ಅರ್ಥವಾಗುವುದಿಲ್ಲ. ಆ ತೊಂದರೆ ಏನು ಎನ್ನುವುದನ್ನು ನೀನು ತಿಳಿಸಿದ್ದರೆ ಚೆನ್ನಾಗಿತ್ತು. ನೀನು ಸುಮ್ಮನೆ ಯೋಚನೆ ಮಾಡಬೇಡ. ಸುಮ್ಮನೆ ಯೋಚಿಸುತ್ತ ಕುಳಿತರೆ ತೊಂದರೆಗಳು ತಾವಾಗಿಯೇ ಸರಿಹೋಗುವುದಿಲ್ಲ. ಅವು ಬಂದಂತೆ ಅವನ್ನು ನಿಧಾನವಾಗಿ, ಧೈರ್ಯದಿಂದ, ಬುದ್ಧಿವಂತಿಕೆಯಿಂದ ಎದುರಿಸಬೇಕು. ಅದನ್ನು ಬಿಟ್ಟು ಬೇರೆ ದಾರಿಯಿಲ್ಲ.

ಪ್ರಿಯ ತಂಗಿ,

ನಿನ್ನ 24-9-14 ರ ಕಾಗದ ಬಂದು ಸೇರಿತು.... ನಾನು ನಿನಗೆ ಕಳುಹಿಸಿದ Picture Postcardಗಳು ಬಂದು ಸೇರಿದವೊ ಇಲ್ಲವೊ ತಿಳಿಸು.

ರಾಮಕೃಷ್ಣ, ಕೋಲು ಹಿಡಿದು ನಾಯಿ ಜೊತೆಗೆ ನಿಂತಿರುವ ಚಿತ್ರವನ್ನು ಇಲ್ಲಿ ಎಲ್ಲರೂ ಮೆಚ್ಚುತ್ತಾರೆ....ಯಾವ ತರದ ಬಟ್ಟೆಯನ್ನು ಬೇಕಾದರೂ ಹಾಕು. ದಯವಿಟ್ಟು ಅವನನ್ನು ಹುಡುಗಿಯಂತೆ ಸಿಂಗರಿಸಬೇಡ. ನನ್ನ ಇನ್ಷೂರೆನ್ಸ್ ಹಣವನ್ನ ನಾನು ಕಳುಹಿಸಿದ್ದೇನೆ. ಅದನ್ನು ನಾನು ನೋಡಿಕೊಳ್ಳುತ್ತೇನೆ. ನೀನು ಒದ್ದಾಡಬೇಡ.

ಬಟ್ಟೆ ಉಡಿಸಿ ಜೊಲಿದು ಸೊಗಸುಮಾಡಿರುವ ರಾಧೆಯ ಚಿತ್ರವನ್ನು ಇಲ್ಲಿ ಎಲ್ಲರೂ ಬಹಳವಾಗಿ ಮೆಚ್ಚುತ್ತಾರೆ. ಅದನ್ನು ಈರೀತಿ ಮಾಡುವುದಕ್ಕೆ ಬಹಳ ಕೆಲಸ ಹಿಡಿದಿರಬೇಕು. ಹಣವೂ ಖರ್ಚಾಗಿರಬೇಕು.

ಅಪ್ಪನ ತಿಥಿಯ ವಿಷಯವಾಗಿ ನಿನಗೆ ಈ ಮೊದಲೆ ಕಾಗದ ಬರೆದಿದ್ದೇನೆ. ನಿಮಗೆ ಯಾವರೀತಿ ತೋರುತ್ತದೊ ಹಾಗೆ ಮಾಡಿರಿ. ಅಮ್ಮನಿಗೇ ಆ ವಿಷಯ ಹೆಚ್ಚುಗೊತ್ತು.

ನಿನಗೆ ಪ್ರೊಮೋಷನ್ ದೊರೆಯಿತೆಂದು ಕೇಳಿ ಸಂತೋಷವಾಯಿತು. ಆದರೆ ಬಂದಿರುವ ಅವಕಾಶವನ್ನು ನೀನು ಎಸೆದುಬಿಡಬಾರದು. ನಾನು 25 ರೂಪಾಯಿ ಸಂಬಳದಮೇಲೆ ಕೆಲಸಕ್ಕೆ ಸೇರಿದೆ ಎನ್ನುವುದನ್ನು ನೆನಪಿನಲ್ಲಿಟ್ಟುಕೊ. ನಿನಗೆ ಬಂದಷ್ಟನ್ನು ತೆಗೆದುಕೊ. ಮುಂದುವರಿಯುವುದಕ್ಕೆ ಅದೊಂದೇ ದಾರಿ. ನನ್ನ ಉದಾಹರಣೆಯಿಂದಲೇ ಪಾಠ ಕಲಿತುಕೊ. ನಿನಗೆ ಒಳ್ಳೆಯದಾಗಲಿ ಎಂದು ಪ್ರಾರ್ಥಿಸುತ್ತೇನೆ.

ಪ್ರಿಯ ತಂಗಿ,

ನಾನು ನನ್ನ ಕರ್ತವ್ಯ ಮಾಡುತ್ತೇನೆ. ಅದು ಜನಕ್ಕೆ ಸೊಗಸದಿದ್ದರೆ ನಾನೇನುಮಾಡಲಿ. ನಮ್ಮ ಕರ್ತವ್ಯ ನಾವು ಮಾಡಿಕೊಂಡು ಸರಿಯಾಗಿ ನಡೆದರೆ ಜನ ದ್ವೇಷಿಸುತ್ತಾರೆ. ಕರ್ತವ್ಯಮಾಡದೆ ಹೋದರೆ ಕಂಡು ನಗುತ್ತಾರೆ. ನಮ್ಮಿಂದ ದೂರ ಓಡುತ್ತಾರೆ. ಪ್ರಪಂಚದ ರೀತಿಯೇ ಹೀಗೆ. ನೀನು ಮನಸಿಗೆ ಹಚ್ಚಿಕೊಳ್ಳಬೇಡ.

ಕಳೆದ ತಿಂಗಳು ನಡೆದ ಮುಖ್ಯವಾದ ಪರೀಕ್ಷೆಯಲ್ಲಿ ನಾನು ಮೊದಲನೆ ತರಗತಿಯಲ್ಲಿ ಉತ್ತೀರ್ಣನಾದೆನೆಂದು ಕೇಳಿ ನಿನಗೆ ಸಂತೋಷವಾಗಬಹುದು. ಈ ಏಪ್ರಿಲ್ ತಿಂಗಳಲ್ಲಿ ಇನ್ನೊಂದು ಪರೀಕ್ಷೆ ಇದೆ. ಅದನ್ನು ಮಾಡಿ ಮುಗಿಸಿದರೆ ನನ್ನ ಜೀವಮಾನದಲ್ಲಿ ನಾನು ಪಾಸುಮಾಡಬೇಕಾದ ಎಲ್ಲ ಪರೀಕ್ಷೆಗಳೂ ಮುಗಿದಂತೆಯೆ ಎಂದು ನನ್ನ ನಂಬಿಕೆ.

ನನ್ನ ಪ್ರೀತಿಯ ತಂಗಿ,

24ನೆ ಡಿಸೆಂಬರಿನ ನಿನ್ನ ಕಾಗದ ಬಂತು. ನೀನು ಆರೋಗ್ಯವಾಗಿದೀ ಯೆಂದು ಕೇಳಿ ಸಂತೋಷವಾಯಿತು. ಆದರೆ ಪಾಪ, ಇನ್ನೂ Jaundice ನಿಂದ ನರಳುತಿದಾಳೆಂದು ಕೇಳಿ ದುಃಖವಾಯಿತು. ಅವಳ ಕಷ್ಟ ನಿವಾರಿಸಲು ಏನುಮಾಡುವುದಕ್ಕೂ ಆಗುವುದಿಲ್ಲವೆ? ಅವಳಿಗಾಗಿ ಬಹಳ ಮರುಗಿದೆ. ದೇವರು ಆಕೆಗೆ ಒಳ್ಳೆಯ ಆರೋಗ್ಯಭಾಗ್ಯ ಕೊಡುತ್ತಾನೆಂದು ನಂಬಿದ್ದೇನೆ ಈ ಹೊತ್ತು ಇಲ್ಲಿ ಅಧಿಕವಾಗಿ ಮಂಜು ಸುರಿಯುತ್ತಿದೆ. ನಾನು ಲಂಡನಿಗೆ ಬಂದಮೇಲೆ ಈ ರೀತಿ ಮಂಜು ಸುರಿಯುತಿರುವುದು ಇದೇ ಮೊದಲು. ಎಲ್ಲಿ ನೋಡಿದರೂ ಬಂಡಿಗಟ್ಟಲೆ ಬಿಳೀಮಣ್ಣನ್ನು ಗುಡ್ಡೆ ಗುಡ್ಡೆಯಾಗಿ ಸುರಿದು ಹೋದಂತೆ ಕಾಣುತ್ತದೆ. ಎಲ್ಲರೂ ಆರೋಗ್ಯವಾಗಿರಿ. ಎಲ್ಲರೂ ಗೆಲುವಿನಿಂದಿರಿ.

ನನ್ನ ಪ್ರೀತಿಯ ತಂಗಿ,

28ನೆ ಜನವರಿಯ ಕಾಗದ ಬಂತು. ನನಗೆ Scholarship ಕೊಟ್ಟರೊ ಇಲ್ಲವೋ ಆ ವಿಷಯ ಇನ್ನೂ ಏನೂ ಗೊತ್ತಾಗಿಲ್ಲ. ಆದರೆ ಏನೇ ಆದರೂ ಅದು ನಮ್ಮ ಒಳ್ಳೆಯದಕ್ಕೆ ಆಗುತ್ತದೆ ಎಂದು ನಂಬು. ಅದೇ ನಾನು ನಿನ್ನನ್ನು ಕೇಳುವುದು. ನಿನ್ನ ಇಷ್ಟ ನೆರವೇರಲಿಲ್ಲವೆಂದು ಎದೆಗುಂದಬೇಡ. ನಂಬಿಕೆ ಇರಲಿ. ಗೆಲುಮನಸಿನಿಂದ. ದೃಢನಿಶ್ಚಯದಿಂದ ಕೆಲಸಮಾಡುತ್ತ ಹೋಗು. ಏನೂ ಕೇಡಾಗುವುದಿಲ್ಲ. ಮನೆಯವರನ್ನು ಸರಿಯಾಗಿ ನೋಡಿಕೊಳ್ಳುತ ಹೋಗು. ಭಯಪಡಬೇಡ, ಅಪನಂಬಿಕೆ ಪಡಬೇಡ, ಯೋಚನೆಗೀಡಾಗಬೇಡ. ನಾವು ಮಾಡುತಿರುವುದೇ ಸರಿ ಎಂದು ದೃಢವಾಗಿ ನಂಬು.

ಪಾಪ,

ನೀನು ಇಂಗ್ಲೀಷಿನಲ್ಲಿ ಸೊಗಸಾಗಿ ಬರೆದಿದ್ದ ಕಾಗದ ಬಂದು ಸೇರಿತು. ಇಂಗ್ಲೀಷು ಬರವಣಿಗೆಯಲ್ಲಿ ಇಷ್ಟುಮಟ್ಟಿನ ಶಕ್ತಿ ಸಂಪಾದಿಸಿಕೊಂಡಿರುವುದನ್ನು ಕಂಡು ಅತಿಯಾದ ಆನಂದವಾಯಿತು. ನಿನ್ನ ಬರವಣಿಗೆ

ನಿಜವಾಗಿಯೂ ಚೆನ್ನಾಗಿದೆ. ನಾನು ಇನ್ನೂ ಇಲ್ಲಿರುವುದರ ವಿಷಯ ಖಚಿತವಾಗಿ ಯಾವುದೂ ಗೊತ್ತಾಗಲಿಲ್ಲ. ಇನ್ನೇನು ಹೆಚ್ಚುದಿನ ನಾನಿಲ್ಲಿರ ಲಾರೆ. ಬೆಂಗಳೂರಿನಲ್ಲಿ ಜೂನ್ ತಿಂಗಳ ಹೊತ್ತಿಗೆ ಇರಬಹುದು. ಮನೆಯ ಕಡೆ ಎಲ್ಲರೂ ಆರೋಗ್ಯವಾಗಿದ್ದಾರೆ ತಾನೆ ?

ತಮ್ಮ ತಂದೆಗೆ ಬರೆದ ಒಂದೇ ಒಂದು ಪತ್ರ ಸಿಕ್ಕಿದೆ. ಲಂಡನಿನಿಂದ ಕನ್ನಡದಲ್ಲಿ ಬರೆದಿರುವ ಪತ್ರವೆಂದರೆ ಇದೊಂದೇ ಈ ಪತ್ರವನ್ನ ಇಲ್ಲಿ ಕಾಣಿಸಿದೇನೆ.

" ತೀ|| ರವರಿಗೆ, ನೀವು ಬರೆದ ಕಾಗದ ತಲಪಿತು. ಮತ್ತು ನೀವು ಏಟ್ಸ್ ಸಾಹೇಬರಲ್ಲಿ ಮಾತನಾಡಿದ ವಿಷಯವೂ ತಿಳಿಯಿತು. ಸಂಘದ ಮ್ಯಾನೇಜರನ್ನಾಗಲಿ, ಮ|| ಶ್ಯಾಮಗೌಡರನ್ನಾಗಲಿ ದುಡ್ಡನ್ನ ಕೇಳಬೇಡಿ. ಏಕೆಂದರೆ ನನಗೆ ಬಹಳ ತೊಂದರೆಗೆ ಕಾರಣವಾಗುವಂತೆ ತೋರುತ್ತದೆ. ಅವರಿಗೋಸ್ಕರ ಇಲ್ಲಿ ನಾನು ವಿಶೇಷವಾಗಿ ದುಡ್ಡು ಖರ್ಚುಮಾಡಬೇಕಾಗಿ ಬರುತ್ತದೆ. ನಾಗಣ್ಣನವರು ಬಹಳ ತಗಾದೆಮಾಡಿದರೆ ಎಲ್ಲಿಯಾದರೂ ತಂದುಕೊಟ್ಟುಬಿಡಿ. ನಾನು ಇಲ್ಲಿಯೇ ಎಲ್ಲಾದರೂ ಹಣ ಜೊತೆಮಾಡಿ ಕಳುಹಿಸುತ್ತೇನೆ. ರಾಮಕೃಷ್ಣನ ಫೋಟೋ ಒಂದನ್ನು ತೆಗೆದು ಜಾಗ್ರತೆ ಕಳುಹಿಸಿರಿ. ಮನೆಯಲ್ಲಿ ಎಲ್ಲರೂ ಸೌಖ್ಯವಾಗಿದೀರೆಂದು ನಂಬಿದೇನೆ. ಇದರಲ್ಲಿ ಇರುವ ಕಾಗದವನ್ನು ವೆಂಕಮ್ಮನಿಗೆ ಕೊಡಿರಿ. ಅದರಲ್ಲಿ ನಾನು ವಿಶೇಷವೇನನ್ನೂ ಬರೆದಿಲ್ಲ. ಅವಳಿಗೆ ಸ್ವಲ್ಪ ಉತ್ಸಾಹವಾಗುವ ಹಾಗೆ ಕೆಲವು ಒಳ್ಳೆಮಾತುಗಳನ್ನ ಬರೆದಿದ್ದೇನೆ ಇನ್ನೇನೂ ಇಲ್ಲ.

ಯಿಂತಿ ನಮಸ್ಕಾರಗಳು, ಬಿ. ಪುಟ್ಟಯ್ಯ.

## ಮುದ್ರಣಕಲೆಯಲ್ಲಿ ಪಡೆದುಕೊಂಡ ಪ್ರಶಸ್ತಿ -
## ದೇಶಕ್ಕೆ ಪುನರಾಗಮನ

ಮೂರು ವರ್ಷಕಾಲ ಶಿಕ್ಷಣಹೊಂದಿದುದು ಮುಗಿಯಿತು. ಆದರೆ ಕಲಿಯಬೇಕಾದುದು ಇನ್ನೂ ಎಷ್ಟೊ! ಕಲಿಯಬೇಕೆನ್ನುವ ಆಸೆ ಹಿಂಗಲಿಲ್ಲ. ವ್ಯಾಸಂಗವನ್ನು ಮುಂದುವರಿಸಲು ವೇತನ ದೊರೆಯುವುದೇನೊ ಎಂದು ನಿರೀಕ್ಷಿಸಿದರು. ಆದರೆ ವೇತನ ಸಿಗಲಿಲ್ಲ. ವಿದೇಶದಲ್ಲಿನ ವ್ಯಾಸಂಗ ಅಲ್ಲಿಗೇ ಮುಗಿದು 1915ರ ಮಧ್ಯದಲ್ಲಿ ಅವರು ಸ್ವದೇಶಕ್ಕೆ ಹಿಂತಿರುಗ ಬೇಕಾಯಿತು.

ಮುದ್ರಣಕಲೆಯಲ್ಲಿ ತಂದೆ ಪಡೆದುಕೊಂಡು ಬಂದ ಪ್ರಶಸ್ತಿ ದೊಡ್ಡದು. ತಂದೆ ಯಾವುದರಲ್ಲಿ ಮನಸಿಟ್ಟರೂ ಅದನ್ನು ಶ್ರದ್ಧೆಯಿಂದ ಮಾಡುತ್ತಿದ್ದರು. ಆ ಶ್ರದ್ಧೆಯ ಪ್ರತಿಫಲವಾಗಿ ಅವರು ಗ್ರೇಟ್‌ಬ್ರಿಟನ್ ಮತ್ತು ಎಲ್ಲ ಕಾಲೊನಿಗಳಿಂದ ಬಂದ ವಿದ್ಯಾರ್ಥಿಗಳಲ್ಲೆಲ್ಲ ಮೊದಲನೆಯವರಾಗಿ ಹೆಸರು ಗಳಿಸಿಕೊಂಡರು. ಭಾರತೀಯರಲ್ಲಿ ಅಂಥ ಸ್ಥಾನವನ್ನು ಪಡೆದುಕೊಂಡವರಲ್ಲಿ ಮೊದಲಿಗರಾದರು. ಅವರು ವ್ಯಾಸಂಗಮಾಡಿದ ಶಾಲೆಯ Honours Boardನಲ್ಲಿ ಅವರ ಹೆಸರು ಸೇರಿತು. ಶಿಕ್ಷಕರಾದ, ಸ್ಕೂಲಿನ ಮುಖ್ಯೋಪಾಧ್ಯಾಯರಾದ ಮಿ॥ ಬೆನ್ ಸಟ್ಲೆಯವರೂ, ಮಿ॥ ರಿಡೆಲ್ ಅವರೂ ತಂದೆಯ ವಿಷಯವಾಗಿ ಯಾವ ಅಭಿಪ್ರಾಯವನ್ನು ಇಟ್ಟುಕೊಂಡಿದ್ದರೆನ್ನುವುದನ್ನು ತಿಳಿಸಲು ಆ ಮಹನೀಯರ ಎರಡು ಪ್ರಶಸ್ತಿ ಪತ್ರಿಕೆಗಳ ನಕಲನ್ನು ಇಲ್ಲಿ ಕಾಣಿಸಿದ್ದೇನೆ.

As Managing Director I have pleasure in certifying that Mr. Bangalore Puttaiya has pursued a course of intensive study in the printing art for a period of three years. He has passed through all the departments of our house, and made himself fully acquainted with all the processes employed.

Mr. Puttaiya has paid most assiduous and critical attention to each branch of the work, and the progress he has made reflects great credit upon the perseverence and the intelligence displayed.

Owing to Mr. Puttaiya's natural love for theory and the study he has given to that side of the subject he has been able to make much greater advance than would otherwise have been possible, and the practical knowledge that he now possesses qualifies him to undertake control and to impart instruction in any branch of this most varied art.

I am very sorry to part with Mr. Puttaiya and heartily wish him every success in his future career.

ನಮ್ಮ ತಂದೆಯೂ, ಶ್ರೀಯುತ ಬಿಂಡಿಗನವಲೆ ಶ್ರೀನಿವಾಸಯ್ಯಂಗಾರ್ಯರೂ ಮೂರು ವರ್ಷ ಕಾಲ ಮಾಡಿದ ಕೆಲಸದ ವರದಿಯನ್ನು ಕೊಡುತ್ತ Managing Director ಅವರು ಹೀಗೆ ಬರೆದಿದಾರೆ—

I am pleased to have the opportunity of being associated with these gentlemen—sons of our great Indian Empire, never more closely drawn together in the bonds of mutual interest and affection than in the present crisis. They won respect from the overseers and staff of the various departments through which they have passed and one and all desire to join with me in the expression of friendly

regard and esteem, and a sincere hope that they will be able to disseminate amongst their compatriots the knowledge gained while in England. I hope and believe that it will be helpfull to others, whose interest are centred in the printing art, in which all those who are connected with it may justly take a great pride, as being the handicraft which has brought more enlightenment to the world, than any other branch of commerce.

ತಂದೆ ಮುದ್ರಣಕಲೆಯಲ್ಲಿ ಪಡೆದುಕೊಂಡ ಪ್ರಶಸ್ತಿಯನ್ನು ಪ್ರಸ್ತಾಪಿಸಿ St. Bride Foundation Printing Schoolನ ಪ್ರಿನ್ಸಿಪಾಲರಾದ ಮಿ॥ J. R. Riddel ಅವರು ಬರೆದ ಕಾಗದ:—

Bride Lane
Fleet street
London E. C.
Aug. 10th 1915.

Dear Mr. Puttaiya,

I trust you have reached home safely and the voyage back was all that you wished for.

It is a great pleasure for me to inform you, as you will see by the prospectus I am sending you and Mr. Iyengar under separate post along with examples of student's work, that you have been very successful in this year's examinations. You are awarded the City and Guilds medal and prize

of £ 2; The St. Bride medal and £ 2; 2/6d attendance prize and Messrs. Walker Brothers prize which I have chosen for you—an ivory type measure. You have also obtained a certificate in the second class for Litho as well as one for cost finding out but you will be able to see the various points from the prospectus.

I think you are to be congratulated on the success you have attained in your last year at this school and of which I will retain many pleasant memories. Your name has been added to our Honours Board and this will be a further memento of the high position you have achieved in this year's examination.

With all good wishes.

I am yours faithfully,
J. R. Riddell.
Principal.

ಮತ್ತೂ ಕಲಿಯಬೇಕೆನ್ನುವ ಆಸೆ ಅಡಗದೆ 1915ರ ಜೂನ್ ತಿಂಗಳಲ್ಲಿ ತಂದೆ ಸ್ವದೇಶಕ್ಕೆ ಹಿಂದಿರುಗಿದರು. ಅವರನ್ನು ಸ್ವಾಗತಿಸಲು ಬೊಂಬಾಯಿನವರೆಗೆ ಯಾರೂ ಹೋದಂತೆ ಕಾಣಲಿಲ್ಲ. ಈಚೆಗೆ ನಮ್ಮ ಸೋದರತ್ತೆ ಲಂಡನಿಗೆ ಹೋಗಿ ಹಿಂತಿರುಗಿದಾಗಲೂ, ನಮ್ಮ ಅಣ್ಣ ಜರ್ಮನಿಯಲ್ಲಿ ವ್ಯಾಸಂಗಮುಗಿಸಿಕೊಂಡು ವಾಪಸು ಬಂದಾಗಲೂ ನಮ್ಮ ತಂದೆಯೇ ಹೋಗಿ ಬಹುಕಾಲ ಅಗಲಿದ್ದವರನ್ನು ಮೊದಲು ಸ್ವಾಗತಿಸಿ ಮನೆಗೆ ಕರೆದುಕೊಂಡು ಬಂದರು. ಆದರೆ ಅವರು ಬಂದಾಗ ಯಾರೂ ಮನೆಯಿಂದ

ಹೋಗಿ ಸ್ವಾಗತಿಸಲಿಲ್ಲ. ಬೆಂಗಳೂರಿನಲ್ಲಿ ಮನೆಯಲ್ಲಿದ್ದವರು, ಅವರ ತಾಯಿ, ಇಬ್ಬರು ತಂಗಿಯರು, ಹೆಂಡತಿ, ಐದುವರ್ಷದ ಮಗು, ಇಷ್ಟುಜನ ಮಾತ್ರ. ಅವರ ತಂದೆ ತೀರಿಹೋಗಿ ಎರಡು ವರ್ಷಗಳಾಗಿತ್ತು. ಹೆಂಗಸರಾದ ಇವರುಗಳು ಹೇಗೆತಾನೆ ಮನೆಬಿಟ್ಟು ಹೋದಾರು. ಬೆಂಗಳೂರು ರೈಲುಸ್ಟೇಷನಿನವರೆಗೂ ಯಾರೂ ಹೋಗಲಾಗಲಿಲ್ಲವಂತೆ. ಅವರೇ ಮನೆಯನ್ನು ಹುಡುಕಿಕೊಂಡು ಬಂದರು. ಬಹುದಿನಗಳಾದಮೇಲೆ ಬಂದ ಮಗನನ್ನು ನೋಡಿ ತಾಯಿಗೆ, ಅಣ್ಣನನ್ನು ಕಂಡ ತಂಗಿಯರಿಗೆ, ಗಂಡನನ್ನು ಕಂಡ ಹೆಂಡತಿಗೆ ಯಾವ ಬಗೆಯ ಸಂತೋಷವಾಯಿತೊ ನಾನು ಅದನ್ನು ಯಾವರೀತಿ ವರ್ಣಿಸಲಿ. ಆ ಕ್ಷಣದ ಅನುಭವವನ್ನು ವಿವರಿಸತೊಡಗುವುದು ಮೂರ್ಖತನ.

ತಂದೆ ವಿದೇಶದಿಂದ ಬಂದಾಗ ಅನೇಕ ಸಾಮಾನುಗಳನ್ನು ತಂದರು. ಪುಸ್ತಕಗಳಂತೂ ಲೆಕ್ಕವಿಲ್ಲದಷ್ಟು. ಪಾತ್ರೆಸಾಮಾನುಗಳು, ಮಕ್ಕಳ ಆಟದ ಸಾಮಾನುಗಳು, ಚಿತ್ರದ ಪುಸ್ತಕಗಳು, ಎಷ್ಟೊ ಬಗೆಯವು ಮನೆಗೆ ಬಂದು ಬಿದ್ದವು. ಈಚಿನವರೆಗೂ ಎಂದರೆ ಈಗ ಎಂಟೊಂಭತ್ತು ವರ್ಷಗಳ ಹಿಂದಿನವರೆಗೂ ಈ ಸಾಮಾನುಗಳೆಲ್ಲ ಜೋಪಾನವಾಗಿ ಮನೆಯಲ್ಲಿದ್ದುವು. ಈಗಲೂ ಆ ಎಲ್ಲ ಸಾಮಾನುಗಳು ನನ್ನ ಕಣ್ಣಮುಂದೆ ಕಟ್ಟಿದಂತಿದೆ. ಒಂದು ಬಗೆಯ ಸಣ್ಣ ಸಣ್ಣ ಮರದ ಚಕ್ಕೆಗಳ ಪೆಟ್ಟಿಗೆಯೊಂದಿತ್ತು. ಆ ಚಕ್ಕೆಗಳನ್ನು ಒಂದರೊಡನೆ ಒಂದನ್ನು ಕೂಡಿಸಿ ಮನೆಗಳನ್ನು ಕಟ್ಟಬಹುದಾಗಿತ್ತು. ಇನ್ನೊಂದು ಪೆಟ್ಟಿಗೆಯಲ್ಲಿ ವಿಧವಿಧವಾದ ಬಣ್ಣದ ಜೇಡಿಮಣ್ಣಿನ ಉಂಡೆಗಳಿದ್ದುವು. ಇವುಗಳನ್ನ ಬಗೆಬಗೆಯ ಆಕಾರಕ್ಕೆ ತಂದು ತರಕಾರಿಯಂತೆ ಹಣ್ಣಿನಂತೆ ಕಾಣುವಹಾಗೆ ಮಾಡಬಹುದಾಗಿತ್ತು. ಬೇರೊಂದು ಪೆಟ್ಟಿಗೆಯಲ್ಲಿದ್ದ ಸಾಮಾನುಗಳಿಂದ ಸಣ್ಣ ಸಣ್ಣ ಯಂತ್ರಗಳನ್ನು ನಾವೇ ಕುಳಿತು ಜೋಡಿಸಬಹುದಾಗಿತ್ತು. ಸಣ್ಣ ಸಣ್ಣ ಫಿರಂಗಿಗಳಿದ್ದುವು. ಅವುಗಳಿಗೆ ಮದ್ದುಹಾಕಿ ಹಾರಿಸಬಹುದಾಗಿತ್ತು. ನೀರಿನಮೇಲೆ ಹೋಗುವ ಜಹಜೊಂದಿತ್ತು. ಅದಕ್ಕೆ ಬೀಗಕೊಟ್ಟರೆ ನೀರಿನಲ್ಲಿ ಈಸಿಕೊಂಡು ಮುಂದೆ ಮುಂದೆ ಹೋಗುತಿತ್ತು. ತರತರದ ಗೊಂಬೆಗಳಿದ್ದವು. ಮುಟ್ಟಿದರೆ ಸಾಕು,

ಹಿಂದಕ್ಕೂ ಮುಂದಕ್ಕೂ, ಹೊಟ್ಟೆಯನ್ನು ಮುಂದುಮಾಡಿ, ತಲೆಯನ್ನು ಅಲ್ಲಾಡಿಸುತ್ತ ತೂಗಾಡುವ ಪಾದ್ರಿಯ ಗೊಂಬೆ ಈಗಲೂ ಇದೆ. ಎಲ್ಲ ಬಗೆಯ ಪ್ರಾಣಿಗಳ ಗೊಂಬೆಗಳಿದ್ದುವು. ಚಿತ್ರಗಳಿದ್ದುವು. ಚೇಳು ಆಮೆಗ ಳಿದ್ದುವು. ಬೀಗ ಕೊಟ್ಟರೆ, ಬಾಲವನ್ನು, ಕೊಂಡಿಯನ್ನು ಅಲ್ಲಾಡಿಸಿ ಕೊಂಡು ಮುಂದೆ ಹೋಗುತಿದ್ದುವು. ದಸರಾ ಹಬ್ಬದ ದಿನಗಳಲ್ಲಿ ಈ ಎಲ್ಲ ಸಾಮಾನುಗಳೂ ಅಲಮಾರನ್ನು ಬಿಟ್ಟು ಕೆಳಗೆ ಇಳಿಯುತಿದ್ದುವು. ಆಗ ನಾವು ಈ ಸಾಮಾನೆಲ್ಲವನ್ನು ಇಟ್ಟುಕೊಂಡು ಮನೆ ಕಟ್ಟುತಿದ್ದೆವು. ಯಂತ್ರ ನಿರ್ಮಿಸುತ್ತಿದ್ದೆವು. ತೋಟವೊಂದನ್ನು ಮಾಡಿ ಅದರಲ್ಲಿ ವಿಧವಿಧ ಗಿಡ ಗಳನ್ನು ನೆಡುತ್ತಿದ್ದೆವು. ಬೇರೆಬೇರೆ ಪ್ರಾಣಿಗಳು ಆ ತೋಟದಲ್ಲಿ ವಿಹಾರ ಮಾಡುತಿರುವಂತೆ ರಚಿಸುತ್ತಿದ್ದೆವು. ಆಟವಾಡುತ್ತ ಕಾಲ ಕಳೆದರೂ ಎಷ್ಟೊ ವಿಷಯ ತಾನಾಗಿ ನಮಗೆ ತಿಳಿಯುತ್ತ ಹೋಗುತ್ತಿತ್ತು. ಹೀಗೆ ನಾವು ಆಟ ವಾಡುತ್ತ ಕಳೆಯುತ್ತಿದ್ದ ಕಾಲ ನನ್ನ ಬಾಲ್ಯದ ಸವಿನೆನಪುಗಳಲ್ಲಿ ಒಂದಾಗಿ ಉಳಿದಿದೆ. ಹಬ್ಬ ಮುಗಿದಮೇಲೆ ಈ ಎಲ್ಲ ಸಾಮಾನುಗಳೂ ಮತ್ತೆ ಅಲ ಮಾರು ಸೇರುತಿದ್ದವು. ಈಚಿನವರೆಗೂ ಈ ಸಾಮಾನು ಜೋಪಾನವಾಗಿಯೇ ಇದ್ದುವು. ಆದರೆ ಕಾಲ ಬದಲಾಯಿಸಿದಂತೆ ಮನೆಯಲ್ಲಿದ್ದ ಬಿಗಿ ತಪ್ಪಿ ಹೋಯಿತು. ಮೊದಲು ಮುಂಬಾಗಿಲು ಒಂದೇ ಇದ್ದ ಮನೆಗೆ ಈಗ ನಾಲ್ಕೂ ಕಡೆ ಬಾಗಿಲುಗಳಾದುವು. ಸಾಮಾನುಗಳು ದಸರಾಹಬ್ಬದ ಹೊತ್ತಿಗೆ ಕೈಗೆ ಸಿಗುತ್ತಿದ್ದುವು ಈಗ ದಿನವೂ ಸಿಗುವಂತಾದುವು. ಈ ಎಲ್ಲ ಕಾರಣಗಳ ದೆಸೆಯಿಂದ ಒಂದೊಂದಾಗಿ ಈ ಸಾಮಾನುಗಳು ಪತ್ತೆಯಿಲ್ಲದಂತೆ ಮನೆಬಿಟ್ಟು ಮಾಯವಾಗುತ್ತ ಹೋದವು. ನಾವು ಚಿಕ್ಕಂದಿನಲ್ಲಿ ಇನ್ನಿಲ್ಲದ ಆನಂದ ಅನುಭವಮಾಡಿ ಆಡುತಿದ್ದ ಸಾಮಾನುಗಳು ಈಗ ಯಾವುವೂ ನಮ್ಮ ಮನೆಯಲ್ಲಿಲ್ಲ.

ಉತ್ತಮವಾದ ಯಶಸ್ಸನ್ನು ಗಳಿಸಿ ತಮ್ಮ ನಾಡಿಗೆ ಕೀರ್ತಿಯನ್ನ ತಂದವರನ್ನು ಮೈಸೂರಿನ ಪತ್ರಿಕೆಗಳು ಸ್ವಾಗತಿಸಿ ಬರಮಾಡಿಕೊಂಡವು. ಆಗ ಪ್ರಚಾರದಲ್ಲಿದ್ದ 'ಕರ್ಣಾಟಕ' ಪತ್ರಿಕೆ ಹೀಗೆಂದು ಬರೆಯಿತು.

## Brillant Success of a Mysore Student.

We are glad to hear that Messrs. B. Puttaiya, B. A. and B. Srinivasa Iyengar, B.A., Sub Assistant Superintendents of the Government Press, Bangalore have passed the City and Guilds of London Institute examination in typography in the first class with honours. It is particularly gratifying that Mr. B. Puttaiya heads the list of candidates for the United Kingdom and Colonys and has won the institute's silver medal and a prize of £2. The Saint Bride foundation Institute of London where he studied has awarded him the Institute's silver medal and an additional prize for being the best student taking a first class certificate. Mr. Puttaiya is the first Indian student who has achieved this distinction in typography, and we congratulate him on his brilliant success, and also the Mysore Government and Mr. C. H. Yates, Superintendent of the Govt. Press, for the help and encouragement they gave him for achieving this result and for bringing credit to India in general and Mysore State in particular.

ಮೈಸೂರು ದೇಶದ ಪತ್ರಿಕೆಗಳೇ ಅಲ್ಲದೆ ಮದರಾಸಿನ ಪತ್ರಿಕೆಗಳೂ ಅಭಿನಂದಿಸಿ ಅವರ ಪತ್ರಿಕೆಗಳಲ್ಲಿ ವರದಿಮಾಡಿದುವು. ಇಷ್ಟು ಯಶಸ್ವಿಯಾಗಿ, ಕೀರ್ತಿಗಳಿಸಿಕೊಂಡು ಬಂದ ಈ ಇಬ್ಬರನ್ನೂ ಸರಕಾರದವರು 1915 ರಲ್ಲಿ ಇನ್ನೂರು ರೂಪಾಯಿ ಸಂಬಳ ಕೊಟ್ಟು, ಸಬ್ ಅಸಿಸ್ಟೆಂಟ್ ಸೂಪರಿಂಟೆಂಡೆಂಟರಾಗಿ ನೇಮಕಮಾಡಿದರು.

## ಔದ್ಯೋಗಿಕ ಶಿಕ್ಷಣದ ವಿಷಯವಾಗಿ ಎರಡು ಉಪನ್ಯಾಸಗಳು

ವಿದೇಶಗಳಿಗೆ ಹೋಗಿಬಂದವರ ಅನುಭವಗಳನ್ನು ತಿಳಿದುಕೊಳ್ಳಲು ಅಂಥವರ ಕೈಯಲ್ಲಿ ಉಪನ್ಯಾಸ ಕೊಡಿಸುವುದು ಸ್ವಾಭಾವಿಕ. ತಂದೆ ಸ್ವದೇಶಕ್ಕೆ ಹಿಂತಿರುಗಿ ಬಂದ ಕೆಲವೇ ದಿವಸಗಳಲ್ಲಿ ತಮ್ಮ ಅನುಭವವನ್ನು ಉಪನ್ಯಾಸರೂಪದಲ್ಲಿ ಹೇಳುವ ಕಾಲ ಒದಗಿಬಂತು. ಈ ಕಾಲದಲ್ಲಿ ಅವರು ಕೊಟ್ಟ ಎರಡು ಉಪನ್ಯಾಸಗಳೂ ನಮ್ಮ ನಾಡಿನ ವಿದ್ಯಾಭ್ಯಾಸಕ್ರಮದಲ್ಲಿ ಆಗಬೇಕಾದ ತಿದ್ದುಪಾಟುಗಳ ವಿಷಯಕ್ಕೆ ಸಂಬಂಧಿಸಿದುವು. ಮೊದಲನೆಯ ಉಪನ್ಯಾಸ ವಿದ್ಯಾಭ್ಯಾಸ ಮತ್ತು ವೃತ್ತಿ ಎಂಬ ವಿಷಯದಮೇಲಿನದು. ನಮ್ಮ ದೇಶದಲ್ಲಿ ಆಚರಣೆಯಲ್ಲಿರುವ ವಿದ್ಯಾಭ್ಯಾಸ ಯಾವ ರೀತಿಯದು, ನಾವು ಹೊರನಾಡುಗಳವರೊಂದಿಗೆ ಸರಿಸಮನಾಗಿ ನಿಲ್ಲಬೇಕಾದರೆ ಯಾವ ರೀತಿ ನಮ್ಮ ವಿದ್ಯಾಭ್ಯಾಸ ಕ್ರಮವನ್ನು ಸುಧಾರಿಸಬೇಕು ಎನ್ನುವುದೇ ಉಪನ್ಯಾಸದ ವಸ್ತು. ಉಪನ್ಯಾಸದ ಬಹುಭಾಗ ಈಗಿನಕಾಲಕ್ಕೂ ಅನ್ವಯಿಸಬಹುದಾದುದರಿಂದ ಅದರಲ್ಲಿನ ಮುಖ್ಯ ಅಂಶಗಳನ್ನು ಇಲ್ಲಿ ಸಂಗ್ರಹಿಸಿ ಕೊಟ್ಟಿದ್ದೇನೆ.

"ಇದುವರೆಗೂ ನಮ್ಮ ವಿದ್ಯಾಭ್ಯಾಸ ಗೊತ್ತು ಗುರಿಯಿಲ್ಲದ ರೀತಿಯಲ್ಲಿ ನಡೆಯುತ್ತಿದೆ. ನಾವೆಲ್ಲ ಸುಮ್ಮನೆ ವಿದ್ಯೆ ಕಲಿಯಲು ಆಸೆ ಬೀಳುತಿದ್ದೇವೆ. ಜ್ಞಾನಸಂಪಾದಿಸಿಕೊಂಡಮೇಲೆ ಮುಂದೆ ಏನಾಗಬೇಕೆಂದಿದ್ದೇವೆ ಎಂದು ಯೋಚನೆಮಾಡುತಿಲ್ಲ. ನಮ್ಮ ತಂದೆ ತಾಯಿಗಳು ನಮ್ಮನ್ನು ಸ್ಕೂಲಿಗೆ ಮೊದಲು ಕಳುಹಿಸಲು ಆತುರಪಡುತ್ತಿದ್ದಾರೆ. ನಮ್ಮನ್ನು ಸ್ಕೂಲುಗಳಿಗೆ ಅಟ್ಟಿಬಿಟ್ಟು, ಒಂದು ಕ್ಲಾಸಾದಮೇಲೆ ಇನ್ನೊಂದಕ್ಕೆ ನುಗ್ಗಿಸಿ ಪರೀಕ್ಷೆಯ ಮೇಲೆ ಪರೀಕ್ಷೆಯನ್ನು ಎದುರಿಸುವಂತೆ ಮಾಡಿ ಕೊನೆಗೆ ತೇರ್ಗಡೆ ಹೊಂದಿದೆವು ಎನ್ನಿಸಿಬಿಡುತ್ತಾರೆ. ನಮ್ಮ ಮುಂದಿನ ಗುರಿ ಏನು ಎನ್ನುವ ಯೋಚನೆ ಆಮೇಲೆತಾನೆ ಬರುತ್ತದೆ. ಆಗಲೂ ಕೂಡ ಎಲ್ಲರೂ ಬರುವ ನಿರ್ಧಾರ ಒಂದೇ ಬಗೆಯದು. ಎಲ್ಲರ ಗುರಿಯೂ ಸರ್ಕಾರದಲ್ಲಿ ಒಳ್ಳೆಯ ನೌಕರಿಯನ್ನು ಸಂಪಾದಿಸಿಕೊಳ್ಳುವುದೇ ಆಗಿರುತ್ತದೆ.

ಈ ಪರಿಸ್ಥಿತಿಗೆ ಕಾರಣವಾಗಿರುವ ನಮ್ಮ ವಿದ್ಯಾಭ್ಯಾಸಕ್ರಮ ಬದಲಾಗ ಬೇಕಾದ ಕಾಲ ಬಂದಿದೆ. ವಿದ್ಯಾವಂತರಾದ ಯುವಕರು ಮುಂದೆ ಬಂದು ನಮ್ಮ ದಿನದಿನದ ಅಗತ್ಯಗಳಾದ ಆಹಾರ, ಉಡುಪು, ವಾಸಸ್ಥಾನ ಇವುಗಳನ್ನು ಒದಗಿಸುವ ಕಾರ್ಯದಲ್ಲಿ ನಿರತರಾಗಬೇಕು. ಅದೇ ನಮ್ಮ ದೇಶದ ಇಂದಿನ ಅಗತ್ಯ ನೂತನ ವಿಧಾನಗಳನ್ನು ಬಳಕೆಗೆ ತಂದು ನಮ್ಮ ಜಮೀನು ಸಾಗುವಳಿ ಮಾಡಬೇಕು. ಒಂದೆಲೆ ಬೆಳೆಯುತ್ತಿದ್ದ ಕಡೆ ಎರಡೆಲೆ ಬೆಳೆಯುವಂತೆ ಮಾಡಬೇಕು. ನಮ್ಮ ವ್ಯಾಪಾರ ಉದ್ಯಮಗಳನ್ನು ಸರಿಯಾದ ಉದ್ಯೋಗಮಾರ್ಗದಲ್ಲಿ ನಡೆಸಿ, ಅವು ತಳ ಊರುವಂತೆ ಮಾಡಬೇಕು.. ಕೈಗಾರಿಕೆಗಳನ್ನು ವೃದ್ಧಿಪಡಿಸಬೇಕು. ಹೊಸದು ಕಟ್ಟಬೇಕು. ಹೊರಗಿನ ಪೈಪೋಟಿ ಎದುರಿಸಿ ನಿಲ್ಲುವಂತೆ ಮಾಡಬೇಕು. ಹೊಸ ಹೊಸ ದಾರಿ ತೆರೆದಂತೆಲ್ಲ, ಹೊಸ ಅಗತ್ಯ ಕಂಡುಬಂದಂತೆಲ್ಲ ಅದಕ್ಕೆ ನಾವು ಹೊಂದಿಕೊಳ್ಳಬೇಕು ......

ಈ ಕಾಲಕ್ಕೆ ನಮಗೆ ವೃತ್ತಿಶಿಕ್ಷಣ ಅಗತ್ಯ. ಆಗ ನಾವು ಪಡೆಯುವ ವಿದ್ಯಾಭ್ಯಾಸ, ಮಾಡುವ ಕೂಲಿ ಕೆಲಸಕ್ಕೂ ಘನವಾದ ಉದ್ಯೋಗದ ಸ್ಥಾನವನ್ನು ಗಳಿಸಿಕೊಡುತ್ತದೆ. ತಾನು ಮಾಡುವ ಕೆಲಸವನ್ನು ತಿಳಿವಳಿಕೆಯಿಂದ ಬುದ್ಧಿವಂತಿಕೆಯಿಂದ, ಕುಶಲತೆಯಿಂದ ಮಾಡಿದ್ದಾದರೆ ಕೆಲಸ ಏಳಿಗೆ ಹೊಂದುತ್ತದೆ. ಇಲ್ಲದಿದ್ದರೆ ಕೆಳಗೆ ಬೀಳುತ್ತದೆ. ಅದರಿಂದಲೇ ವೃತ್ತಿ, ಆ ವೃತ್ತಿಗೆ ಸಹಾಯಕವಾಗುವ ವಿದ್ಯೆ, ಇವೆರಡೂ ಜೊತೆಜೊತೆಗೇ ಇರಬೇಕು, ಎರಡೂ ಚೆನ್ನಾಗಬೇಕು. ಒಂದರಿಂದೊಂದಕ್ಕೆ ಸಹಾಯವಾಗಬೇಕು. ಹೆಚ್ಚು ವೃತ್ತಿಗಳು ಬೆಳೆದಂತೆ, ನಮಗೆ ಬೇಕಾದಂಥ ಸಾಮಾನನ್ನು ಚುನಾಯಿಸಿಕೊಳ್ಳುವ ಅವಕಾಶವೂ ಹೆಚ್ಚುತ್ತದೆ. ಮುಂದುವರಿಯುವ ಅವಕಾಶವೂ ಹೆಚ್ಚುತ್ತದೆ. ಆದರೆ ಈ ರೀತಿ ಮುಂದುವರಿಯುವ ಅವಕಾಶವನ್ನು ವಿದ್ಯೆ ಕಲಿತ ಯುವಕ, ಆ ಅನುಕೂಲ ಇಲ್ಲದವನಿಗಿಂತ ಹೆಚ್ಚಾಗಿ ಉಪಯೋಗಿಸಿಕೊಳ್ಳುತಾನೆ. ಯಾವಾಗ ಪ್ರತಿಯೊಂದು ಬಗೆಯ ಕೆಲಸ, ಬುದ್ಧಿಶಾಲಿಯಾದವನಿಂದ, ಆ ಒಗೆಯ ವೃತ್ತಿಯಲ್ಲಿ ಶಿಕ್ಷಣ ಹೊಂದಿದವನಿಂದ ಮಾಡಲ್ಪಡುವುದೋ ಅಂಥ ಕೆಲಸಕೂಡ ಚೆನ್ನಾಗಿರುತ್ತದೆ. ಅಂಥ ಕೆಲಸಕ್ಕೆ ಬೆಲೆಯೂ ಗೌರವವೂ ತಾನಾಗಿ ದೊರೆಯುತ್ತದೆ.

ಈ ಕ್ರಮವರಿತ ಶಿಕ್ಷಣದ ಫಲವಾಗಿಯೇ ಪಾಶ್ಚಾತ್ಯದೇಶಗಳಿಂದ ಬರುವ ಸಾಮಾನೆಲ್ಲ ಅಷ್ಟು ಸೊಗಸಾಗಿ ಕಾಣುತ್ತವೆ. ಇಂಗ್ಲೆಂಡಿನಲ್ಲಿ ಪ್ರತಿ ಹುಡುಗ ಹುಡುಗಿಗೂ ಹದಿನಾಲ್ಕು ವರ್ಷದವರೆಗೆ ಕಡ್ಡಾಯವಾಗಿ ವಿದ್ಯೆ ಕಲಿಸುತ್ತಾರೆ. ಆ ಮಟ್ಟವನ್ನು ಮುಟ್ಟಿದಮೇಲೆ ಹುಡುಗ ತನಗೆ ಸರಿ ತೋರುವಂಥ ವೃತ್ತಿಯೊಂದನ್ನು ಚುನಾಯಿಸುತ್ತಾನೆ. ಆ ಕ್ಷಣದಿಂದ ಅವನಿಗೆ ಒದಗುವ ಶಿಕ್ಷಣವೆಲ್ಲ ಅವನು ಚುನಾಯಿಸಿರುವ ವೃತ್ತಿಗೆ ಸರಿ ಹೋಗುವಂತೆ ನಡೆಯುತ್ತದೆ. ವ್ಯಾಪಾರದ ಮನೆಗೋ, ಒಂದು ಕಾರ್ಖಾನೆಗೋ ಸೇರಿಕೊಳ್ಳುತ್ತಾನೆ. ಯಜಮಾನನಿಗೂ ಹುಡುಗನಿಗೂ ನಡುವೆ ಒಂದು ಒಪ್ಪಂದವಾಗುತ್ತದೆ. ಹುಡುಗ ಏಳು ವರ್ಷಕಾಲ ಈ ರೀತಿ ಶಿಕ್ಷಣ ಪಡೆಯುತ್ತಾನೆ. ಕೊನೆಯಲ್ಲಿ ಸೊಗಸಾದ ಕೆಲಸಗಾರನಾಗಿ ಹೊರಗೆ ಬರುತ್ತಾನೆ. ಇದಕ್ಕೂ ಹೆಚ್ಚು ನೆಮ್ಮದಿಯಾಗಿರುವವರು ಮೆಟ್ರಿಕ್ಯುಲೇಷನ್ ಪರೀಕ್ಷೆಯವರೆಗೆ ತಮ್ಮ ಓದನ್ನು ಮುಂದುವರಿಸುತ್ತಾರೆ. ಆಮೇಲೆ ತಮ್ಮ ಬುದ್ಧಿಗನುಗುಣವಾದ ಉದ್ಯೋಗವನ್ನು ಚುನಾಯಿಸುತ್ತಾರೆ. ಹೀಗೆಯೇ ವಿಶ್ವವಿದ್ಯಾನಿಲಯವನ್ನು ಸೇರುವವರೆಗೂ; ಮೊದಲು ಉದ್ಯೋಗದ ಚುನಾವಣೆ ಆಗುತ್ತದೆ. ಆಮೇಲೆ ಓದು ಮುಂದುವರಿಯುತ್ತದೆ. ಸಾಧಾರಣವಾದ ಜ್ಞಾನ ಸಂಪಾದಿಸಿಕೊಂಡ ಹುಡುಗನಿಗೆ, ಮುಂದೆ ಓದುವ ಚೈತನ್ಯವಿಲ್ಲದಿದ್ದರೆ ಅಲ್ಲಿಗೇ ಕೈಬಿಟ್ಟು ತನಗೆ ಸರಿತೋರುವ ವೃತ್ತಿಯೊಂದಕ್ಕೆ ಸೇರುವ ಅವಕಾಶವಿರಬೇಕು. ನಮ್ಮ ಶಿಕ್ಷಣ ಕ್ರಮ ಈ ರೀತಿ ಮಾರ್ಪಾಡಾಗಬೇಕು. ಈ ರೀತಿಯ ಒಂದು ಏರ್ಪಾಡಿರುವುದರಿಂದಲೇ ಪಾಶ್ಚಾತ್ಯರಲ್ಲಿ ಅಷ್ಟು ವಿದ್ಯಾವಂತರಿರಲು, ಉತ್ತಮ ಕೆಲಸಗಾರರಿರಲು ಸಾಧ್ಯವಾಗಿದೆ. ಸಾಧಾರಣ ಮನುಷ್ಯನು ಕೂಡ ಎಷ್ಟೋ ವಿಷಯಗಳನ್ನು ತಿಳಿದುಕೊಂಡಿರುವುದಕ್ಕೆ ಇದೇ ಕಾರಣ. ಇಂಥದೇ ಒಂದು ಕ್ರಮ ನಮ್ಮ ದೇಶದಲ್ಲಿಯೂ ಆಚರಣೆಗೆ ಬಂದು, ಜನರ ತಿಳಿವಳಿಕೆ ಹೆಚ್ಚಿ, ಎಷ್ಟೋ ಬಗೆಯ ವೃತ್ತಿಗಳು ಹುಟ್ಟಿಕೊಂಡು, ಉತ್ತಮಗೊಂಡು, ಜನರು ಸಂಪಾದನೆಮಾಡುವ ಅವಕಾಶ ಹೆಚ್ಚಲೆಂದು ನಾನು ಆಶಿಸುತ್ತೇನೆ.

ನೀವು ಮಾಡಬೇಕೆಂದಿರುವ ಕೆಲಸವನ್ನು ಮೊದಲು ಚುನಾಯಿಸಿ ಕೊಳ್ಳಿ. ಎಲ್ಲವನ್ನೂ ಸರಿಯಾಗಿ ಆಲೋಚನೆಮಾಡಿ ಇದೇ ನನಗೆ ಸರಿ ಹೋಗುವ ಕೆಲಸ ಎಂದು ತಿಳಿದು ಚುನಾಯಿಸಿ. ಚುನಾಯಿಸಿದ ಕೆಲಸ ವನ್ನು ಆಮೇಲೆ ಪಟ್ಟಾಗಿ ಹಿಡಿಯಿರಿ. ಕೈಗೊಂಡ ಕೆಲಸದಲ್ಲಿ ಪ್ರವೀಣರಾಗಿ. ಪ್ರವೀಣರಾಗಲು ಬೇಕಾದ ಎಲ್ಲ ಶಿಕ್ಷಣ ಪಡೆದುಕೊಳ್ಳಿ ಅದನ್ನೇ ನಿಮ್ಮ ಜೀವನದ ಕೆಲಸವನ್ನಾಗಿ ಮಾಡಿಕೊಳ್ಳಿ. ನೀವು ಯಾವ ಕೆಲಸ ಚುನಾ ಯಿಸುತ್ತೀರೊ ಅದರಮೇಲೆಯೇ ನಿಮ್ಮ ಮತ್ತು ನಿಮ್ಮ ದೇಶದ ಏಳಿಗೆ ಅವಲಂಬಿಸಿರುತ್ತದೆ. ನೀವು ಇನ್ನೂ ವಿದ್ಯಾರ್ಥಿಗಳಾಗಿ ವಿದ್ಯಾರ್ಜನೆ ಮಾಡುತ್ತಿರುವಾಗ ಮುಂದೆ ಯಾವ ಕೆಲಸ ಮಾಡಬೇಕೆಂದಿದೀರೊ ಅದರ ಕಡೆಗೆ ಒಂದು ಕಣ್ಣಿರಲಿ. ಅವಕಾಶ ಸಿಕ್ಕ ಒಡನೆಯೇ ಕೆಲಸ ಕೈಕೊಂಡು ನಿಮ್ಮೆಲ್ಲ ಶಕ್ತಿ ಉತ್ಸಾಹದೊಡನೆ ಕೆಲಸಮಾಡಿ ನಿಮ್ಮ ಕೆಲಸದಲ್ಲಿ ಹೆಮ್ಮೆ ಪಟ್ಟುಕೊಳ್ಳಿ. ನಿಮ್ಮ ಕೆಲಸಕ್ಕೆ ಗೌರವಕೊಟ್ಟು ನಿಮ್ಮನ್ನು ಗೌರವಿಸಿಕೊಳ್ಳಿ. ಏಕೆಂದರೆ 'ಕಾಯವೇ ಕೈಲಾಸ', ಎಲ್ಲ ಸುಖಕ್ಕೆ, ಎಲ್ಲ ಅಭಿವೃದ್ಧಿಗೆ ಒಂದೇ ಆದ ಮಾರ್ಗ."

ತಂದೆ ಕೊಟ್ಟ ಎರಡನೆಯ ಉಪನ್ಯಾಸ ಔದ್ಯೋಗಿಕ ಶಿಕ್ಷಣಕ್ಕೆ ಸಂಬಂಧ ಪಟ್ಟದು. ಪಾಶ್ಚಾತ್ಯರು ಔದ್ಯೋಗಿಕ ಶಿಕ್ಷಣವನ್ನು ಯಾವರೀತಿಯಲ್ಲಿ ಕೊಡುತ್ತಿದಾರೆ ಎನ್ನುವ ವಿಚಾರ ಈ ಉಪನ್ಯಾಸದಲ್ಲಿದೆ. ನಮಗೂ ಪಾಶ್ಚಾ ತ್ಯರಿಗೂ ಇರುವ ವ್ಯತ್ಯಾಸ, ನಮ್ಮ ಅವರ ಧ್ಯೇಯಗಳ ತುಲನಾತ್ಮಕ ಪರಿಶೀಲನೆ ಇದೆ. ಯಾವ ಬಗೆಯ ಔದ್ಯೋಗಿಕ ಶಿಕ್ಷಣ ನಮಗೆ ಅಗತ್ಯ ಎನ್ನುವ ವಿಚಾರ ಕೊನೆಯಲ್ಲಿ ಇದೆ. ಈ ಕೊನೆಯ ಭಾಗದ ಸಾರಾಂಶ ವನ್ನು ಇಲ್ಲಿ ಕೊಟ್ಟದ್ದೇನೆ –

"ಪಾಶ್ಚಾತ್ಯರಲ್ಲಿ ಬಹು ಬಗೆಯ ವೃತ್ತಿಗಳು, ಕೆಲಸದ ಹಂಚಿಕೆ, ಇರು ವುದರಿಂದ ಈ ಎಲ್ಲ ಬಗೆಯ ವೃತ್ತಿಗಳಿಗೂ ಸರಿಯಾದವರನ್ನು ತರಪೇತು ಮಾಡುವ ಅಗತ್ಯ ಕೂಡ ಬಹಳವಾಗಿದೆ. ನಾವು ಯಾವುದನ್ನು ಕೀಳಾದ ಕೆಲಸ ಎಂದು ಅಲ್ಲಗಳೆಯುತೇವೆಯೋ ಅಂಥ ಕೆಲಸಗಳೇ ಇಲ್ಲಿನ ದೊಡ್ಡ ದೊಡ್ಡ ಔದ್ಯೋಗಿಕ ಶಾಲೆಗಳ ಪಾಠಕ್ರಮದಲ್ಲಿ ಸೇರಿವೆ. ಮೋಟಿನ ಸುತ್ತ

ನಿಂತು ಊಟ ಉಪಚಾರ ನೋಡಿಕೊಳ್ಳುವುದು, ಕೋಚುಗಾಡಿ ಓಡಿಸುವುದು, ರೊಟ್ಟಿ ಸುಡುವುದು, ಮಾಂಸ ಕತ್ತರಿಸುವುದು, ಹೊಗೆಕಂಡಿಗಳನ್ನು ಚೊಕ್ಕಟ ಮಾಡುವುದು, ಕೂದಲು ಕತ್ತರಿಸುವುದು, ಈ ರೀತಿ ಅತಿ ಸಾಮಾನ್ಯವಾಗಿ ನಮಗೆ ಕಾಣುವ ವೃತ್ತಿಗಳಲ್ಲೂ ಇಲ್ಲಿ ಉತ್ತಮ ಶಿಕ್ಷಣ ದೊರೆಯುತ್ತದೆ. ಈ ಶಿಕ್ಷಣವಾಗಲಿ ಕೆಲಸಕ್ಕೆ ಬರದ ರೀತಿಯಲ್ಲಿ ನಡೆಯುವುದಿಲ್ಲ. ಕೊಡುವ ಎಲ್ಲ ಶಿಕ್ಷಣವೂ ಅತಿ ವಿವರವಾಗಿ, ಎಲ್ಲ ಆಧುನಿಕ ಸಲಕರಣೆಗಳಿಂದೊಡಗೂಡಿ ಕೊಡಲ್ಪಡುತ್ತದೆ. ಇಂಥ ಸಾಮಾನ್ಯ ವೃತ್ತಿಗಳಿಗೇ ಇಷ್ಟು ಮುತುವರ್ಜಿಯಿಂದ ಶಿಕ್ಷಣ ದೊರೆಯುತ್ತಿಂದಮೇಲೆ ಮಿಕ್ಕ ಲಲಿತ ಕಲೆಗಳಲ್ಲಿ, ಕುಶಲ ಕೈಗಾರಿಕೆಗಳಲ್ಲಿ ಯಾವ ರೀತಿಯ ವಿವರವಾದ ಶಿಕ್ಷಣ ದೊರೆಯುತ್ತದೆ ನೀವೇ ಊಹಿಸಿಕೊಳ್ಳಿ. ಗ್ರೇಟ್‌ಬ್ರಿಟನಿನಲ್ಲಿ ಔದ್ಯೋಗಿಕ ಶಾಲೆ ಒಂದಾದರೂ ಇಲ್ಲದ ಪಟ್ಟಣವೇ ಇಲ್ಲ. ಈ ಶಾಲೆಗಳಾದರೋ ಅತ್ಯಗಾಧವಾದುವು. ಪ್ರತಿಯೊಂದು ಸಲಕರಣೆಯನ್ನು ಒಳಗೊಂಡಿರುವಂಥವು. ಲೋಹದ ಕೆಲಸ, ಬುಕ್ಕು ಬೈಂಡುಮಾಡುವುದು, ಜೋಡು ಹೊಲಿಯುವ ಕೆಲಸ, ಕಂಚುಗಾರಿಕೆ, ಮರಗೆಲಸ, ಕಲ್ಲು, ದಂತದಮೇಲಿನ ಕೆತ್ತನೆಯ ಕೆಲಸ, ವಜ್ರಕಟ್ಟುವುದು, ಚಿನಿವಾರನ ಕೆಲಸ, ಔಷಧಿ ಬೆರೆಸುವ ಕೆಲಸ ಇತ್ಯಾದಿ, ಇತ್ಯಾದಿ, ದಿನದಿನ ನಮ್ಮ ಉಪಯೋಗಕ್ಕೆ ಬರುವ ಎಲ್ಲ ಕೆಲಸಗಳಲ್ಲಿಯೂ ಪಾಶ್ಚಾತ್ಯರು ನಮಗಿಂತ ಎಷ್ಟೊ ಮುಂದುವರಿದಿರುವುದೂ, ಅಷ್ಟೇ ಹಿಂದೆ ನಾವು ಉಳಿದಿರುವುದೂ ಆಶ್ಚರ್ಯವಾಗೇನೂ ತೋರುವುದಿಲ್ಲ.

ವೃತ್ತಿ, ಉದ್ಯೋಗಗಳನ್ನು ಬಹುಮುಖವಾಗಿ ಬೆಳೆಸುತ್ತ, ಅವುಗಳಲ್ಲಿ ಶಿಕ್ಷಣ ಕೊಡುತ್ತಿರುವಾಗ, ಈ ಎಲ್ಲವನ್ನು ಒಟ್ಟುಗೂಡಿಸಿ, ವ್ಯವಸ್ಥೆಗೊಳಿಸಿ ಕೆಲಸ ಮಾಡಿಸುವುದನ್ನು, ಪಡುವ ಕಷ್ಟಕ್ಕೆ ಹಿರಿದಾದ ಫಲವನ್ನು ತೆಗೆದುಕೊಳ್ಳುವುದನ್ನು ಅವರು ಮರೆತಿಲ್ಲ. ಇಲ್ಲಿನ ಪ್ರತಿ ಗಂಡು, ಪ್ರತಿ ಹೆಣ್ಣು, ಒಗ್ಗಟ್ಟಿನಿಂದ ಕೆಲಸಮಾಡುವುದರಲ್ಲಿ ಪಳಗಿರುತ್ತಾರೆ. ಪ್ರತಿ ಮನೆಯಲ್ಲಿ, ಕಾರ್ಖಾನೆಯಲ್ಲಿ, ವ್ಯಾಪಾರ ಸ್ಥಳದಲ್ಲಿ, ಶಿಸ್ತಿನಿಂದ ಒಗ್ಗಟ್ಟಿನಿಂದ ಸುಲಭವಾಗಿ ಕೆಲಸ ನಡೆಯುವುದನ್ನು ನೋಡಿ ಆಶ್ಚರ್ಯಪಟ್ಟಿದ್ದೇನೆ. ನಮಗೆ ಪಾಶ್ಚಾತ್ಯರ ರೀತಿಯಲ್ಲಿ ಬಟ್ಟೆ ಹಾಕಿಕೊಳ್ಳುವುದು, ಊಟಮಾಡುವುದು, ಕುಳಿತುಕೊಳ್ಳುವುದು, ಮಲಗಲು ಹೋಗುವುದು, ಇನ್ನೊಬ್ಬರನ್ನು ನೋಡ

ಹೋಗುವುದು ಇವೆಲ್ಲವೂ ಬಹು ಬೇಸರದ ಕೆಲಸಗಳಾಗಿ ತೋರುತ್ತವೆ. ಇದಕ್ಕೆ ಕಾರಣ ನಮ್ಮಲ್ಲಿ ಶಿಸ್ತು ಸರಿಯಾಗಿಲ್ಲ. ನಾವು ಹಿಂದಿನಿಂದಲೂ ಕ್ರಮ, ಶಿಸ್ತು ವ್ಯವಸ್ಥೆ ಇವುಗಳನ್ನು ಮೆಚ್ಚಿ ಅದರಂತೆ ನಡೆದವರಲ್ಲ. ಅದನ್ನು ನಾವು ಒಪ್ಪಿಕೊಳ್ಳಬೇಕು. ನಮ್ಮ ಅಸಡ್ಡೆ ನಾವು ದಿನದಿನ ಮಾಡುತ್ತಿರುವ ಕಾರ್ಯಗಳಲ್ಲೆ ಎದ್ದು ತೋರುತ್ತದೆ. ಇದು ದೊಡ್ಡ ಕುಂದು. ನಮ್ಮ ಮನೆಗಳನ್ನು ಸುಖದ ಆವಾಸಗಳನ್ನಾಗಿ ಮಾಡಬೇಕಾದರೆ, ಪರರಿಂದ ನಾವು ಗೌರವಿಸಿಕೊಳ್ಳಬೇಕಾದರೆ, ನಮ್ಮ ವ್ಯಾಪಾರ ಉದ್ಯೋಗಗಳನ್ನು ಸರಿಯಾಗಿ ನಡೆಸಿಕೊಂಡು ಹೋಗಬೇಕಾದರೆ, ಈ ಅವ್ಯವಸ್ಥೆಯನ್ನು ಹೋಗಲಾಡಿಸಬೇಕು.

ಪಾಶ್ಚಾತ್ಯರು ಕೈಗೊಂಡ ಕಾರ್ಯವನ್ನು ವ್ಯವಸ್ಥಿತ ಕ್ರಮದಲ್ಲಿ ನಡೆಸುವುದಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಡುತ್ತಾರೆ. ಒಂದು ವ್ಯಾಪಾರ ಉದ್ಯಮವನ್ನು ಮೊದಲು ಮಾಡಿದರೆ, ಆ ಉದ್ಯಮದಲ್ಲಿ ನುರಿತ ಪ್ರವೀಣರನ್ನು ಕರೆದು ಅವರಿಂದ ಸಲಹೆ ತೆಗೆದುಕೊಳ್ಳುತ್ತಾರೆ. ಎಷ್ಟೇ ಕಷ್ಟವಾಗಲಿ, ಎಷ್ಟೇ ಹಣ ವೆಚ್ಚವಾಗಲಿ, ಎಲ್ಲ ವ್ಯವಸ್ಥಿತ ಕ್ರಮ ಕೈಗೊಂಡೇ ವ್ಯಾಪಾರ ಪ್ರಾರಂಭಿಸುತ್ತಾರೆ. ಉದಾಹರಣೆಗೆ ಅಂಗಡಿ ಇಡಬೇಕೆನ್ನುವವನು ಯಾವನೂ ತನ್ನ ಸಾಮಾನು ಪ್ರದರ್ಶಿಸುವುದಕ್ಕೆ ಸರಿಯಾದ ತೋರುಕಿಟಕಿಗಳಿಲ್ಲದೆ, ಹಣಕಾಸಿನ ಲೆಕ್ಕಕ್ಕೆ ಒಬ್ಬ ಲೆಕ್ಕದವನಿಲ್ಲದೆ, ಮಾರಾಟಮಾಡುವುದಕ್ಕೆ ಮಾರಾಟಗಾರನ ಸಹಾಯವಿಲ್ಲದೆ, ಅಂಗಡಿಗೆ ಬೇಕಾದ ಎಲ್ಲ ಸಾಮಾನು ಸರಂಜಾಮು, ಆಳುಕಾಳು, ಇವು ಯಾವುವೂ ಇಲ್ಲದೆ ಯಾವನೂ ವ್ಯಾಪಾರ ಮಾಡ ತೊಡಗುವುದಿಲ್ಲ. ಬೇಕಾದ ಬಂಡವಾಳ ಇರದ ಹೊರತು ಆಕಡೆ ಯೋಚಿಸುವುದು ಕೂಡ ಇಲ್ಲ. ವ್ಯಾಪಾರಮಾಡಬೇಕೆನ್ನುವವನು, ಒಂದು ಟೈಪ್‌ರೈಟರ್, ಒಬ್ಬ ಗುಮಾಸ್ತ, ಸ್ವಂತ ಕಾರ್ಯದರ್ಶಿ, ಪತ್ರಿಕಾ ಪ್ರಕಟನೆ ಕೆಲಸ ಇವನ್ನೆಲ್ಲ ಬಿಟ್ಟುಬಿಡುವುದಿಲ್ಲ. ಇದಕ್ಕೆಲ್ಲ ಸಿದ್ಧಮಾಡಿಕೊಂಡೇ ವ್ಯಾಪಾರ ಪ್ರಾರಂಭಿಸುತ್ತಾನೆ. ತನಗೆ ಬೇಕಾಗುವುದೇನು ಎನ್ನುವುದನ್ನು ಊಹಿಸುತ್ತ ಹೋಗುವುದಿಲ್ಲ. ಮುಂಚೆಯೇ ತನಗೆ ಬೇಕಾದುದು ಯಾವುದು, ಯಾವರೀತಿ ಕೆಲಸಮಾಡಬೇಕು, ಇವೆಲ್ಲವನ್ನು ಗೊತ್ತುಮಾಡಿಕೊಂಡೇ ವ್ಯಾಪಾರಕ್ಕೆ ಕೈಹಾಕುತ್ತಾನೆ........ ನಮ್ಮವರ ವಿಷಯವಾಗಿಯೂ ಇದೇ

ಹೇಳೋಣ ಎನಿಸುತ್ತದೆ. ಆದರೆ ಈಚೆಗೆ ಎಷ್ಟೋ ನಿದರ್ಶನಗಳು ನನ್ನ ಕಣ್ಣಿಗೆ ಬಿದ್ದಿವೆ. ವ್ಯಾಪಾರ ಉದ್ಯಮಗಳಲ್ಲಿ ನಾವಿನ್ನೂ ಹಸುಮಕ್ಕಳಾಗಿದ್ದೇವೆ. ವ್ಯಾಪಾರ ಉದ್ಯಮಗಳಲ್ಲಿ ಕತ್ತಲಲ್ಲಿ ಧುಮುಕುವ ಅವಿವೇಕತನವನ್ನು ಕಂಡುಕೊಳ್ಳಬೇಕಾದರೆ ನಾವಿನ್ನೂ ಬಹಳದೂರ ಹೋಗಬೇಕಾಗಿದೆ.

ಮುದ್ರಣ ಕಲೆಯನ್ನು ಅಭ್ಯಾಸಮಾಡುವುದಕ್ಕಾಗಿ ದೊಡ್ಡದೊಂದು ಮುದ್ರಣ ಕಾರ್ಖಾನೆಯಲ್ಲಿ ಕೆಲಸಮಾಡುವ ಸುಯೋಗ ನನಗಿತ್ತು. ಅಲ್ಲಿ ನಾನು ಕಂಡುದೆಲ್ಲವನ್ನು ವಿವರಿಸೋಣ ಎನಿಸುತ್ತದೆ. ಮೊದಲು ಮೇನೇಜಿಂಗ್ ಡೈರೆಕ್ಟರ ರೂಮಿಗೆ ಹೋದೆ ಅಚ್ಚುಕಟ್ಟಾಗಿ ಬಟ್ಟೆಹಾಕಿಕೊಂಡಿದ್ದ ನಗುಮುಖದ ವಯಸ್ಕ ಮಹನೀಯರು ಮೇಜಿನ ಬಳಿ ಸುತ್ತುಕುರ್ಚಿಯೊಂದರಲ್ಲಿ ಕುಳಿತುದನ್ನು ಕಂಡೆ. ಮೇಜಿನ ತುಂಬ ಅವರ ಕೆಲಸಕ್ಕೆ ಸಂಬಂಧಿಸಿದ ಕಾಗದ ಪತ್ರಗಳೇ ತುಂಬಿದ್ದುವು. ಅನಿವಾರ್ಯವಾದ ಟೆಲಿಫೋನ್ ಒಂದು ಮೇಜಿನಮೇಲಿತ್ತು. ಅವರ ಬಲಕ್ಕೆ ಇನ್ನೊಂದು ಟೆಲಿಫೋನ್ ಇತ್ತು. ಮೇಜಿನಮೇಲಿದ್ದ ಟೆಲಿಫೋನು ತಮ್ಮ ಕಾರ್ಖಾನೆಯ ಬೇರೆ ಬೇರೆ ಇಲಾಖೆಗಳಿಗೆ ಸಂಬಂಧ ಕಲ್ಪಿಸುತ್ತಿತ್ತು. ಇನ್ನೊಂದು ಹೊರಗಿನ ನಗರಕ್ಕೆ ಸಂಬಂಧ ಕಲ್ಪಿಸುತ್ತಿತ್ತು. ನಮ್ಮನ್ನು ಕಂಡು ಟೆಲಿಫೋನಿನಲ್ಲಿ ಒಂದು ನಂಬರು ಒತ್ತಿ ಮಾತನಾಡಿದರು. ಕೆಲವೇ ನಿಮಿಷಗಳಲ್ಲಿ ಒಬ್ಬ ಇಲಾಖೆಯ ಮುಖ್ಯಸ್ಥ ಬಂದುನಿಂತ. ಆತನ ವಶಕ್ಕೆ ನಮ್ಮನ್ನು ಒಪ್ಪಿಸಿದರು .. ಒಂದು ದಿನ ಇಲ್ಲಿನ ಮೊದುಳಿನಂತಿದ್ದ ಆಫೀಸು ರೂಮಿಗೆ ಹೋದೆ. ಅಲ್ಲಿ ಕುರ್ಚಿಗಳೂ, ಗುಮಾಸ್ತರಿಗೆ ಸರಿಯಾದ ಮೇಜುಗಳೂ ಇಲ್ಲದುದನ್ನು ಕಂಡು ನನಗೆ ತೀರ ಆಶ್ಚರ್ಯವಾಯಿತು. ಸೊಗಸಾಗಿ ಬಟ್ಟೆ ಹಾಕಿಕೊಂಡಿರುವ ಹತ್ತಾರು ಜನ ಏನೊ ವಿಶೇಷ ಸಂಗತಿ ನಡೆದಂತೆ ಹೆಚ್ಚು ಚಟುವಟಿಕೆಯಿಂದ ಓಡಾಡುತಿದ್ದರು. ಈ ಬಗೆಯ ಚಟುವಟಿಕೆ ನಾನು ಪ್ರೆಸ್ಸಿನಲ್ಲಿದ್ದ ಪ್ರತಿ ದಿವಸವೂ ಕಾಣಬರುತ್ತಿತ್ತು. ಆ ರೂಮಿನಲ್ಲಿ ಎರಡು ಮೂರು ಟೆಲಿಫೋನುಗಳಿದ್ದವು. ಪ್ರತಿಕ್ಷಣ ಒಬ್ಬರು ತಪ್ಪ ಒಬ್ಬರು ಗಂಟೆ ಬಾರಿಸುತ್ತ ಅದರಲ್ಲಿ ಮಾತನಾಡುತ್ತಲೇ ಇದ್ದರು. ಪ್ರತಿ ಗುಮಾಸ್ತನಿಗೂ ಎತ್ತರವಾದೊಂದು ಸ್ಟೂಲು, ಎತ್ತರವಾದ ಇಳಿಮೇಜು ಇತ್ತು. ಗುಮಾ

ಸ್ತನು ತನ್ನ ಬಹುಮಟ್ಟಿನ ಕೆಲಸವನ್ನೆಲ್ಲ ನಿಂತುಕೊಂಡೇ ಮಾಡುತ್ತಿದ್ದ. ಅವನು ಕುಳಿತದ್ದನ್ನೆ ಕಾಣೆ. ಟೈಪು ಮಾಡುವವರೆಲ್ಲರೂ ಹೆಂಗಸರು. ಪ್ರತಿಯೊಬ್ಬರೂ ಒಪ್ಪವಾಗಿ ಲಕ್ಷಣವಾಗಿದ್ದರು. ರಿಕಾರ್ಡು ಇಲಾಖೆ ಮಾದರಿಯಾಗಿತ್ತು. ಇಲ್ಲಿದ್ದವರೆಲ್ಲರೂ ಹೆಂಗಸರು. ತಮ್ಮ ಕೆಲಸಗಳಲ್ಲಿ ಪೂರ್ತಿ ಮಗ್ನರಾಗಿದ್ದರು. ಬರಿಯ ಆಫೀಸೇ ಆದರೂ ಅಲ್ಲಿದ್ದ ಜೀವ, ಅಲ್ಲಿನ ಚಟುವಟಿಕೆ ಕಂಡು ನನಗೆ ಅತಿ ಸೋಜಿಗವಾಯಿತು. ಒಳಗೆ ಕೆಲಸದ ಮನೆಗಳಲ್ಲಿ ಎಲ್ಲೆಲ್ಲಿಯೂ ಕೆಲಸದ ಒತ್ತಡ ಕಾಣಬರುತಿತ್ತು. ಕಾಲವನ್ನು ಗುರುತುಮಾಡುವ ಗಂಟೆಗಳು ಪ್ರತಿ ನಿಮಿಷವೂ ಅಮೂಲ್ಯ ಎಂದುಸಾರುತಿದ್ದುವು. ಕೆಲಸಗಾರರೆಲ್ಲರೂ ಯಾವಾಗಲೂ ಕೆಲಸದಲ್ಲಿ ನಿರತರಾಗಿದ್ದರು. ಎಲ್ಲರೂ ಹಸನ್ಮುಖಿಗಳಾಗಿದ್ದರು. ಚೊಕ್ಕಟವಾದ ಉಡುಪಿನಲ್ಲಿ ಲಕ್ಷಣವಾಗಿ ಕಾಣುತ್ತಿದ್ದರು. ಅವರ ಮಾತಿನಲ್ಲಿ ನಯ ವಿನಯ ಕಂಡುಬರುತಿತ್ತು. ಅವರೊಂದಿಗೆ ಕೆಲಸಮಾಡಲು ಎಷ್ಟೊ ಸಂತೋಷವಾಗುತಿತ್ತು....ಪ್ರಾಯಶಃ ಅವರೆಲ್ಲರಿಗೂ ಉತ್ತಮ ವಿದ್ಯಾಭ್ಯಾಸ ದೊರೆತಿತ್ತು. ದಿನದ ವರ್ತಮಾನವೆಲ್ಲ ಚೆನ್ನಾಗಿ ತಿಳಿದಿರುತಿತ್ತು. ಮೇಲ್ವಿಚಾರಕರನ್ನು ಕಂಡರೆ ಭಯವಿತ್ತು, ಗೌರವವಿತ್ತು. ಕೆಲಸಗಾರರನ್ನು ಒತ್ತಾಯಪಡಿಸಿ, ಕೆಲಸಮಾಡಿಸಬೇಕಾಗುವ ಅಥವಾ ಮಾಡಿದ ಕೆಲಸದಲ್ಲಿ ತಪ್ಪು ಕಂಡುಹಿಡಿಯುವ ಸನ್ನಿವೇಶ ಇರುತಿರಲಿಲ್ಲ. ಪ್ರತಿಯೊಬ್ಬನಿಗೂ ತನ್ನ ಜವಾಬ್ದಾರಿ ತಿಳಿದಿತ್ತು. ತಮ್ಮ ಯಜಮಾನನ ಕಾಲವನ್ನು ಅನ್ಯಾಯಮಾಡಬಾರದೆಂದು ಅವರು ನನಗೆ ಹೇಳುತಿದ್ದರು....ಅವರು ಯಾರೂ ಕೆಲಸದಲ್ಲಿ ಬೇಸರಪಟ್ಟಂತೆ ಕಾಣಲಿಲ್ಲ. ತಮ್ಮ ಕೆಲಸದಲ್ಲಿ ಉತ್ಸಾಹಪಡುವಂತೆ ಕಂಡಿತು........

ಪಾಶ್ಚಾತ್ಯರ ಉದ್ಯೋಗಕ್ರಮವನ್ನು ಗಮನಿಸುವಾಗ ನನಗೆ ಇಲ್ಲಿನ ಬ್ಯಾಂಕು, ಪೋಸ್ಟು ಆಫೀಸು, ಷಾಪು, ಕಾರ್ಖಾನೆ ಇವುಗಳಲ್ಲಿ ಕೆಲಸವನ್ನು ಬೇಗ ಮುಗಿಸಿಕೊಂಡು ಹೋಗಲು ಮಾಡಿರುವ ಅನುಕೂಲಗಳನ್ನು ಕಂಡು ಆದಷ್ಟು ಪರಿಣಾಮ ಬೇರೆ ಯಾವುದರಿಂದಲೂ ಆಗಲಿಲ್ಲ. ಇಲ್ಲಿನ ಬ್ಯಾಂಕುಗಳು ಎಂಥ ಭವ್ಯವಾದ ಕಟ್ಟಡಗಳು! ಎಷ್ಟುಸ್ವಚ್ಛ, ಎಷ್ಟು ಶುಭ್ರವಾದುವು. ಇವುಗಳಲ್ಲಿ ಕೆಲಸವಿರುವವರು ಸೊಗಸಾದ ತಿರುಗು ಬಾಗಿಲುಗಳನ್ನು ದಾಟಿ

ಬಂದು ಭವ್ಯವಾದ ಹಾಲಿನೊಳಗೆ ಬರುತ್ತಾರೆ. ಅಲ್ಲಿ ಸಾಲುಸಾಲಾಗಿ ಬರೆಯುವ ಎಲ್ಲ ಸಲಕರಣೆಗಳನ್ನೊಳಗೊಂಡ ಮೇಜಿನ ಎದುರು ಕುಳಿತು ಚೆಕ್ಕುಗಳನ್ನು ಬರೆದು ಕಿಟಕಿಯ ಮೂಲಕ ಕೊಡುತ್ತಾರೆ. ಒಂದು ಪೌಂಡಾಗಲಿ, ಸಾವಿರ ಪೌಂಡಾಗಲಿ ಒಂದು ಕ್ಷಣದಲ್ಲಿ ಪಾವತಿಯಾಗುತ್ತದೆ. ನಮ್ಮ ಕೆಲಸವೆಲ್ಲ ಒಂದೆರಡು ಕ್ಷಣದಲ್ಲಿ ಮುಗಿದುಹೋಗುತ್ತದೆ. ಇಲ್ಲಿನ ಪ್ರಸಿದ್ಧ ಬ್ಯಾಂಕೊಂದರಲ್ಲಿ ನಾನು ದುಡ್ಡು ತೆಗೆದುಕೊಳ್ಳುತಿದ್ದೆ. ನಾನು ಅಲ್ಲಿಗೆ ಹೋಗಿರುವ ಎಷ್ಟೋ ಸಂದರ್ಭಗಳಲ್ಲಿ ಒಂದುಸಲವಾದರೂ ನನ್ನ ಕೆಲಸ ಮುಗಿಯಲು ಎರಡು ನಿಮಿಷಗಳಿಗಿಂತ ಹೆಚ್ಚು ಕಾಲ ಹಿಡಿದಂತೆ ಕಾಣೆ. ಹಿಂದೊಮ್ಮೆ ಕೆಲವೇ ರೂಪಾಯಿಗಳನ್ನು ನಮ್ಮ ಬೆಂಗಳೂರ ಟ್ರೆಜರಿಯಿಂದ ತರಲು ಇಡೀ ಒಂದು ದಿನವನ್ನೆ ವ್ಯಯಿಸಬೇಕಾದ್ದನ್ನು ಕಂಡ ನನಗೆ, ಈ ಹೊಸ ಅನುಭವ ಬ್ರಿಟಿಷರ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಅತಿಯಾದ ಗೌರವವನ್ನು ಹುಟ್ಟಿಸಿತು. ಇಲ್ಲಿನ ಪೋಸ್ಟಾಫೀಸುಗಳಲ್ಲಿಯೂ ಇದೇರೀತಿ ಒಳಕ್ಕೆ ಹೋಗುತ್ತೇವೆ, ನಾವು ಬರೆಯುವುದು ಏನಿದೆಯೋ, ಮನಿಆರ್ಡರೋ, ಟೆಲಿಗ್ರಾಮೋ, ಅದನ್ನು ಅಲ್ಲಿರುವ ಡೆಸ್ಕಿನಮೇಲೆ ಬರೆದು, ಪಕ್ಕದಲ್ಲಿರುವ ಮೆಷೀನಿನ ಸಹಾಯದಿಂದ ಸ್ಟಾಂಪುಗಳನ್ನು ಕೊಂಡುಕೊಂಡು ಬರುತ್ತೇವೆ. ಒಳಕ್ಕೆ ಹೋದ, ಕೆಲಸಮುಗಿಸಿಕೊಂಡ, ಹೊರಕ್ಕೆ ಬಂದ, ಅಷ್ಟೆ. ಇಂಥ ವ್ಯವಸ್ಥೆ ಕಂಡು ನನಗೆ ಬಹಳ ಮೆಚ್ಚಿಕೆ. ಧೂಳು ಮುಚ್ಚಿರುವ ವರಾಂಡಗಳಲ್ಲಿ ನಿಂತು, ಜನಗಳೊಡನೆ ಗುದ್ದಾಡಿ, ಒಂದು ಸ್ಟಾಂಪು ತರಲು ಅರ್ಧ ದಿನವನ್ನು ಕಳೆಯಬೇಕಾಗುವ ಅವಸ್ಥೆಗಿಂತ ಇದು ಎಷ್ಟೊ ವಾಸಿ.

ಆದಕಾರಣವೇ ನಮ್ಮದೇಶ ಮಿಕ್ಕ ಪಾಶ್ಚಾತ್ಯದೇಶಗಳ ಪಂಕ್ತಿಯಲ್ಲಿ ಸರಿಸಮನಾಗಿ ನಿಲ್ಲುವಂತೆ ಮಾಡಬೇಕಾದರೆ, ಮುಂದುವರಿದ ಜನಾಂಗ ಗಳಲ್ಲಿ ನಮ್ಮದೇ ಸ್ಥಾನವನ್ನು ಗಳಿಸಿಕೊಂಡು ನಿಲ್ಲಬೇಕಾದರೆ, ನಾವೂ, ಪಾಶ್ಚಾತ್ಯರು ಅನುಸರಿಸುತ್ತಿರುವ, ಇಂಥ ಒಳ್ಳೆಯ ಫಲವನ್ನು ಕೊಡು ತ್ತಿರುವ ಉದ್ಯೋಗಕ್ರಮವನ್ನು ಅಭ್ಯಾಸಮಾಡಬೇಕು."

ಮೇಲಿನ ಎರಡು ಉಪನ್ಯಾಸಗಳನ್ನು ಕೊಟ್ಟು ಈಗ ಸುಮಾರು ಮುವ್ವತ್ತು ವರ್ಷಗಳು ಕಳೆದುಹೋಗಿವೆ. ಈ ಮುವ್ವತ್ತು ವರ್ಷಗಳಲ್ಲಿ

ಏನೇನೊ ಬದಲಾವಣೆಗಳಾಗಿವೆ. ಆದರೆ ಈ ಉಪನ್ಯಾಸದಲ್ಲಿ ಪ್ರಸ್ತಾಪ ಮಾಡಿರುವ ವಿಷಯಗಳಲ್ಲಿ ಅಂಥದೇನೂ ಬದಲಾವಣೆ ಆಗಿರುವಂತೆ ಕಾಣ ಲಿಲ್ಲ. ನಮ್ಮ ವಿದ್ಯಾಭ್ಯಾಸ ಈಗಲೂ ಗೊತ್ತುಗುರಿಯಿಲ್ಲದ ರೀತಿಯಲ್ಲಿಯೇ ನಡೆಯುತ್ತಿದೆ. ನಮ್ಮ ವ್ಯಾಪಾರಗಾರರು, ನಮ್ಮ ಸಂಸ್ಥೆಗಳು, ಅನುಸರಿ ಸುತ್ತಿರುವ ಕ್ರಮ ಸರಿಯಾದ ಉದ್ಯೋಗಕ್ರಮ ಎಂದು ಹೇಳಲು ಕಷ್ಟ ತೋರುತ್ತಿದೆ. ನಮ್ಮ ಟ್ರೆಜರಿಗಳು, ಬ್ಯಾಂಕುಗಳಲ್ಲಿ ನಿಮಿಷ ಹೋಗಲಿ ಒಂದು ಗಂಟೆಯೊಳಗಾದರೂ ಕೆಲಸ ಮುಗಿಸಿಕೊಂಡು ಹೊರಗೆ ಬರುವ ಕಾಲವಾದರೂ ಬಂದೀತೆ ಎಂದು ನಿರೀಕ್ಷಿಸಬೇಕಾಗಿದೆ. ನಾವು ಏನೂ ಮುಂದುವರಿದಂತೆಯೇ ಕಾಣುವುದಿಲ್ಲ. ಎಲ್ಲಿದ್ದೆವೋ ಅಲ್ಲಿಯೇ ಇದ್ದಂತೆ ತೋರುತ್ತದೆ.

## ಸಿವಿಕ್ ಸಂಘ

ತಂದೆ ತಮ್ಮ ವಿದೇಶದ ವ್ಯಾಸಂಗವನ್ನು ಮುಗಿಸಿಕೊಂಡು ಸ್ವದೇಶಕ್ಕೆ ಹಿಂದಿರುಗಿದ ಕಾಲಕ್ಕೆ ಮೈಸೂರಿನಲ್ಲಿ ಅನೇಕ ಹೊಸ ಸಂಸ್ಥೆಗಳು ಹುಟ್ಟಿಕೊಂಡಿದ್ದುವು. ಇವುಗಳ ಹುಟ್ಟಿಗೆ ಕಾರಣರಾದವರು ಆಗ ದಿವಾನರಾಗಿದ್ದ ವಿಶ್ವೇಶ್ವರಯ್ಯನವರು. ವಿದೇಶವನ್ನೆಲ್ಲ ಸುತ್ತಾಡಿ ಆಗತಾನೆ ಬಂದಿದ್ದ ಶ್ರೀಮದ್ಯುವರಾಜರಿಗೂ ತಾವು ಕಂಡು ಮೆಚ್ಚಿದುದೆಲ್ಲವನ್ನೂ ಕಾರ್ಯರೂಪಕ್ಕೆ ತರುವ ಉತ್ಸಾಹವಿತ್ತು. ಹೊಸಸಂಸ್ಥೆಗಳ ಹುಟ್ಟಿಗೆ ಈ ಇಬ್ಬರು ಮಹನೀಯರೂ ಕಾರಣರಾಗಿದ್ದರು. ಹೀಗೆ ಹುಟ್ಟಿ ಬಂದ ಸಂಸ್ಥೆಗಳಲ್ಲಿ ಸಿವಿಕ್ ಮತ್ತು ಸೋಷಿಯಲ್ ಪ್ರೋಗ್ರೆಸ್ ಅಸೋಸಿಯೇಷನ್, ಕನ್ನಡ ಸಾಹಿತ್ಯ ಪರಿಷತ್ತು, ಮಿಥಿಕ್ ಸೊಸೈಟಿ ಇವು ಕೆಲವು. ಜನರ ಸಾಮಾಜಿಕ, ಆರ್ಥಿಕ ಸ್ಥಿತಿಯನ್ನು ಸುಧಾರಿಸಲೆಂದು, ಜನರಲ್ಲಿ ತಮ್ಮ ನಾಡು ನುಡಿಗಳ ವಿಷಯವಾಗಿ ಹೆಮ್ಮೆ ಹೆಚ್ಚಲೆಂದು, ನಾಡಿನ ಚರಿತ್ರೆಯನ್ನು ಚೆನ್ನಾಗಿ ಶೋಧಿಸಿ ತಿಳಿಯಲೆಂದು, ಈ ಬಗೆಯ ದೊಡ್ಡ ದೊಡ್ಡ ಆದರ್ಶಗಳನ್ನಿಟ್ಟುಕೊಂಡು ಈ ಸಂಸ್ಥೆಗಳು ಹುಟ್ಟಿದುವು. ಇವುಗಳು ಹುಟ್ಟಿದಂದಿನಿಂದ ಒಂದಲ್ಲ ಒಂದು ರೀತಿ ನನ್ನ ತಂದೆ ಈ ಸಂಸ್ಥೆಗಳ ಕಾರ್ಯದಲ್ಲಿ ನೆರವಾಗಿದ್ದರು. ಸಿವಿಕ್ ಸಂಘದ ಜೀವವಾಗಿದ್ದರು. ಕೊನೆಗಾಲದವರೆಗೂ ಆ ಸಂಘದ ಗೌರವ ಕಾರ್ಯದರ್ಶಿಯಾಗಿ ಕೆಲಸಮಾಡಿದರು. ಸಿವಿಕ್ ಸಂಘ ಮೊದಲಾದ ಬಗೆ, ಅದು ಹುಟ್ಟಿಕೊಂಡುದರ ಉದ್ದೇಶ, ಸಾಧಿಸಿದ ಗುರಿ ಇವುಗಳನ್ನು ಸೂಕ್ಷ್ಮವಾಗಿ ಇಲ್ಲಿ ಪ್ರಸ್ತಾಪಿಸುತ್ತೇನೆ.

ಸಿವಿಕ್ ಸಂಘ ಜನ್ಮ ತಾಳಲು ಶ್ರೀಮದ್ಯುವರಾಜರು ಕಾರಣರು. ೧೯೧೪ ರ ಡಿಸೆಂಬರಿನಲ್ಲಿ ಅವರು ಮದರಾಸಿನಲ್ಲಿ ಭಾಷಣಮಾಡುತ್ತ, ನಮ್ಮ ದೇಶದವರ ದುಸ್ಥಿತಿಯನ್ನೂ ಪಾಶ್ಚಿಮಾತ್ಯರ ಸುಖಜೀವನವನ್ನೂ ತುಲನೆ ಮಾಡಿ, ನಮ್ಮಲ್ಲಿರುವ ಅನೇಕ ನ್ಯೂನತೆಗಳನ್ನು ಹೋಗಲಾಡಿಸಲು ಕೈಕೊಳ್ಳಬೇಕಾದ ಕ್ರಮವನ್ನು ವಿವರಿಸಿದರು. ಮೈಸೂರಿಗೆ ಹಿಂದಿರುಗಿದಮೇಲೆ ತಮ್ಮ ಮನಸಿನಲ್ಲಿದ್ದ ಭಾವನೆಗಳನ್ನು ಕಾರ್ಯರೂಪಕ್ಕೆ ತರಲು ಪ್ರಯತ್ನಿಸಿದರು. ೧೯೧೫ ರ ಜನವರಿಯಲ್ಲಿ ಅವರು ಬೆಂಗಳೂರು ಅರಮನೆಗೆ ಕೆಲವು ಮುಖ್ಯ

ಮಹನೀಯರುಗಳನ್ನು ಬರಮಾಡಿಕೊಂಡು ಸಮಾಲೋಚನೆ ನಡೆಸಿದರು. ಮದರಾಸಿನ ಲಾರ್ಡ್‌ಬಿಷಪರು, ಮಿಸೆಸ್. ವೈಟ್‌ಹೆಡ್, ರೈಟ್ ಆನರಬಲ್ ಶ್ರೀನಿವಾಸಶಾಸ್ತ್ರಿಯವರು, ಇವರೆಲ್ಲ ಆ ಕೂಟಕ್ಕೆ ಆಹ್ವಾನಿತರಾಗಿ ಬಂದಿದ್ದರು. ಶ್ರೀ. ಶ್ರೀನಿವಾಸಶಾಸ್ತ್ರಿಗಳೂ, ಶ್ರೀಮತಿ ವೈಟ್‌ಹೆಡ್‌ರವರೂ ನೆರೆದಿದ್ದ ಮಹನೀಯರನ್ನು ಉದ್ದೇಶಿಸಿ, ಬೆಂಗಳೂರಿನಲ್ಲಿ ಸಮಾಜ ಉದ್ಧಾರದ ಕೆಲಸವನ್ನು ಕೈಗೊಳ್ಳುವ ಅಗತ್ಯವನ್ನು ವಿವರಿಸಿದರು. ಇದರ ಫಲವಾಗಿ Bangalore Social Service League ಎಂಬ ಸಂಸ್ಥೆ ಅದೇ ವರ್ಷದಲ್ಲಿ ಸ್ಥಾಪಿತವಾಯಿತು. ಸಂಸ್ಥೆಗೆ ಒಂದು ಕಾನೂನು, ಉಪಕಾನೂನು ಸಿದ್ಧವಾಯಿತು. ಶ್ರೀಮದ್ಯುವರಾಜರು ಪೋಷಕರಾಗಿಯೂ, ಸರದಾರ್ ಶ್ರೀ. ಕಾಂತರಾಜ ಅರಸರು ಅಧ್ಯಕ್ಷರಾಗಿಯೂ, ಶ್ರೀ. ರಾಮನಾಥ್‌ರವರು ಕಾರ್ಯದರ್ಶಿಯಾಗಿಯೂ ನೇಮಕವಾದರು.

ಎರಡು ವರ್ಷಗಳ ಕಾಲ ಈ ಸಂಸ್ಥೆ ಬೆಂಗಳೂರಲ್ಲಿ ಕೆಲಸ ನಡೆಸಿತು. ಕೆಲಸಕ್ಕಾಗಿ ಐದು ಸ್ಥಳಗಳನ್ನು ಚುನಾಯಿಸಲಾಗಿತ್ತು. ಒಂದೊಂದಕ್ಕೂ ಒಬ್ಬ ಮುಖಂಡರು ನೇಮಿತರಾಗಿದ್ದರು. ಸಾಮಾಜಿಕ ಕೆಲಸಗಾರರಿಗೆ ಶಿಕ್ಷಣ ಕೊಡಲು ಶಾಲೆಯೊಂದು ಏರ್ಪಟ್ಟಿತ್ತು. ಈ ಶಾಲೆಯಲ್ಲಿ ಶ್ರೀಗಳಾದ ಟಿ. ವಿಜಯರಾಘವಾಚಾರಿ, ಮಿಸೆಸ್. ವೈಟ್‌ಹೆಡ್, ಸರ್ವೆಂಟ್ ಆಪ್ ಇಂಡಿಯಾ ಸೊಸೈಟಿಯ ವಿ. ವೆಂಕಟಸುಬ್ಬಯ್ಯ, ಎ. ವಿ. ರಾಮನಾಥನ್, Y. M. C. A. ಯ ಸ್ಟಾಂಚ್‌ಫೀಲ್ಡ್ ಅವರುಗಳು ಉಪನ್ಯಾಸಕರಾಗಿದ್ದರು. ಈ ಸಂಸ್ಥೆ ನಡೆಸಿಕೊಂಡು ಬಂದ ಕೆಲಸಗಳಲ್ಲಿ ಕೆಳಗೆ ಕಂಡವು ಮುಖ್ಯವಾದುವು.

1. ಬಡಜನರಿಗಾಗಿ ಸಹಕಾರಸಂಸ್ಥೆಗಳನ್ನು ಸ್ಥಾಪಿಸುವುದು.
2. ಸ್ಥಳದ ರೋಗಿಗಳನ್ನು ಆಸ್ಪತ್ರೆಗಳಿಗೆ ಕರೆದುಕೊಂಡು ಹೋಗಿ ಸೇರಿಸುವುದು.
3. ಕುಡಿತದ ಅಭ್ಯಾಸವನ್ನು ಬಿಡಿಸುವುದು.
4. ಮಕ್ಕಳಿಗೆ ಕೈಗಾರಿಕೆಗಳನ್ನು ಕಲಿಸಿಕೊಡುವುದು.

5. ಬೆಳಗಿನ ಹೊತ್ತು ಕೆಲಸಮಾಡುವವರಿಗೆ ರಾತ್ರಿವೇಳೆ ಶಾಲೆಗಳನ್ನು ತೆರೆದು ವಿದ್ಯೆ ಹೇಳಿಕೊಡುವುದು.
6. ಮಕ್ಕಳಿಗೆ ಆಟಪಾಟ ಕಲಿಸಿಕೊಡುವುದು.
7. ವಯಸ್ಕರಿಗೆ ವಿದ್ಯಾಭ್ಯಾಸ ಮಾಡಿಸುವುದು.
8. ಆರೋಗ್ಯಶಾಖೆಯ ಅಧಿಕಾರಿಗಳ ಸಹಾಯ ತೆಗೆದುಕೊಂಡು ಕೂಲಿಗಾರರ ವಸತಿಗಳನ್ನು ಶುಚಿಯಾಗಿಡುವುದು.
9. ಕೆಲಸಗಾರರಲ್ಲಿದ್ದ ಜಗಳಗಳನ್ನು ಪರಿಹರಿಸುವುದು.

ಈ ಎಲ್ಲ ಬಗೆಯ ಕೆಲಸಗಳನ್ನು ಸಂಘದ ಸದಸ್ಯರು ನಡೆಸಿಕೊಂಡು ಬಂದರು.

೧೯೧೬ ರಲ್ಲಿ ಬೆಂಗಳೂರು ಸೋಷಿಯಲ್ ಸರ್ವಿಸ್ ಲೀಗ್ ಎನ್ನುವ ಹೆಸರು ಬದಲಾಯಿಸಲ್ಪಟ್ಟು Mysore Civic and Social Progress Association ಎಂದು ಹೆಸರಾಯಿತು. ಈಗ ಸಂಘದ ಕಾರ್ಯಕ್ಷೇತ್ರ ಬೆಂಗಳೂರು ನಗರಕ್ಕೆ ಮಾತ್ರ ಒಳಪಡದೆ ಮೈಸೂರು ದೇಶವೇ ಕಾರ್ಯಕ್ಷೇತ್ರವಾಯಿತು. ಯುವರಾಜರು ಅಧ್ಯಕ್ಷರಾದರು. ಶ್ರೀ. ವಿ. ಎನ್. ನರಸಿಂಹಯ್ಯಂಗಾರ್ಯರು ಉಪಾಧ್ಯಕ್ಷರಾದರು. ಶ್ರೀಗಳಾದ ವೆಂಕಟಕೃಷ್ಣಯ್ಯ ಮತ್ತು ಜಿ. ಆರ್. ಜೋಸ್ಯರ್ ಇವರು ಕಾರ್ಯದರ್ಶಿಗಳಾದರು. ೧೯೧೮ ರಲ್ಲಿ ಸಂಘ ಮೈಸೂರಿನಿಂದ ಬೆಂಗಳೂರಿಗೆ ವರ್ಗವಾಗಿ ಬಂತು. ಕಾರ್ಯಸಮಿತಿಯಲ್ಲಿ ಹಲವು ಬದಲಾವಣೆಗಳಾದುವು. ಶ್ರೀಮದ್ಯುವರಾಜರು ಪೋಷಕರಾದರು. ಸರ್ ಪುಟ್ಟಣ್ಣಶೆಟ್ಟರು ಅಧ್ಯಕ್ಷರಾಗಿಯೂ, ಸಿ. ಆರ್. ರೆಡ್ಡಿಯವರು ಉಪಾಧ್ಯಕ್ಷರಾಗಿಯೂ, ನನ್ನ ತಂದೆ ಗೌರವ ಕಾರ್ಯದರ್ಶಿಯಾಗಿಯೂ ನೇಮಕವಾದರು. ಆಗಿನಿಂದ, ೧೯೪೪ ರ ಕೊನೆಯವರೆಗೂ ತಂದೆ ಸಿವಿಕ್ ಸಂಘದ ಕಾರ್ಯದರ್ಶಿಯಾಗಿ ಕೆಲಸಮಾಡಿದರು.

ಸಿವಿಕ್ ಸಂಘ, ಈ ಇಪ್ಪತ್ತೈದು ವರ್ಷಗಳ ಅವಧಿಯಲ್ಲಿ ತನಗಿದ್ದ ಸ್ವಲ್ಪವೇ ಸಹಾಯ ಸಂಪತ್ತಿನೊಡನೆ ಸಾಧಿಸಿದ ಕೆಲಸಗಳು ಅನೇಕ. ಅವರ್ಣರೆಂದು, ಮುಟ್ಟಲು ಕೂಡ ಅರ್ಹರಲ್ಲವೆಂದು, ಪಂಚಮರೆಂದು, ಆಚೆಗೆ ತಳ್ಳಿಬಿಟ್ಟಿದ್ದ ಜನತೆಯನ್ನು ಉದ್ಧಾರಮಾಡಲು ಪ್ರಯತ್ನಪಟ್ಟು ಅವರಿಗೆ

ಮನ್ನಣೆಯ ಸ್ಥಾನವನ್ನು ದೊರಕಿಸಲು ಮೊದಲು ಹೆಣಗಿದುದು ಸಿವಿಕ್ ಸಂಘ. ಇದೊಂದೇ ಕೆಲಸಕ್ಕಾದರೂ ಸಂಘ ಜನ್ಮವೆತ್ತಿದುದು ಸಾರ್ಥಕ ಎಂದು ಒಪ್ಪಬೇಕು. ಸಂಸ್ಥಾನದಲ್ಲಿ ಮುಂದುವರಿದ ಸ್ತ್ರೀಯರು ಸಮ್ಮೇಳನಗಳನ್ನು ನಡೆಸಿ, ಸಮಾಜಗಳನ್ನು ಕಟ್ಟಿಕೊಂಡು ತಮ್ಮ ಮನ್ನಣೆಯನ್ನು ತಾವೇ ಸಾಧಿಸಿಕೊಳ್ಳುವಂತೆ ಪ್ರೇರಿಸಿದುದು ಕೂಡ ಸಿವಿಕ್ ಸಂಘವೇ. ಸಂಘ ಮೊದಲು ಹೆಜ್ಜೆ ಇಟ್ಟು ಮುಂದುವರಿದ ಕಡೆ, ಬೇರೆಯವರು ಬಂದು ಸಂಘ ತೋರಿಕೊಟ್ಟ ಹಾದಿಯಲ್ಲಿ ನಡೆದು ತಮ್ಮ ಗುರಿ ಸಾಧಿಸಲು ಪ್ರಯತ್ನಿಸುತ್ತಿದ್ದಾರೆ. ಸಂಘ ಕೈಗೊಂಡ ಕಾರ್ಯಗಳು ಒಂದೊಂದೂ ಬೇರು ಬಿಟ್ಟು ಒಂದೊಂದೂ ಈಗ ದೊಡ್ಡ ಸಂಸ್ಥೆಗಳಾಗಿವೆ. ಸಂಘದಲ್ಲಿ ಒಮ್ಮನಿಸಿನಿಂದ ದುಡಿದ ಯಾರಿಗೆ ತಾನೆ ಈ ಬೆಳೆವಣಿಗೆಯನ್ನು ಕಂಡು ಆನಂದವಾಗಿರಲಾರದು. ತಂದೆಗೆ ಈ ಬೆಳವಣಿಗೆಯನ್ನು ಕಂಡು ಆನಂದ ಹೆಮ್ಮೆ ಎರಡೂ ಇತ್ತು. ಗಂಗಮಚೇರಿ, ಆ ಚೇರಿ ಈ ಚೇರಿ ಎಂದು ಕೂಲಿಗಾರರ ಚೇರಿಗಳನ್ನು ಸುತ್ತಿಕೊಂಡು ಬರುವುದು, ಇಂದು ಹುಚ್ಚರ ಆಸ್ಪತ್ರೆ, ನಾಳೆ ಕುಷ್ಠರೋಗಿಗಳ ದರ್ಶನ, ನಾಡದು ಸೆಂಟ್ರಲ್ ಜೈಲಿನ ಖೈದಿಗಳೊಡನೆ ಸಂಭಾಷಣೆ, ಅರಳೆಪೇಟೆಯ ರಾತ್ರಿಶಾಲೆಗೆ ಭೇಟಿ, ಇಂಥವುಗಳಲ್ಲಿ ತಂದೆಗೆ ಇದ್ದ ಕುಂದದ ಆಸಕ್ತಿಯನ್ನು ಕಂಡು ನನಗೆ ಬಹಳ ಆಶ್ಚರ್ಯವಾಗುತಿತ್ತು. ತಂದೆಗೆ ಇಂಥ ಹವ್ಯಾಸಗಳಲ್ಲಿ ಇದ್ದ ಆಸಕ್ತಿಯನ್ನು ಕಂಡು ನಾವು ಹುಡುಗರು ಹಾಸ್ಯವಾಗಿ ಮಾತನಾಡಿಕೊಳ್ಳುತಿದ್ದೆವು. ಯಾವುದಾದರೂ ಒಂದು ಬಗೆಯಲ್ಲಿ ನನ್ನಿಂದ ಜನಕ್ಕೆ ಸಹಾಯವಾಗಬೇಕು ಎನ್ನುವ ಮನೋಭಾವ ತಂದೆಯ ಮನಸಿನಲ್ಲಿ ಬಲವಾಗಿ ಬೇರೂರಿದ್ದ ಹಾಗೆ ಕಾಣುತ್ತದೆ. ಈ ಕೆಲಸಗಳನ್ನು ಅವರು ಹೆಸರಿಗಾಗಿ, ಕೀರ್ತಿಗಾಗಿ ಮಾಡಲಿಲ್ಲ. ಅವರಿಗೆ ಅಂಥ ಹೆಸರಾಗಲಿ ಕೀರ್ತಿಯಾಗಲಿ ಬರಲೂ ಇಲ್ಲ. ತನ್ನ ಕೆಲಸದಲ್ಲಿ ತನಗುಂಟಾದ ಸಂತೋಷ ಹೊರತು ಬೇರೆ ಯಾವ ಬಗೆಯ ಪ್ರತಿಫಲವೂ ಅವರಿಗೆ ಬಂದಂತೆ ಕಾಣೆ. ಸಮಾಜಸೇವೆಯಲ್ಲಿ ಅವರಿಗೆ ದೊರೆತ ಪ್ರತಿಫಲ ಬೇರೆ ಬಗೆಯದು. ಅದೇನೆಂದರೆ ಸೇವಾಕಾರ್ಯದಲ್ಲಿ ಅವರಿಗೆ ದೊರೆತ ಅಸಂಖ್ಯಾತ ಮಿತ್ರರು. ದಿನ ದಿನ ಹೆಚ್ಚುತ್ತಿದ್ದ ಅವರ ಗೆಳೆಯರ ಗುಂಪನ್ನು ಕಂಡು ನಾನು ವಿಸ್ಮಯಗೊಳುತಿದ್ದೆ. ಇಷ್ಟೊಂದು ಜನರ ಮನಸನ್ನು ಒಲಿಸಿಕೊಳ್ಳಲು ಯಾವ

ಬಗೆಯ ಮೋಹಕ ಶಕ್ತಿ ಅವರಲ್ಲಿತ್ತೊ ಎಂದು ಆಶ್ಚರ್ಯಬೀಳುತಲಿದ್ದೆ. ನಾನು ಈಗ ಮಾಡುತ್ತಿರುವ ಕೆಲಸ ನನ್ನನ್ನು ಮೈಸೂರು ದೇಶದಲ್ಲಿ ಎಲ್ಲೆಲ್ಲಿಗೋ ಕರೆದುಕೊಂಡು ಹೋಗಿದೆ. ನಾನು ಹೋದೆಡೆಗಳಲ್ಲೆಲ್ಲಾ ನನ್ನ ತಂದೆಯ ಮಿತ್ರರು ಸಿಕ್ಕಿಯೇ ಇದಾರೆ. ಉದಾಸೀನವಾಗಿ ಕಾಣುತಿದ್ದವರು ನಾನು ಪುಟ್ಟಯ್ಯನವರ ಮಗ ಎಂದು ತಿಳಿದಕೂಡಲೆ ಬಣ್ಣ ಬದಲಾಯಿಸಿ ವಿಶ್ವಾಸದಿಂದ ನಡೆದುಕೊಂಡಿದ್ದಾರೆ. ಈ ಬಗೆಯ ಅನುಭವ ನನಗೆ ಬಹುವಾಗಿ ಆಗಿದೆ. ಪುಟ್ಟಯ್ಯನವರ ಮಕ್ಕಳು ಎನ್ನುವುದೇ ಅವರ ಮಕ್ಕಳಾದ ನಮಗೆ ಹಿರಿದಾದ ಬಿರುದಿನಂತಿದೆ. ಅವರ ಹೆಸರು ನಮಗೆ ಬೆಂಗಾವಲಾಗಿ ನಿಂತು ನಮ್ಮ ಜೀವನ ಪಥವನ್ನು ಸುಗಮವಾಗಿ ಮಾಡುತ್ತಿದೆ. ನಮ್ಮ ತಂದೆಯ ಸಮಾಜಸೇವೆಯ ಪ್ರತಿಫಲ ಇದೇ ಎಂದು ನನಗನಿಸುತ್ತದೆ.

## ಪಂಚಮೋದ್ಧಾರ - ಆರ್. ಗೋಪಾಲಸ್ವಾಮಿ ಅಯ್ಯರ್ ಅವರು.

ಮಾದಿಗರೆಂದು ಹೊಲೆಯರೆಂದು ಈಗಲೂ ಕಡೆಗಣಿಸಿ ಕರೆಯಲ್ಪಡುವ ಜನ ಮೈಸೂರು ದೇಶದಲ್ಲಿ ಅಸಂಖ್ಯಾತರಾಗಿದ್ದಾರೆ. ಒಕ್ಕಲಿಗರ ಕೋಮನ್ನು ಬಿಟ್ಟರೆ ಈ ಜನವೇ ದೇಶದ ಜನಸಂಖ್ಯೆಯಲ್ಲಿ ಎರಡನೆ ಸ್ಥಾನ ಪಡೆದಿರುವವರು. ಇವರಿಗೆ ಆದಿದ್ರಾವಿಡರು, ಆದಿಕರ್ಣಾಟಕರು ಎಂಬ ಹೆಸರು ಬಳಕೆಯಲ್ಲಿದೆ. ರೆವಿನ್ಯೂ ಇಲಾಖೆಯ ನೌಕರರು ಇವರನ್ನ A K.ಗಳೆಂದೂ A. D.ಗಳೆಂದೂ ಕರೆಯುತ್ತಾರೆ. ಇವರು ನಾಲ್ಕು ವರ್ಣಗಳಿಗೂ ಅತೀತರೆಂದು ಇವರನ್ನು ಪಂಚಮರೆಂದು ಕರೆದುದೂ ಉಂಟು. ಆದರೆ ಈ ಹೆಸರು ಈಚೆಗೆ ಬಳಕೆಯಿಂದ ತಪ್ಪಿಹೋಗಿದೆ. ಮಹಾತ್ಮರು ಈ ಜನಕ್ಕೆ ಹರಿಜನರೆಂದು ಹೆಸರು ಕೊಟ್ಟಾಗಿನಿಂದ ಆ ಹೆಸರೇ ಎಲ್ಲೆಲ್ಲೂ ಕೇಳಿಬರುತ್ತಿದೆ.

ಈ ಜನದಷ್ಟು ಶೋಚನೀಯ ಸ್ಥಿತಿಯಲ್ಲಿರುವವರು ಬೇರೆ ಯಾವ ದೇಶದಲ್ಲಿಯೂ ಇರಲಾರರು. ತಮ್ಮ ಹೀನದೆಸೆ ತಮಗೇ ಅರಿವಾಗದೆ ಇದ್ದಾರೆ ಈ ಜನ. ಇದು ಇನ್ನೂ ಶೋಚನೀಯ. ಈ ಜನದ ಉದ್ಧಾರಕ್ಕೆ ಮಹಾತ್ಮರು ಮೊದಲುಗೊಂಡು ಎಲ್ಲರೂ ಹೆಣಗುತಿದ್ದರೂ ಈ ಕಾಲದಲ್ಲೂ ಕೂಡ ಅವರ ಸ್ಥಿತಿ ಅತಿ ಕೀಳಾಗಿಯೇ ಉಳಿದಿದೆ. ಈಗಲೆ ಹೀಗಿರಬೇಕಾದರೆ ನಲವತ್ತು ವರ್ಷಗಳ ಹಿಂದೆ ಯಾವ ರೀತಿ ಇತ್ತೊ ಊಹಿಸುವುದು ಕಷ್ಟ. ಅವರ ಪರವಾಗಿ ಯಾರೂ ಯೋಚನೆ ಕೂಡ ಮಾಡದೆ ಇದ್ದಾಗ ಅವರಿಗೆ ಸ್ವಲ್ಪಮಟ್ಟಿನ ಸಹಾಯವನ್ನು ಒದಗಿಸುವ ಕೆಲಸವನ್ನು ಸಿವಿಕ್ ಸಂಘ ತೆಗೆದುಕೊಂಡಿತು.

ಮೈಸೂರಿನಲ್ಲಿ ಹರಿಜನರ ಉದ್ಧಾರಕಾರ್ಯವನ್ನು ನೆನಸಿಕೊಂಡಾಗಲೆಲ್ಲ ಆ ಕಾರ್ಯದ ಜೀವವಾಗಿದ್ದ ಶ್ರೀ ಆರ್. ಗೋಪಾಲಸ್ವಾಮಿ ಅಯ್ಯರ್‌ರವರನ್ನು ನೆನಸಲೇಬೇಕಾಗುತ್ತದೆ. ತಮ್ಮ ಜೀವನವನ್ನೆ ಹರಿಜನರ ಏಳಿಗೆಗಾಗಿ ವಿನಿಯೋಗಿಸಿದರು ಅಯ್ಯರವರು. ಅವರಿಗೆ ಬೇರೆ ಯಾವ ಉದ್ಯೋಗವೂ ಇದ್ದಂತೆ ಕಾಣಲಿಲ್ಲ. ಇದ್ದ ಉದ್ಯೋಗ ಹರಿಜನಸೇವೆ ಒಂದೇ. ನಾನು ಚಿಕ್ಕಂದಿನಿಂದ ಗೋಪಾಲಸ್ವಾಮಿ ಅಯ್ಯರವರನ್ನು ಬಲ್ಲೆ. ನಾವಿದ್ದುದು

ಚಾಮರಾಜಪೇಟೆಯ ನಾಲ್ಕನೇ ಬೀದಿಯಲ್ಲಿ. ನಮ್ಮ ಮನೆ ಬಿಟ್ಟು ಎರಡು ಚೌಕದ ಮೇಲುಗಡೆ ಅವರ ಮನೆಯಿತ್ತು. ' Elephant Lodge ' ಎಂದು ಅವರ ಮನೆಯ ಹೆಸರು. ಮನೆಯ ಗೇಟಿನಮೇಲೆ ಎರಡು ಆನೆಯ ವಿಗ್ರಹಗಳಿದ್ದುವು. ನಾವು ಆ ಮನೆಯನ್ನು ಆನೆ ಮನೆ ಎಂದು ಕರೆಯು ತಿದ್ದೆವು. ನಾವು ಸ್ಕೂಲಿಗೆ ಹೋಗುತ್ತ ಬರುತ್ತ ಈ ಆನೆ ಮನೆಯ ಮುಂದೆ ಹಾದು ಹೋಗುತಿದ್ದೆವು. ದಿನವೂ ಆ ಮನೆಯ ಮುಂಬದಿಯಲ್ಲಿ ಹರಿಜನ ವಿದ್ಯಾರ್ಥಿಗಳ ತಂಡ ನಿಂತೇ ಇರುತಿತ್ತು. ಗೋಪಾಲಸ್ವಾಮಿ ಅಯ್ಯರು ಹೊರಹೊರಟಾಗ ಅವರ ಹಿಂದೆ ಐದಾರು ಹರಿಜನ ವಿದ್ಯಾರ್ಥಿಗಳು ಇಲ್ಲದಿದ್ದ ದಿನವೇ ಇಲ್ಲ. ಈ ವಿದ್ಯಾರ್ಥಿಗಳಿಗೆ ಸೀಸದ ಕಡ್ಡಿ ಒದಗಿಸುವುದರಿಂದ ಹಿಡಿದು ಸರಕಾರದಲ್ಲಿ ಒಳ್ಳೆಯ ನೌಕರಿಯನ್ನು ಕೊಡಿಸುವವರೆಗೆ ಬಹು ಬಗೆಯ ಸಹಾಯ ಅಯ್ಯರವರಿಂದ ದೊರಕುತಿತ್ತು. ಅಯ್ಯರಂತೆ ಏಕ ಮನಸಿನಿಂದ ಹರಿಜನರ ಹಿತಕ್ಕಾಗಿ ದುಡಿದವರನ್ನು ಕಾಣೆ.

ಅಯ್ಯರವರು ನಕ್ಕುದನ್ನು ನಾನು ನೋಡಿದ ನೆನಪಿಲ್ಲ ಅವರದು ಯಾವಾಗಲೂ ಸಿಡುಕುಮೋರೆ. ಒಂದು ಬಗೆಯ ವ್ಯಾಧಿಯಸಲುವಾಗಿ ಅವರ ಮುಖದ ಮಾಂಸಖಂಡ ತಮಗೆ ತಾವೇ ಸಂಕುಚಿತವಾಗುತಿದ್ದುವು. ಅವರು ನೋಡಲು ಸುಂದರರಾಗೇನೂ ಇರಲಿಲ್ಲ. ಮೋರೆಯಲ್ಲಿ ಹೇಗೊ ಮಾತಿ ನಲ್ಲಿಯೂ ಖಂಡಿತತನ ಎದ್ದು ತೋರುತಿತ್ತು. ಅವರು ಎಲ್ಲರಿಗೂ ಬೇಕಾ ದವರಾಗಿದ್ದರು. ದಿವಾನರಿಂದ ಹಿಡಿದು ಜವಾನನವರಿಗೆ ಎಲ್ಲರ ಮನೆ ಯಲ್ಲೂ ಅವರಿಗೆ ಸ್ವಾಗತವಿತ್ತು. ಅವರಿಗೂ ನನ್ನ ತಂದೆಗೂ ಅತಿಯಾದ ಮೈತ್ರಿ. ಸಾಮಾನ್ಯವಾಗಿ ತಂದೆಯನ್ನು ನೋಡಲು ಅವರು ಬರುತಿದ್ದುದು ಬೆಳಗಿನ ಹೊತ್ತಿನಲ್ಲಿ. ತಂದೆ ಒಂದುವೇಳೆ ಅವರು ಬಂದ ಹೊತ್ತಿನಲ್ಲಿ ಒಳಗೆ ಸ್ನಾನಮಾಡುತಿದ್ದರೆ, ಸ್ನಾನ ಮುಗಿಸಿಕೊಂಡು ತಂದೆ ಹೊರಗೆ ಬರುವವರೆಗೂ ಅವರು ಕಾಯುತಿರಲಿಲ್ಲ. ನೇರವಾಗಿ ಸ್ನಾನದಮನೆಯವರೆಗೇ ನಡೆದು, ಅಲ್ಲಿಯೇ ಸಂಭಾಷಣೆ ಮುಗಿಸಿಕೊಂಡು ಹೋಗುತಿದ್ದರು. ಅಯ್ಯರವರಿಗೆ ಕನ್ನಡ ಬರುತಿದ್ದರೂ ಅವರ ಬಾಯಲ್ಲಿ ಕನ್ನಡ ಸುಲಭವಾಗಿ ತಿರುಗುತಿರಲಿಲ್ಲ. ಸಾಮಾನ್ಯವಾಗಿ ಅವರು ಇಂಗ್ಲೀಷಿನಲ್ಲಿಯೇ ಮಾತನಾಡುತಿದ್ದರು. ಒಂದು

ದಿನ ಅವರ ಮಾತು ಕೇಳಿ ನನಗೆ ತೀರ ನಗು ಬಂದುಬಿಟ್ಟಿತು. ಅಂದು ಅಯ್ಯರವರು ತೀರ ಅವಸರವಸರವಾಗಿ ಬಂದರು. ತಂದೆ ಒಳಗೆ ಸ್ನಾನ ಮಾಡಲು ಹೋಗಿದ್ದರು. ಅಯ್ಯರವರಿಗೆ ಕಾಯುವ ಸಹನೆ ಇಲ್ಲ. ಅಕ್ಷಯೋ ರೂಮಿನಲ್ಲಿ ಓದುತ್ತ ಕುಳಿತಿದ್ದ ನನ್ನ ಹತ್ತಿರ ಬಂದು ಮುಖವನ್ನು ವಕ್ರವಾಗಿ ಮಾಡಿಕೊಂಡು ಮನೆಯೇ ಹಾರಿ ಹೋಗುವಂತೆ "Tell your father to meet me at the Lunatic Assylum" ಎಂದು ಕೂಗಿಬಿಟ್ಟು, ಸರಸರ ಹೋಗಿಬಿಟ್ಟರು. ಇವರ ಮಾತು ನಿಜವಾಗಿ ತೆಗೆದುಕೊಳ್ಳಬೇಕೋ ಬೇಡವೊ ಎಂದು ಸಂದೇಹಪಡುವಷ್ಟು ವಿಚಿತ್ರವಾಗಿತ್ತು ಅವರ ನಡವಳಿಕೆ. ತಂದೆಗೆ ನಾನು ಈ ಮಾತು ತಿಳಿಸಿದಾಗ ಅವರಿಗೆ ಇದರಲ್ಲೇನೂ ವಿಚಿತ್ರ ಕಾಣಿಸಲಿಲ್ಲ. ಆ ಸಂಜೆ, ಹುಚ್ಚರ ಆಸ್ಪತ್ರೆಗೆ ಇವರೆಲ್ಲರೂ ಭೇಟಿಕೊಡಬೇಕಾಗಿತ್ತೆನ್ನುವುದು ನನಗೆ ಆಮೇಲೆ ತಿಳಿಯಿತು.

ಸಿವಿಕ್ ಸಂಘ ಹರಿಜನರ ಏಳಿಗೆಗಾಗಿ ಕೈಗೊಂಡ ಕಾರ್ಯಕ್ಕೆಲ್ಲ ಗೋಪಾಲಸ್ವಾಮಿ ಅಯ್ಯರವರೇ ಜೀವವಾಗಿದ್ದರು. ಅವರಿಗೂ ಅವರ ಸೈಕಲಿಗೂ ಒಂದು ಪಾಸು ಸಂಘದ ಮೂಲಕ ಕೊಡಲ್ಪಟ್ಟಿತ್ತು. ಅವರು ಮೈಸೂರು ದೇಶದ ರೈಲುಮಾರ್ಗಗಳಲ್ಲಿ ಎಲ್ಲಿ ಬೇಕೆಂದರಲ್ಲಿ ಸೈಕಲಿನೊಡನೆ ಪ್ರಯಾಣ ಮಾಡಬಹುದಾಗಿತ್ತು. ಪ್ರಯಾಣದ ವಿವರಗಳನ್ನು ತಾವು ಮಾಡಿದ ಕೆಲಸಗಳನ್ನು ಸಂಘಕ್ಕೆ ವರದಿ ಒಪ್ಪಿಸುತ್ತಿದ್ದರು. ಹಿಂದುಳಿದ ಜನಾಂಗದವರನ್ನು ಉದ್ಧಾರಮಾಡುವ ನಿಸ್ವಾರ್ಥಸೇವೆಯಲ್ಲಿ ತಮ್ಮ ಜೀವಿತದ ಕೊನೆಯ ಕಾಲದವರೆಗೂ ದುಡಿದು, ೧೯೪೩ನೆ ಇಸವಿ ಮಾರ್ಚಿ ತಿಂಗಳು ೧೯ ನೆ ತಾರೀಖು ಕಣ್ಣುಮುಚ್ಚಿಯಾದರು. ಸೇವಾನಿರತನೆಂದು, ಧುರೀಣನೆಂದು ಯಾವಬಗೆಯ ಬಿರುದೂ ಅವರಿಗೆ ದೊರೆಯಲಿಲ್ಲ. ಬಿರುದುಗಳು ದೊರೆಯುವುದು ಇಂಥವರಿಗಲ್ಲವೇನೊ! ಶ್ರೀ ಗೋಪಾಲಸ್ವಾಮಿ ಅಯ್ಯರವರ ನೆನಪನ್ನು ನಮಗೆ ತಂದುಕೊಡುವ ಯಾವ ಸ್ಮಾರಕವೂ ಹುಟ್ಟಿಕೊಂಡಿಲ್ಲ. ಅವರ ಜೀವಿತದ ಕಾಲದಲ್ಲಿ ಅವರಿಂದ ಬಹುಬಗೆಯ ಸಹಾಯ ಪಡೆದು ಈಗ ಗಣ್ಯರಾಗಿರುವ ಹರಿಜನ ಮಹನೀಯರು ಗೋಪಾಲಸ್ವಾಮಿ ಅಯ್ಯರವರ ನೆನಪು ನಮ್ಮಲ್ಲಿ ಸದಾ ಉಳಿಯುವಂತೆ ಯಾವುದಾದರೂ ಕಾರ್ಯಕ್ರಮವನ್ನು ಕೈಗೊಳ್ಳಕೂಡದೇಕೆ?

ಸಿವಿಕ್ ಸಂಘ ಕೈಕೊಂಡ ಹರಿಜನೋದ್ಧಾರ ಕಾರ್ಯವನ್ನು ಪ್ರಸ್ತಾಪ ಮಾಡುವಾಗ, ಅಂಥ ಕೆಲಸದ ಜೀವವಾಗಿದ್ದ ಶ್ರೀ ಗೋಪಾಲಸ್ವಾಮಿ ಅಯ್ಯಂಗಾರವರನ್ನು ನೆನಸಿಕೊಳ್ಳಬೇಕಾಗಿ ಬಂತು. ಇನ್ನು ಸಂಘ ಹರಿಜನರ ಏಳಿಗೆಗಾಗಿ ಪ್ರಯತ್ನ ಪಟ್ಟುದನ್ನೂ, ಸಾಧಿಸಿದ ಕೆಲಸವನ್ನೂ, ಇಲ್ಲಿ ಸೂಕ್ಷ್ಮವಾಗಿ ವಿವರಿಸುತ್ತೇನೆ.

ಹಿಂದುಳಿದ ಯಾವ ಜನತೆಯನ್ನೇ ಆಗಲಿ ಉದ್ಧಾರಮಾಡಲು ಪ್ರಯತ್ನ ಪಡುವವರು ಆ ಜನದಲ್ಲಿ ವಿದ್ಯಾಪ್ರಚಾರ ಮಾಡುವ ಕೆಲಸವನ್ನು ಮೊದಲು ತೆಗೆದುಕೊಳ್ಳುತ್ತಾರೆ. ಸಂಘದವರ ಗಮನವೆಲ್ಲ ಮೊದಲಿಗೆ ಹರಿಜನರಿಗೆ ವಿದ್ಯಾಭ್ಯಾಸ ದೊರಕಿಸುವುದಕ್ಕಾಗಿ ಮೀಸಲಾಗಿತ್ತು. ಹರಿಜನ ಬಾಲಕರನ್ನು ಯಾರೂ ಮುಟ್ಟುತ್ತಿರಲಿಲ್ಲ. ಅವರನ್ನು ಯಾವ ಶಾಲೆಗೂ ಸೇರಿಸುತ್ತಿರಲಿಲ್ಲ. ಸಂಘ ಮೊದಲು ಹರಿಜನ ಬಾಲಕರಿಗೆಂದೇ ಅಲ್ಲಲ್ಲಿ ಶಾಲೆಗಳನ್ನು ತೆರೆದು ನಡೆಸಿಕೊಂಡು ಬಂತು. ಈ ಶಾಲೆಗಳಿಗೆ ಪಂಚಮಸ್ಕೂಲು ಎಂದು ಹೆಸರಾಯಿತು. ಈಗಲೂ ಈ ಬಗೆಯ ಪಂಚಮಸ್ಕೂಲುಗಳಿವೆಯೆಂದು ಕೇಳಿದ್ದೇನೆ. ಹರಿಜನರಿಗಾಗಿ ಕೆಲವು ಸಹಕಾರ ಸಂಘಗಳನ್ನು ತೆರೆಯಿತು. ಆ ಸಂಘಗಳಿಗೆ ಸದಸ್ಯರಾಗುವಂತೆ ಪ್ರೇರಿಸಿತು. ಮುಖ್ಯ ಮುಖ್ಯ ಸ್ಥಳಗಳಲ್ಲಿ ಸಭೆಸೇರಿಸಿ, ಕುಡಿತದ ಅಭ್ಯಾಸವನ್ನು ಬಿಡುವಂತೆ, ಮನೆಮಠಗಳನ್ನು ಚೊಕ್ಕಟವಾಗಿಟ್ಟುಕೊಳ್ಳುವಂತೆ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡಲು ಪಾಠಶಾಲೆಗಳಿಗೆ ಕಳುಹಿಸುವಂತೆ, ಪ್ರಚಾರಮಾಡಿತು. ಸಂಘ ಕೈಕೊಂಡ ಪ್ರಚಾರ ಕಾರ್ಯದಿಂದ ಹರಿಜನ ಬಾಲಕರನ್ನು ಎಲ್ಲ ಸ್ಕೂಲುಗಳಿಗೂ ಸೇರಿಸುವಂತಾಯಿತು. ಆದರೆ ಇಲ್ಲಿಯೂ ಉತ್ತಮರೆನಿಸಿಕೊಂಡವರು ಈ ಹರಿಜನ ಮಕ್ಕಳಿಗೆ ಅವಮಾನಪಡಿಸುವುದನ್ನು ನಿಲ್ಲಿಸಲಿಲ್ಲ. ಆ ಮಕ್ಕಳಿಗೇ ಬೇರೆ ಬೆಂಚು ಹಾಕಿ, ಅವರನ್ನು ಬೇರೆಯಾಗಿ ಕುಳ್ಳಿರಿಸಿ ಪಾಠ ಹೇಳುತಿದ್ದರು. ಸಂಘದ ಪ್ರಯತ್ನದಿಂದ ಹರಿಜನರೇ ಮುಂದೆ ಬಂದು ತಮ್ಮದೇ ಒಂದು ಸಂಘ ಮಾಡಿಕೊಂಡರು. ಆ ಸಂಘದ ಮೊದಲ ಅಧ್ಯಕ್ಷರನ್ನು ಸರಕಾರದವರು ಶಾಸನ ಸಭೆಗೂ ಜಿಲ್ಲಾ ಸಭೆಗೂ ಸದಸ್ಯರನ್ನಾಗಿ ಮಾಡಿದರು.

೧೯೧೯ರಲ್ಲಿ ಪಂಚಮರ ಮಹಾಸಭೆ ಒಂದನ್ನು ಮೈಸೂರಿನಲ್ಲಿ ಸಿವಿಕ್ ಸಂಘ ಸೇರಿಸಿತು. ಪ್ರತಿ ತಾಲೂಕಿನಿಂದಲೂ ಸಭೆಗೆ ಸದಸ್ಯರನ್ನು ಬರ ಮಾಡಿಕೊಂಡಿತು. ಅವರ ಪ್ರಯಾಣದ ಖರ್ಚೆಲ್ಲವನ್ನೂ ಸಂಘವೇ ಒದಗಿಸಿತು. ಅವರ ವಸತಿಯ ಏರ್ಪಾಡಿನ ಎಲ್ಲ ವಿವರವನ್ನೂ ತಾನೇ ನೋಡಿಕೊಂಡಿತು. ಮದರಾಸಿನ ಮುಖಂಡರಾದ ಶ್ರೀ ಎಂ. ಸಿ. ರಾಜ ಅವರು ಸಭೆಯ ಅಧ್ಯಕ್ಷರಾಗಿದ್ದರು. ಇಂಥ ಸಭೆ ನೆರೆದುದರ ಫಲವಾಗಿ ಹರಿಜನರಲ್ಲಿ ಸ್ವಾಭಿಮಾನ ಹೆಚ್ಚಿತು. ಸಂಘಟನ ಶಕ್ತಿ ಹೆಚ್ಚಿತು. ಅವರೇ ಅಲ್ಲಲ್ಲಿ ಸ್ವತಂತ್ರವಾಗಿ ಸಂಘಗಳನ್ನು ಕಟ್ಟಿಕೊಂಡರು. ಹೀಗೆ ಹುಟ್ಟಿಕೊಂಡ ಸಂಘಗಳಿಗೆ ಸಿವಿಕ್ ಸಂಘ ಹಣಕೊಟ್ಟು ಪ್ರೋತ್ಸಾಹಿಸಿತು. ಭಜನೆಗೆ ಅನುಕೂಲಿಸುವಂತೆ ಕೆಲವು ಸಂಘಗಳಿಗೆ ಹಾರುಮೋನಿಯಂ ತಬಲಗಳನ್ನು ಉಚಿತವಾಗಿ ಒದಗಿಸಿತು. ಇನ್ನು ಕೆಲವಕ್ಕೆ ಹಣವನ್ನು ಒದಗಿಸಿ, ಸಂಘ ತನಗಾಗಿ ಕಟ್ಟಡ ಒಂದನ್ನು ಕಟ್ಟಿಕೊಂಡು, ಶಾಲೆಯನ್ನು ನಡೆಸಿಕೊಂಡು ಬರುವಂತೆ ಏರ್ಪಾಡುಮಾಡಿತು. ಸಿವಿಕ್ ಸಂಘದ ಮಹನೀಯರು ಈ ರೀತಿ ಹರಿಜನರಿಗೆ ಕೊಡುತಿದ್ದ ಪ್ರೋತ್ಸಾಹವನ್ನು ನೋಡಿ ಮಿಕ್ಕ ಜನರ ಮುಂದಿನ ಕಣ್ಣುಪರೆಯೂ ಸ್ವಲ್ಪಮಟ್ಟಿಗೆ ಹರಿಯಿತು. ತಾವು ಮಾಡುತಿರುವುದು ಅನ್ಯಾಯ ಎಂದು ಅವರು ಮನಗಂಡರು. ಸಿವಿಕ್‌ಸಂಘ ಕೈಗೊಂಡ ಕಾರ್ಯಕ್ರಮದಿಂದ ಸರಕಾರದ ಮನಸೂ ತಿರುಗಿತು. ಹರಿಜನರ ಪ್ರಶ್ನೆ ಎಲ್ಲೆಲ್ಲೂ ಜೀವಂತ ಪ್ರಶ್ನೆಯಾಗಿ ಉಳಿದು ಎದ್ದು ನಿಂತಿತು. ಸಿವಿಕ್ ಸಂಘದ ಉಪಾಧ್ಯಕ್ಷರಾಗಿದ್ದ ಶ್ರೀ. ಸಿ. ಆರ್. ರೆಡ್ಡಿಯವರು ಆಗ ವಿದ್ಯಾಭ್ಯಾಸ ಇಲಾಖೆಯ ಮುಖ್ಯರೂ ಆಗಿದ್ದರು. ಹರಿಜನರ ಸ್ಥಿತಿಯನ್ನು ಸುಧಾರಿಸಲು ಹೆಣಗಿದವರಲ್ಲಿ ರೆಡ್ಡಿಯವರೂ ಒಬ್ಬರು. ಸಮಯಸಿಕ್ಕಾಗ ಎಲ್ಲೆಂದರಲ್ಲಿ, ಅವರು ಹರಿಜನರ ಪರವಾಗಿ ಭಾಷಣಮಾಡಿದರು. ಮುಖ್ಯವಾಗಿ ಅವರ ಪರಿಶ್ರಮದಿಂದ, ೧೯೨೦ ರಲ್ಲಿ ಎಲ್ಲ ಸ್ಕೂಲುಗಳ ಬಾಗಿಲೂ, ಉಚ್ಚ ಹೀನ ಎಂಬ ಭೇದಭಾವವಿಲ್ಲದೆ ಎಲ್ಲರಿಗೂ ತೆರೆಯಿತು.

ಹರಿಜನರಿಗೆಂದೇ ಒಂದು ಉದ್ಯೋಗಶಾಲೆ ಮೈಸೂರಿನಲ್ಲಿ ತೆರೆಯಿತು. ಮರಗೆಲಸ, ನೆಯ್ಗೆ, ಹೊಲಿಗೆ, ಜೋಡು ಹೊಲಿಯುವುದು, ತೋಟಗಾರಿಕೆ

ಇವುಗಳನ್ನು ಅಲ್ಲಿ ಹೇಳಿಕೊಡುವಂತೆ ಏರ್ಪಾಡಾಯಿತು. ಮುನ್ನೂರು ಜನ ಹುಡುಗರಿಗೆ ಅಲ್ಲಿ ಶಿಕ್ಷಣ ದೊರೆಯುತಿತ್ತು. ಎಲ್ಲರಿಗೂ ಉಚಿತವಾಗಿ ಊಟ ವಸತಿಯನ್ನು ಒದಗಿಸಲಾಗಿತ್ತು.

ಅಲ್ಲಿಂದೀಚೆಗೆ ಈ ಜನಕ್ಕೆ ಒಂದಾಗುತಲೊಂದು ಬಗೆಯ ಸಹಾಯ ಒದಗಿ ಬಂದಿದೆ. ೧೯೨೨ ರಲ್ಲಿ ಈ ಕೋಮಿನ ವಿದ್ಯಾರ್ಥಿಗಳಿಗಾಗಿಯೇ ಬೆಂಗಳೂರಿನಲ್ಲಿ ಶ್ರೀ ನರಸಿಂಹರಾಜ ಹಾಸ್ಟಲು ತೆರೆಯಿತು. ಮಿಕ್ಕ ಜಿಲ್ಲೆಗಳಲ್ಲೂ ಹಾಸ್ಟಲುಗಳು ಏರ್ಪಾಡಾದುವು. ಅವರಿಗಾಗಿ ಬೇಕಾದಷ್ಟು ವಿದ್ಯಾರ್ಥಿ ವೇತನಗಳು ಕೊಡಲ್ಪಟ್ಟುವು. ಹರಿಜನ ವಿದ್ಯಾರ್ಥಿಗಳು ಕಾಲೇಜಿನ ಮೆಟ್ಟಲು ಹತ್ತಿದರು. ಕಾಲೇಜಿನಲ್ಲಿ ಓದುವ ವಿದ್ಯಾರ್ಥಿಗಳಿಗೇ ಬೇರೆ ಹಾಸ್ಟಲು ತೆರೆಯಿತು. ಕಾಲೇಜು ದಾಟಿ ಉತ್ತೀರ್ಣರಾಗಿ ಬಂದ ಪದವೀಧರರು ಸರಕಾರದಲ್ಲಿ ಒಳ್ಳೆಯ ಸ್ಥಾನವನ್ನು ಗಳಿಸಿಕೊಂಡರು. ಮಹಾರಾಜರು ತಮ್ಮ ಅರಮನೆಯಲ್ಲಿ ನಡೆಯುವ ದರ್ಬಾರುಗಳಿಗೆ ಈ ಕೋಮಿನ ಪ್ರತಿನಿಧಿಗಳನ್ನು ೧೯೨೬ ರಲ್ಲಿ ಬರಮಾಡಿಕೊಂಡರು. ಕೋಮಿನವರ ಸ್ಥಿತಿಯನ್ನು ಸುಧಾರಿಸಲು ಈ ಕೆಲಸ ಎಷ್ಟೊ ಸಹಾಯಮಾಡಿತು.

ಮಹಾತ್ಮ ಗಾಂಧಿಯವರು ಹರಿಜನರ ಪರವಾಗಿ ನಿಂತು ಹೋಡೆದಾಡಲು ಮೊದಲು ಮಾಡಿದಂದಿನಿಂದ ಇನ್ನೂ ಎಷ್ಟೋ ಕೆಲಸ ನಡೆದಿದೆ. ಅಪಾರವಾಗಿ ಧನ ಶೇಖರವಾಗಿದೆ. ಹರಿಜನ ಸೇವಕ ಸಂಘ ಸ್ಥಾಪಿತವಾಗಿದೆ. ಸಮಸ್ತ ಹಿಂದೂದೇಶದಲ್ಲಿ ಕೆಲಸ ವ್ಯವಸ್ಥಿತ ರೀತಿಯಲ್ಲಿ ನಡೆಯುತ್ತಿದೆ. ಈ ಸಂಘದವರು ಸ್ಕೂಲು ತೆಗೆದಿದ್ದಾರೆ, ಆಸ್ಪತ್ರೆ ತೆಗೆದಿದ್ದಾರೆ, ಕುಡಿತವನ್ನು ನಿಲ್ಲಿಸಲು ವಿಶೇಷ ಕಾರ್ಯಕ್ರಮ ಕೈಗೊಂಡಿದ್ದಾರೆ, ಎಷ್ಟೋ ರೀತಿಯಲ್ಲಿ ಹರಿಜನರಿಗೆ ನೆರವಾಗುತ್ತಿದ್ದಾರೆ. ಇಷ್ಟು ಬಹುಮುಖವಾಗಿ ಕೆಲಸ ನಡೆಯಲು ಸಾಧ್ಯವಾದುದು, ಸಂಘದ ಮೊದಲಿಗರು ಹಿಂದೆ ಕಷ್ಟಪಟ್ಟು ಕೆಲಸಮಾಡಿದುದರಿಂದಲೇ.

ಹರಿಜನರ ಉದ್ಧಾರಕ್ಕಾಗಿ ಸಿವಿಕ್‌ಸಂಘ ತೆಗೆದುಕೊಂಡ ಕಾರ್ಯಕ್ರಮವನ್ನು ಮೇಲೆ ವಿವರಿಸಿದ್ದೇನೆ. ಮುಖ್ಯವಾಗಿ ಕಾರ್ಯ ನಡೆದಿರುವುದು ಪಟ್ಟಣಗಳಲ್ಲಿ ಮಾತ್ರ. ಹಳ್ಳಿಗಳಲ್ಲಿನ ಸ್ಥಿತಿ ಎಂದಿನಂತೆ ಶೋಚನೀಯವಾಗಿ

ಇದ್ದೇ ಇದೆ. ಅಲ್ಲಿ ನಡೆಯಬೇಕಾದ ಕಾರ್ಯ ಬಹುವಾಗಿದೆ. ನಾನು ಈಗ ಕೆಲಸಮಾಡುತಿರುವುದು ಹಳ್ಳಿಯೊಂದರ ಬಳಿಯಲ್ಲಿ. ಈ ಹಳ್ಳಿಯಲ್ಲಿ ಕೆಲಸ ಮಾಡುವ ಜನವೆಲ್ಲ ಹರಿಜನರು. ಅವರಿಗಾಗಿ ಹಳ್ಳಿಗೆ ಸ್ವಲ್ಪ ದೂರದಲ್ಲಿ ಸ್ಥಳ ಒಂದಿದೆ. ಅಲ್ಲಿ ಹುಲ್ಲುಜೋಪಡಿಗಳನ್ನು ಕಟ್ಟಿಕೊಂಡು ದನಗಳನ್ನು ಕಟ್ಟುವುದಕ್ಕೂ ಅಯೋಗ್ಯವಾದಂಥ ಮನೆಗಳಲ್ಲಿ ಹತ್ತಿಪ್ಪತ್ತು ಜನ ಕುರಿಗಳಂತೆ ವಾಸಮಾಡುತ್ತಿದಾರೆ. ಉತ್ತಮರ ಮನೆಯ ಬಚ್ಚಲುನೀರು ಇವರ ಮನೆಗಳ ಮುಂದೆ ಹಾದುಹೋಗುತ್ತದೆ. ಹಳ್ಳಿಗೆ ಒಂದು ಭಾವಿ ಇದೆ. ಆದರೆ ಅದರಲ್ಲಿನ ನೀರನ್ನು ಈ ಬಡಜನರು ಮುಟ್ಟಕೂಡದು. ದೂರದಲ್ಲಿ ಬಚ್ಚಲಂತಿರುವ ಹಳ್ಳ ಒಂದರಿಂದ ಕುಡಿಯುವ ನೀರನ್ನು ತಂದು ಉಪಯೋಗಿಸಬೇಕು. ಊರಿನ ಧರ್ಮರಕ್ಷಾಕರರೊಬ್ಬರು ಮತ್ತೊಂದು ಭಾವಿ ತೋಡಿಸಿದ್ದಾರೆ. ಆದರೆ ಈ ಭಾವಿಯ ನೀರನ್ನು ಕೂಡ ಈ ಜನ ಮುಟ್ಟಕೂಡದಂತೆ. ಈ ಬಗೆಯ ಅಸಹನೆಯನ್ನು ಕಂಡು ನನ್ನ ಮನಸು ರೋಸಿದೆ. ಅನಿಷ್ಟಕ್ಕೆ ಶನೇಶ್ವರ ಗುರಿಯೆಂಬಂತೆ ಕೆಲವು ದಿನಗಳಿಗೆ ಹಿಂದೆ ಈ ಬಡಜನರ ಮನೆಗಳಲ್ಲಿ ಅಗ್ನಿದೇವ ಒಮ್ಮೆಗೇ ಪ್ರತ್ಯಕ್ಷನಾಗಿ, ಒಂದೇ ಗಳಿಗೆಯಲ್ಲಿ ಆ ಹುಲ್ಲುಮನೆಗಳೆಲ್ಲವನ್ನೂ ಗ್ರಾಸವಾಗಿ ನುಂಗಿಬಿಟ್ಟ. ಮಾರನೆಯ ದಿನ ಕಾಂತಿಗುಂದಿ, ಅಪ್ಪುಗೈ ಇಟ್ಟುಕೊಂಡು ಬಂದ ಈ ಜನವನ್ನು ನೋಡಿ ಕರುಳು ಕಿವಿಚಿದಂತಾಯಿತು. ಯಾವ ಹರಿಜನ ಸೇವಕ ಸಂಘ ಇದ್ದು ಏನು, ಯಾವ ಸರಕಾರ ಇದ್ದು ಏನು, ಇಂಥ ಗೋಳಿನ ಸಮಯದಲ್ಲಿ ಸಹಾಯಮಾಡಲು ಆಗದಿದ್ದರೆ ಏನಿದ್ದು ತಾನೆ ಏನು ಎನಿಸಿತು. ಈ ಬಡವರಿಗೆ ಸರಕಾರದಿಂದ ಪರಿಹಾರ ಕೊಡಿಸಲು ಇನ್ನೂ ಪ್ರಯತ್ನಪಡುತ್ತಿರುವುದಾಗಿದೆ. ಪರಿಹಾರ ಒದಗಿಬಂದಿಲ್ಲ. ಅವರಿಗಾಗಿಯೇ ಭಾವಿ ಒಂದು ತೆಗೆಸಿಕೊಡುತ್ತೇವೆಂದು ಮಾತುಕೊಟ್ಟು ತಿಂಗಳುಗಳು ಉರುಳಿಹೋಗಿವೆ. ಆದರೆ ಗುದ್ದಲಿ ಪೂಜೆ ಇನ್ನೂ ನಡೆದಿಲ್ಲ. ಇವರ ಸ್ಥಿತಿ ಎಂದಿನಂತೆ ಹೀನವಾಗಿಯೇ ಇದೆ.

ಈ ಜನ ಸಹಜವಾಗಿ ಸುಂದರರು. ಹೆಣ್ಣು ಗಂಡುಗಳ ಮೈಕಟ್ಟು ಅಂದ ಯಾವ ಜಾತಿಯ ಗಂಡುಹೆಣ್ಣಿನ ರೂಪಕ್ಕೂ ಕಡಿಮೆಯಾಗಿ ಕಾಣುವುದಿಲ್ಲ. ಈ ಜನದ ಕಪ್ಪು ಮೈಬಣ್ಣ ಕೂಡ ಮೋಹಕವಾದ ಕಪ್ಪು

ಬಣ್ಣ. ಈ ಜನದ ಹಿರಿಯರಿಗೆ ಕಿರಿಯರಿಗೆ ವಿದ್ಯೆ ಕಲಿಯಬೇಕೆನ್ನುವ ಆಸೆ ಬಹಳ. ವಯಸ್ಕರಿಗಾಗಿ ವಿದ್ಯೆ ಕಲಿಸಲು ನಾನು ತೊಡಗಿದಾಗ, ಶಾಲೆಗೆ ಸೇರಲು ಬಂದವರಲ್ಲಿ ಬಹುಮಂದಿ ಹರಿಜನರ ಗುಂಪಿನವರು. ಈ ಜನದ ನಡತೆಯಲ್ಲಿ ಅತಿಯಾದ ವಿನಯ ಎದ್ದು ತೋರುತ್ತದೆ. ಈ ಜನಕ್ಕೆ ಸರಿಯಾದ ಅವಕಾಶವನ್ನು ನಾವು ಒದಗಿಸಿಕೊಟ್ಟರೆ ಏನುತಾನೆ ಮಾಡಲಾರರು.

ಸಿವಿಕ್ ಸಂಘ ಹಿಂದೆ ಈ ಜನಕ್ಕಾಗಿ ಕಷ್ಟಪಟ್ಟಿತು, ಅವರ ಸುಧಾರಣೆಗಾಗಿ ಶ್ರಮಪಟ್ಟಿತು, ಅದರ ಫಲವಾಗಿ ಅವರಲ್ಲಿ ಸ್ವಾಭಿಮಾನವನ್ನು ಬೆಳೆಸಿತು, ಉತ್ತಮರೆನಿಸಿಕೊಂಡ ಮಿಕ್ಕವರೆಲ್ಲ ಇವರ ಪರ ಸಹನೆಯನ್ನು ಔದಾರ್ಯವನ್ನು ತೋರಿಸುವಂತೆ ಪ್ರೇರಿಸಿತು. ಇಷ್ಟುಮಾಡಿದರೂ, ಮಾಡಬೇಕಾದ ಕೆಲಸ ಇನ್ನೂ ಎಷ್ಟಿದೆ ಎಂದು ತೋರಿಸುವುದಕ್ಕೆ ಈ ಪ್ರಸಂಗವನ್ನು ಲಂಬಿಸಬೇಕಾಯಿತು. ಹರಿಜನರ ಉದ್ಧಾರ ಕಾರ್ಯ, ಅವರ ಸ್ಥಿತಿಯ ಸುಧಾರಣೆ ತಂದೆಗೆ ತೀರ ಹಿತವಾದ ಕಾರ್ಯವಾಗಿತ್ತು.

## ಕನ್ನಡಾಭಿಮಾನ – ಕನ್ನಡಸಾಹಿತ್ಯ ಪರಿಷತ್ತು

ಜನರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿ ಉತ್ತಮಗೊಳ್ಳಬೇಕೆಂಬ ಉದ್ದೇಶದಿಂದ ಸಿವಿಕ್ ಸಂಘ ಆ ಕಾಲಕ್ಕೆ ಹುಟ್ಟಿಕೊಂಡಂತೆ, ತಾಯಿ ನುಡಿಯ ಪರ ಕನ್ನಡಿಗರಲ್ಲಿ ಅಭಿಮಾನ ಬೆಳೆಯಲಿ ಎಂಬ ಉದ್ದೇಶದಿಂದ ಕನ್ನಡ ಸಂಘ ಒಂದನ್ನು ಬೆಳಕಿಗೆ ತರುವ ಪ್ರಯತ್ನಕೂಡ ನಡೆಯಿತು. ೧೯೧೪ ರಲ್ಲಿ ಸೇರಿದ ಮೈಸೂರು ಸಂಪದಭ್ಯುದಯ ಸಮಾಜ (Mysore Econoimic conference) ಇದೇ ವಿಷಯವಾಗಿ ಚರ್ಚೆಮಾಡಿ, ಕನ್ನಡ ಭಾಷೆಯಲ್ಲಿ ಗ್ರಂಥಗಳನ್ನು ರಚಿಸುವವರಿಗೆ ಪ್ರೋತ್ಸಾಹವನ್ನು ಕೊಡುವುದಕ್ಕಾಗಿ ಸ್ವತಂತ್ರವಾದ ಅಧಿಕಾರವುಳ್ಳ ಪರಿಷತ್ತೊಂದಿರಬೇಕು. ಅಂಥ ಪರಿಷತ್ತನ್ನು ಸರಕಾರದವರು ಅಂಗೀಕರಿಸಿ ಅದಕ್ಕೆ ಸಹಾಯಮಾಡಬೇಕು, ಎಂದು ತೀರ್ಮಾನಿಸಿತು. ಈ ಉದ್ದೇಶಸಾಧನೆಗಾಗಿ ಒಂದು ಉಪಸಮಿತಿ ನೇಮಕವಾಯಿತು. ಈ ಉಪಸಮಿತಿಯಲ್ಲಿ ಶ್ರೀಗಳಾದ ಮಹಿಷಿ ಶಾಮರಾಯರು, ಕರ್ಪೂರ ಶ್ರೀನಿವಾಸರಾಯರು, ಪಿ. ಎಸ್. ಅಚ್ಯುತರಾಯರು ಸೇರಿದ್ದರು. ಈ ಮಹನೀಯರು ಎಲ್ಲ ಕನ್ನಡನಾಡಿನ ಮುಖಂಡರನ್ನು ಬೆಂಗಳೂರಿಗೆ ಬರಮಾಡಿಕೊಂಡು ಒಂದು ಸಮ್ಮೇಳನವನ್ನು ನೆರೆಯಿಸಿದರು. ೧೯೧೫ ರ ಮೇ ತಿಂಗಳ ಮೂರನೆಯ ತಾರೀಖು ಬೆಂಗಳೂರು ಕೋಟೆ ಹೈಸ್ಕೂಲಿನಲ್ಲಿ ಕನ್ನಡ ಮುಖಂಡರ ಸಭೆ ಸೇರಿತು. ಈ ಸಭೆಯಲ್ಲಿ 'ಕರ್ಣಾಟಕ ಭಾಷಾ ಸಂಸ್ಕರಣಕ್ಕಾಗಿ, ಕರ್ಣಾಟಕ ಗ್ರಂಥಾವಳಿಯ ಅಭಿವೃದ್ಧಿಗಾಗಿ ಬೆಂಗಳೂರಲ್ಲಿ ಕರ್ಣಾಟಕ ಸಾಹಿತ್ಯ ಪರಿಷತ್ತು ಎಂಬ ಹೆಸರಿನ ಪ್ರಧಾನ ಸಭೆಯೊಂದು ಸ್ಥಾಪಿತವಾಗಬೇಕು' ಎಂದು ಒಂದು ನಿರ್ಣಯವಾಯಿತು. ಪರಿಷತ್ತಿನ ರಚನಾಕ್ರಮ ಚರ್ಚಿತವಾಗಿ ನಿಬಂಧನೆಗಳು ರೂಪಿತವಾದುವು. ಈ ರೀತಿ ೧೯೧೫ ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಜನ್ಮತಾಳಿತು.

ಪರಿಷತ್ತು ಹುಟ್ಟಿದಂದಿನಿಂದ ಹಿಡಿದು ತಮ್ಮ ಜೀವಿತದ ಕೊನೆಯ ಕಾಲದವರೆಗೆ ತಂದೆ ಪರಿಷತ್ತಿನ ಸದಸ್ಯರಾಗಿದ್ದುಕೊಂಡು ಅದರ ಕಾರ್ಯಕಲಾಪಗಳಲ್ಲಿ ಭಾಗವಹಿಸುತ್ತ ಬಂದಿದ್ದರು. ಕನ್ನಡ ಭಾಷೆಯ ಪರ ಅಭಿ

ಮಾನ ನಮ್ಮ ಮನೆಯಲ್ಲಿ ಪಿತ್ರಾರ್ಜಿತ ಆಸ್ತಿಯಂತೆ ಹಿರಿಯರಿಂದ ಕಿರಿಯರಿಗೆ ಬರುತ್ತ ಬಂದಿದೆ. ನಮ್ಮ ಅಜ್ಜಿಗೆ ಇದ್ದಷ್ಟು ಭಾಷಾಭಿಮಾನವಿದ್ದವರನ್ನು ನಾನು ಕಾಣೆ. ನಮ್ಮ ತಂದೆಗೆ ಕನ್ನಡದಲ್ಲಿ ಆ ಹಿಂದಿನ ಕಾಲದಲ್ಲಿ ಹುಟ್ಟಿದ್ದ ಅಭಿಮಾನಕ್ಕೆ ಕಾರಣ ಅವರ ತಾಯಿ ಚಿಕ್ಕಂದಿನಿಂದ ತೋರಿದ ಆದರ್ಶವಲ್ಲದೆ ಬೇರೆ ಇನ್ನಾವುದೂ ಅಲ್ಲ. ನಮ್ಮ ಅಮ್ಮನ (ಅಜ್ಜಿಯನ್ನು ನಮ್ಮ ಮನೆಯಲ್ಲಿ ಎಲ್ಲರೂ ಅಮ್ಮನೆಂದೇ ಕರೆಯುತಿದ್ದೆವು) ಬಾಯಿಂದ ಪುರಂದರದಾಸರ ದೇವರ ನಾಮಗಳನ್ನಾಗಲಿ, ಹರಿಭಕ್ತಿಸುಧಾರಸವನ್ನಾಗಲಿ, ಅಜ್ಞಾತ ಕವಿಗಳನೇಕರ ಮನಮೋಹಕ ಗೀತಗಳನ್ನಾಗಲಿ ಕೇಳಿದವರು ಯಾರಿಗೇ ಆಗಲಿ, ಇಂಥ ಹಾಡು, ಇಂಥ ಗೀತಗಳನ್ನೊಳಗೊಂಡ ಭಾಷೆಯು ಪರ ಅಭಿಮಾನ ಉಕ್ಕದೆ ಇರುತಿರಲಿಲ್ಲ. ಅಮ್ಮನ ಕಂಠ ಬಹು ಮಧುರವಾದ ಕಂಠ. ಅವರು ಹಾಡುತ್ತ ಕುಳಿತರೆಂದರೆ ಕಾಲದ ಪರಿವೆಯಾಗುತಿರಲಿಲ್ಲ. ಎಂಥವರೂ ಮಂತ್ರಿಸಿದವರಂತೆ ಮುಗ್ಧರಾಗಿ ಕೇಳುತ್ತ ಕುಳಿತಿರುತಿದ್ದರು. ರಂಪಮಾಡುತಿದ್ದ ಮಕ್ಕಳು ತಣ್ಣಗೆ ನಿದ್ದೆ ಹೋಗುತಿದ್ದವು. ನನ್ನ ಮನಸದಲ್ಲಿ ಅಮ್ಮನ ಗಾನ ಇನ್ನೂ ಅಮರವಾಗಿ ಉಳಿದಿದೆ. ಈಗಿರುವ ಬುದ್ಧಿ ನನಗೆ ಆಗ ಇದ್ದಿದ್ದರೆ ಎಂದು ಒಂದೊಂದು ಸಲ ಪರಿತಾಪಪಡುತ್ತೇನೆ. ಅಮ್ಮನ ನೆನಪಿನ ಬೊಕ್ಕಸದಲ್ಲಿ ರತ್ನಪ್ರಾಯವಾದ ಅನೇಕ ಹಾಡುಗಳಿದ್ದುವು. ಅವುಗಳನ್ನು ಬರೆದವರು ಯಾರೊ ಕಾಣೆ. ಅವುಗಳೆಲ್ಲ ಜನಪದ ಗೀತಗಳಿರಬೇಕು. ಅವುಗಳನ್ನು ನಾನು ಈಚೆಗೆ ಎಲ್ಲಿಯೂ ಓದಿದ ನೆನಪಿಲ್ಲ. ಅವುಗಳನ್ನು ಹಾಡುವ ಧಾಟಿ ಬಲು ಸೊಗಸು, ಬಲು ಸೊಗಸು. ಅದು ಅಮ್ಮನೊಂದಿಗೇ ಮಾಯವಾಗಿ ಹೋಯಿತು. ಕೆಲವು ಹಾಡುಗಳನ್ನು ಯಾವಾಗಲೋ ಬರೆದುಕೊಂಡಿದ್ದೆ. ಆದರೆ ಅವುಗಳನ್ನು ಅಂದು ತೋರಿಸುವ ಹಾಗಿಲ್ಲ. ಹಾಡಿನ ಮಾಧುರ್ಯ ಪದಗಳಲ್ಲಿ ಸೆರೆಸಿಕ್ಕಿ ನಿಸ್ಸಾರವಾಗಿ ಪುಸ್ತಕದ ಹಾಳೆಗಳಲ್ಲಿ ಅಡಗಿಬಿಟ್ಟಿದೆ.

ಬಂಕಿಂಚದ್ರರ ಕಾದಂಬರಿಗಳನ್ನು ಕನ್ನಡಕ್ಕೆ ವೆಂಕಟಾಚಾರ್ಯರು ತಂದುಕೊಟ್ಟದು ಯಾವಾಗಲೋ ಕಾಣೆ. ನಾನು ಹುಟ್ಟಿದುದು ೧೯೧೮ ರಲ್ಲಿ. ನಾನು ಆರುವರ್ಷದ ಹುಡುಗನಾದಾಗಿನಿಂದ ನನಗೆ ನೆನಪಿದೆ, ನಮ್ಮ

ಮನೆಯಲ್ಲಿ ಈ ಕಾದಂಬರಿಗಳ ಪಾರಾಯಣ ವಾರಕ್ಕೊಮ್ಮೆಯಾದರೂ ನಡೆಯುತ್ತಿತ್ತು. ರಜದ ದಿನಗಳಲ್ಲಿ ಮಧ್ಯಾಹ್ನದ ಊಟವಾದಮೇಲೆ ನಡುಮನೆಯಲ್ಲಿ ಮನೆಯವರೆಲ್ಲ ಸೇರುತಿದ್ದರು. ನಮ್ಮ ಅಣ್ಣ ಇಲ್ಲವೆ ಸೋದರತ್ತೆಯರಲ್ಲಿ ಒಬ್ಬರು ಕಾದಂಬರಿಯೊಂದನ್ನು ತೆಗೆದು ಮೊದಲನೆಯ ಪುಟದಿಂದ ಹಿಡಿದು ಓದಲು ತೊಡಗುತಿದ್ದರು. ಸಂಸ್ಕೃತ ಪದ ಭೂಯಿಷ್ಠವಾದ ಧೀರ ಗಂಭೀರಶೈಲಿ, ಓದುವವರು ಕೂಡ ಸ್ಪಷ್ಟವಾಗಿ ಗಂಭೀರವಾಗಿ ಓದುತಿದ್ದರು. ಕುಳಿತಿದ್ದವರೆಲ್ಲರೂ ಏನೊಂದೂ ಗಲಾಟೆಮಾಡದೆ ಕುಳಿತು ಕೇಳುವರು. ಚಿಕ್ಕವನಾದ ನಾನೂ ಅಮ್ಮನ ಬಳಿಯಲ್ಲಿ ಕುಳಿತು ಕೇಳುತಿದ್ದೆ. ನನ್ನ ಬಾಲ್ಯವೆಲ್ಲ ಇಂಥ ವಾತಾವರಣದಲ್ಲಿ ಕಳೆಯಿತು. ಈ ಬಗೆಯ ವ್ಯಾಸಂಗದಿಂದ ದೊರಕಬಹುದಾದ ಸಂಸ್ಕಾರ ಅಮ್ಮನ ದೆಸೆಯಿಂದ ನಮಗೆಲ್ಲ ಚಿಕ್ಕಂದಿನಲ್ಲೇ ದೊರೆಯಿತು. ವಿಷವೃಕ್ಷ, ಆನಂದಮಠ, ದುರ್ಗೇಶನಂದಿನಿ, ನವಾಬನಂದಿನಿ, ಮಾಧವೀಲತಾ, ಚಂದ್ರಶೇಖರ, ಅಮೃತಪುಲಿನ, ಸೀತಾರಾಮ ಇಂಥ ಕಾದಂಬರಿಗಳನ್ನು ಒಂದಾಗುತಲೊಂದು ಓದಿ ಈ ಗೋಷ್ಠಿಗಳಲ್ಲಿ ಮುಗಿಸಿಬಿಡುತಿದ್ದೆವು. ಸ್ವಲ್ಪ ವಯಸ್ಸಾದಮೇಲೆ ನಾನೂ ಕೆಲವು ಕಾದಂಬರಿಗಳನ್ನು ಓದಿ ಹೇಳುತಿದ್ದೆ. ಓದಲು ನನಗೆ ವಿಶೇಷವಾದ ಉತ್ಸಾಹವಿರುತಿತ್ತು. ಹನ್ನೆರಡು ವರ್ಷದವನಿದ್ದಾಗ ನನಗೆ ಈ ಎಲ್ಲ ಕಾದಂಬರಿಗಳೂ ಸುಮಾರಾಗಿ ಪರಿಚಿತವಾಗಿದ್ದುವು. ಓದಬೇಕೆನ್ನುವ ದಾಹ ಎಲ್ಲರಲ್ಲಿಯೂ ಅಧಿಕವಾಗಿತ್ತು. ನಮ್ಮ ಸೋದರತ್ತೆ ಉಪಾಧ್ಯಾಯ ವೃತ್ತಿಯಲ್ಲಿ ಇದ್ದರೆಂದು ಹಿಂದೆ ತಿಳಿಸಿದೇನೆ. ಅವರು ಹೋಗುತಿದ್ದ ಸ್ಕೂಲುಗಳ ಸರಸ್ವತಿ ಭಂಡಾರದಲ್ಲಿ ವೆಂಕಟಾಚಾರ್ಯರ ಕಾದಂಬರಿ ಯಾವುದು ಇದ್ದರೂ ಅದನ್ನು ಮನೆಗೆ ತರುತಿದ್ದರು. ಅದುವರೆಗೂ ನಾವು ಓದಿಲ್ಲದಿದ್ದುದು ಸಿಕ್ಕರೆ ನಿಧಿ ಸಿಕ್ಕಂತೆ ಕಂಡು ಸಂತೋಷಿಸುತಿದ್ದೆವು. ಅದನ್ನು ಜೀರ್ಣಿಸಿಕೊಳ್ಳುವವರೆಗೂ ತೃಪ್ತಿ ಇರುತಿರಲಿಲ್ಲ.

ಯಾವುದು ಒಳ್ಳೆಯದನ್ನು ಕಾಣಲಿ, ಪುಸ್ತಕವಾಗಲಿ. ಗೊಂಬೆಯಾಗಲಿ, ಚಿತ್ರಪಟವಾಗಲಿ ಅದನ್ನು ಮನೆಯಲ್ಲಿ ತಂದು ಇಡುವ ಸಂಪ್ರದಾಯ ಅಮ್ಮನ ಕಾಲದಿಂದ ಇಂದಿನವರೆಗೂ ನಡೆದು ಬಂದಿದೆ ವೆಂಕಟಾ

ಚಾರ್ಯರು ಬರೆದ ಮುಕ್ಕಾಲುವಾಸಿ ಕಾದಂಬರಿಗಳ ಪ್ರತಿ ನಮ್ಮ ಮನೆಯಲ್ಲಿ ಇತ್ತು. ಅದನ್ನು ಅಮ್ಮ ಒಂದು ಬೀರುವಿನಲ್ಲಿಟ್ಟು ಜೋಪಾನವಾಗಿ ಕಾಪಾಡಿಕೊಂಡು ಬಂದಿದ್ದರು. ಅದನ್ನು ಓದಬೇಕೆನ್ನುವ ದಿವಸ ಮಾತ್ರ ಅದು ಆಚೆ ಬರುತಿತ್ತು. ಓದಿಯಾದಮೇಲೆ ಪೆಟ್ಟಿಗೆ ಸೇರುತಿತ್ತು. ಮನೆ ಯಿಂದ ಪುಸ್ತಕಗಳನ್ನು ಹೊರಗೆ ಕೊಡುವುದೆಂದರೆ ಅಮ್ಮನಿಗೆ ಆಗುತಿರ ಲಿಲ್ಲ. ಅವರ ಕೈಲಿ ಒಡೆತನ ಇರುವವರೆಗೂ ನಮ್ಮ ಮನೆಯ ಪುಸ್ತಕಗಳು ಯಾವುವೂ ಮನೆಬಿಟ್ಟು ಹೊರಹೋದ ನೆನಪಿಲ್ಲ. ನಮ್ಮ ಕೈಲಿ ಆಡಳಿತ ಬಂದಮೇಲೆ ಅಪೂರ್ವವಾದ ಪುಸ್ತಕಗಳು ಹಲವು ಹೆರರ ಪಾಲಾದುವು. ಅಮ್ಮನಿಗೆ ತೀರ ಮೆಚ್ಚಿಕೆಯಾಗಿದ್ದ ಕೆಲವು ಪುಸ್ತಕಗಳು ಹೋದುವು ಹಿಂದಕ್ಕೆ ಬರಲಿಲ್ಲ. ಅಮ್ಮ ಈಗಿದ್ದಿದ್ದರೆ ನಮ್ಮ ತಪ್ಪನ್ನು ಕ್ಷಮಿಸುತಿರಲಿಲ್ಲವೆಂದು ನನಗನಿಸುತ್ತದೆ. ಅಮ್ಮ ಇಟ್ಟುಕೊಂಡಿದ್ದ ಕಟ್ಟುಪಾಡು ಎಷ್ಟು ಅವಶ್ಯಕ ಎನ್ನುವುದನ್ನು ಈಗೀಗ ನಾವು ಮನಗಾಣುತಿದ್ದೇವೆ.

ರವಿವರ್ಮನ ಪಟಗಳನ್ನು ಕಂಡರೆ ಈ ಕಾದಂಬರಿಗಳಲ್ಲಿದ್ದಷ್ಟೆ ಪ್ರೇಮ ನಮಗಿತ್ತು. ಭಾರತೀಯ ಚಿತ್ರಕಲೆಯಲ್ಲಿ ರಾಜಾರವಿವರ್ಮನ ಸ್ಥಾನವೇನು ಎಂದು ನಾವು ವಿಚಾರ ಮಾಡಿರಲಿಲ್ಲ. ಭಾರತೀಯ ಚಿತ್ರಕಲೆ ಎಂದರೇ ನೆನ್ನುವುದೇ ನಮಗೆ ತಿಳಿದಿರಲಿಲ್ಲ. ನಮ್ಮ ಮನೆಯ ಮೂಲೆ ಮೂಲೆಯಲ್ಲಿ ಹಿಂದೆ, ಎಲ್ಲೆಂದರಲ್ಲಿ ರವಿವರ್ಮನ ಚಿತ್ರಪಟಗಳು ತೂಗುಹಾಕಿದ್ದುವು ಈಚೆಗೆ ರವಿವರ್ಮನ ಚಿತ್ರಗಳ ವಿಷಯವಾಗಿ ಬಂದಿರುವ ಟೀಕೆಗಳನ್ನೋದಿದ ಮೇಲೆ ಮೊದಲ ಸೊಗಸು ಈಗ ಅವುಗಳಲ್ಲಿ ಕಾಣುತ್ತಿಲ್ಲ, ಆದರೆ ಚಿಕ್ಕಂದಿನಲ್ಲಿ ನಮ್ಮ ಮನಸನ್ನು ಈ ಚಿತ್ರಗಳು ಆಕರ್ಷಿಸುತಿದ್ದಂತೆ ಬೇರೆ ಯಾವ ಚಿತ್ರಗಳೂ ಆಕರ್ಷಿಸುತಿರಲಿಲ್ಲ. "ಶಕುಂತಲಾ ಪ್ರಣಯ ಪತ್ರ ಲೇಖನ", "ರಾಮಸಾಗರ ದರ್ಪಹರಣ" "ರಾಧಾ ಸಖಿ" ಈ ಚಿತ್ರಗಳ ಕಡೆ ಮೇಲಿಂದಮೇಲೆ ನಮ್ಮ ದೃಷ್ಟಿ ಹೋಗುತಿತ್ತು. ಅಮ್ಮ ಬಹು ಇಂಪಾಗಿ ಹಾಡು ಹೇಳುತಿದ್ದರೆಂದು ಹಿಂದೆಯೇ ತಿಳಿಸಿದ್ದೇನೆ. ಅವರು ಹೇಳುತಿದ್ದ ಹಾಡುಗಳಲ್ಲಿ ಕೃಷ್ಣನ ಬಾಲಲೀಲೆಗೆ ಸಂಬಂಧಿಸಿದ ಹಾಡುಗಳೇ ಅನೇಕವಾಗಿದ್ದುವು. ರವಿವರ್ಮನ ಚಿತ್ರಗಳಲ್ಲೂ ಕೆಲವು ಕೃಷ್ಣನ ಬಾಲ

ಲೀಲೆಯ ಚಿತ್ರಗಳಿದ್ದುವು. ಹಾಲನ್ನು ಕರೆಯುತ್ತ ಕುಳಿತ ಯಶೋದೆ ಅವಳೆದುರಿಗೆ ಬಾಯನ್ನು ಆ ಎಂದು ತೆಗೆದು ನಿಂತಿದ್ದ ತುಂಟಮುಖದ ಕೃಷ್ಣನ ಪಠ ಒಂದು ನಾವು ಮಲಗುವ ಕಡೆ ತೂಗುಹಾಕಿತ್ತು. ಅಮ್ಮ ನಾವು ಮಲಗುವ ಮುಂಚೆ 'ಕೃಷ್ಣ ನೀ ಬೇಗನೆ ಬಾರೊ' ಎಂದು ಹಾಡು ಹೇಳುತಿದ್ದರು. ಈಚೆಗೆ ನಾನು ಈ ಹಾಡನ್ನು ಬಹುಕಡೆ ಕೇಳಿದ್ದೇನೆ. ಕೇಳಿದಷ್ಟು ಸಲವೂ ಮನಸಿಗೆ ನಿರಾಸೆಯಾಗಿದೆ. ಅಮ್ಮನಷ್ಟು ಭಾವ ಗರ್ಭಿತವಾಗಿ ಈ ಹಾಡು ಹೇಳುವವರನ್ನು ನಾನು ಈವರೆಗೂ ಕಂಡಿಲ್ಲ. "ತಾಯಿಗೆ ಬಾಯಲ್ಲಿ ಜಗವನೆ ತೋರಿದ" ಎಂಬ ನುಡಿ ಬಂದ ಒಡನೆ ನಮ್ಮ ದೃಷ್ಟಿ, ನಮ್ಮ ಅಮ್ಮನ ದೃಷ್ಟಿ, ಆ ಪಠದ ಕಡೆ ಸುಳಿಯುತಿತ್ತು. ಆ ಚಿತ್ರಕ್ಕೆ ಆಗ ಕಳೆಬಂದು ನಿಜವಾಗಿ ಬಾಯಲ್ಲಿ ಜಗತ್ತನ್ನು ತೋರಿಸಿದ ಕೃಷ್ಣನನ್ನೆ ಕಂಡಂತೆ ಭಾಸವಾಗುತಿತ್ತು.

ನಾವು ಬೆಳೆದುದು ಇಂಥ ಕನ್ನಡದ ವಾತಾವರಣದಲ್ಲಿ. ಕನ್ನಡ ಕತೆ ಕಾದಂಬರಿ, ಕನ್ನಡ ಪದ ಹಾಡು, ಇವು ನಮ್ಮ ಎಳೆತನದ ಜೀವನದಲ್ಲಿ ಹಾಸುಹೊಕ್ಕಾಗಿ ಬೆರೆತುಹೋಗಿದ್ದುವು. ಕನ್ನಡದ ಮೇಲಿನ ಅಭಿಮಾನ ನಮ್ಮಮ್ಮನಿಂದಾಗಿ ಈ ರೀತಿ ನಮ್ಮಲ್ಲಿ ಬೆಳೆದುಕೊಂಡು ಬಂತು. ಮಕ್ಕಳಿಗೆ Good Morning ಮಾಡುವುದನ್ನು ಹೇಳಿಕೊಡುವುದಾಗಲಿ, ಮಕ್ಕಳಿಗೆ ಬೇಬಿ ಎಂದು ಹೆಸರಿಡುವುದಾಗಲೀ, ಅಪ್ಪನನ್ನು ಡಾಡಿ ಎಂದು, ಅಮ್ಮನನ್ನು ಮಾಮಿ ಎಂದು ಕರೆಯುವುದಾಗಲಿ, ಈ ಬಗೆಯ ನವನಾಗರಿಕ ಸಂಬೋಧನೆಗಳು ನಮ್ಮ ಮನೆಯಲ್ಲಿ ಎಂದಿಗೂ ಕೇಳಬರಲಿಲ್ಲ.

ತಂದೆ ವಿದೇಶಕ್ಕೆ ಹೋಗಿ ತಾನು ಕಂಡ ನೋಟ, ಪಟ್ಟ ಅನುಭವ ಇವುಗಳನ್ನು ಕನ್ನಡದಲ್ಲಿ ಬರೆದಿಟ್ಟರು. ಅಂಥ ಬಗೆಯ ಬರವಣಿಗೆ ಆಗ ಕನ್ನಡ ಭಾಷೆಯಲ್ಲಿ ಇರಲಿಲ್ಲ. ಕನ್ನಡ ಸಾಹಿತ್ಯ ಪರಿಷತ್ತು ಆಗಿನ್ನೂ ಹುಟ್ಟಿಕೊಂಡಿರಲಿಲ್ಲ. ಕನ್ನಡ ಕಂಡರೆ ಎಲ್ಲ ಕಡೆಯಲ್ಲೂ ಅನಾದರವಿತ್ತು. ಅಂಥ ಕಾಲದಲ್ಲಿ, ಹಳೆಯ ಕಾಲದ ಕತೆ ಹಳಗನ್ನಡ ಕಾವ್ಯ ಇವುಗಳ ಹೊರತು ಬೇರೆ ಬಗೆಯ ಗದ್ಯರಚನೆ ಇಲ್ಲದಿದ್ದ ಕಾಲದಲ್ಲಿ, ಕನ್ನಡದಲ್ಲಿ ಬರೆಯುವ ಧೈರ್ಯ ತಂದುಕೊಂಡು, ಕೈಗೊಂಡ ಕೆಲಸವನ್ನು ಯಶಸ್ವಿಯಾಗಿ ನೆರ

ವೇರಿಸಿದ ಕೀರ್ತಿ ತಂದೆಯದಾಯಿತು. ತಾಯಿ ಚಿಕ್ಕಂದಿನಿಂದ ಬೆಳೆಸಿದ ಕನ್ನಡದ ಮೇಲಿನ ಅಭಿಮಾನವೆ ಅವರನ್ನು ಈ ಕೆಲಸ ಕೈಕೊಳ್ಳುವಂತೆ ಪ್ರೇರಿಸಿರಬೇಕು.

ತಂದೆ ವಿದೇಶದಿಂದ ಹಿಂತಿರುಗಿ ಬರುವ ಹೊತ್ತಿಗೆ ಪರಿಷತ್ತು ಸ್ಥಾಪಿತವಾಗಿತ್ತು. ತಂದೆ ಬಂದವರೇ ಪರಿಷತ್ತಿನ ಸದಸ್ಯರಾದರು. ವಾರ್ಷಿಕ ಅಧಿವೇಶನ ಕಾಲಗಳಲ್ಲಿನ ಚಟುವಟಿಕೆಯಲ್ಲದೆ ಬೇರೆ ದಿವಸಗಳಲ್ಲಿ ಪರಿಷತ್ತು ಆಗ ಏನುಕಾರ್ಯ ಮಾಡುತ್ತಿತ್ತೋ ನನಗೆ ತಿಳಿಯದು. ಪರಿಷತ್ತಿನ ಸದಸ್ಯರಾಗಿದ್ದುದು ವಿನಹ ಬೇರೆ ಯಾವ ಆಸಕ್ತಿಯನ್ನು ತಂದೆ ತೆಗೆದುಕೊಂಡಂತೆ ಕಾಣಲಿಲ್ಲ. ಸರಕಾರದ ಕೆಲಸದಿಂದ ನಿವೃತ್ತರಾಗುವವರೆಗೆ ಅವರು ಪರಿಷತ್ತಿನ ಕಾರ್ಯಕಲಾಪದಲ್ಲಿ ನೇರವಾಗಿ ಭಾಗವಹಿಸಲಿಲ್ಲ.

ಕನ್ನಡ ಪುಸ್ತಕಗಳಿಗೆಂದೇ ನಮ್ಮ ತಂದೆ ಒಂದು ಅಲಮಾರನ್ನು ಮೀಸಲಾಗಿ ಇರಿಸಿದ್ದರು. ನನಗೆ ಬುದ್ಧಿಬರುವ ಹೊತ್ತಿಗೆ ಈ ಅಲಮಾರಿನ ಒಂದು ಅರೆಯೆಲ್ಲ ಸಾಹಿತ್ಯ ಪರಿಷತ್ಪತ್ರಿಕೆಯ ಸಂಚಿಕೆಗಳಿಂದ ತುಂಬಿ ಹೋಗಿತ್ತು. ಸರಸ್ವತಿ ಚಿತ್ರ ಹೊರಹೊದಿಕೆಯಮೇಲಿದ್ದ ಈ ಪುಸ್ತಕಗಳನ್ನು ನೋಡಿ ಇದರಲ್ಲಿ ಏನಿದೆಯೋ ಎಂದು ಆಶ್ಚರ್ಯಪಡುತಲಿದ್ದೆ. ಇನ್ನೊಂದು ಅರೆಯಲ್ಲಿ ಪ್ರಬುದ್ಧಕರ್ಣಾಟಕದ ಸಂಚಿಕೆಗಳು ತುಂಬಿದ್ದುವು. ಪ್ರಬುದ್ಧ ಕರ್ಣಾಟಕ ಮೊದಲಾದಾಗಿನಿಂದ ಅದಕ್ಕೆ ಚಂದಾದಾರರಾಗಿ ಅದನ್ನು ತರಿಸಿಕೊಳ್ಳುತಿದ್ದರು. ಒಂದು ಪ್ರತಿಯೂ ಹಾಳಾಗಿ ಹೋಗದಂತೆ ಅವುಗಳನ್ನು ಕಾಪಾಡಿಕೊಂಡು ಬಂದಿದ್ದರು. ಅಲಮಾರಿನ ಮಿಕ್ಕ ಅರೆಗಳಲ್ಲಿ ಕೆಲವು ಹಳಗನ್ನಡ ಕಾವ್ಯಗಳು, ಮಹಾರಾಜರುಗಳ ವಂಶಾವಳಿಗಳು, ಪ್ರಿಂರೋಜವಿಜಯ ಮುಂತಾದ ಆಕಾಲದ ಗದ್ಯ ರಚನೆಗಳು ತುಂಬಿದ್ದವು. ಅಲಮಾರಿಗೆ ಯಾವಾಗಲೂ ಬೀಗ ಹಾಕಿರುತಿತ್ತು. ಸುಲಭಕ್ಕೆ ಬೀಗದಕ್ಕೆ ನಮ್ಮಕೈಗೆ ಸಿಗುತಿರಲಿಲ್ಲ. ತಂದೆ ಮನೆಯಲ್ಲಿಲ್ಲದ ವೇಳೆ ಬೀಗದ ಕೈಯನ್ನು ಕದ್ದು ಈ ಪುಸ್ತಕಗಳನ್ನು ಓದಬೇಕಾಗಿತ್ತು. ನಾವು ಇನ್ನು ಯಾವುದನ್ನು ಆಗ ಓದುತಿರಲಿಲ್ಲ; ನಮ್ಮ ದೃಷ್ಟಿಯೆಲ್ಲ ಪ್ರಬುದ್ಧಕರ್ಣಾಟಕದ ಸಂಚಿಕೆಗಳ ಮೇಲೆ, ಅದರಲ್ಲೂ ಒಳಗಿದ್ದ ಸಣ್ಣ ಕತೆಗಳ ಮೇಲೆ ಇರುತಿತ್ತು.

" ಮುರುಕುಬೊಂಬೆ", " ರಾಧೆ", " ನೆನಪು", " ಲಕ್ಷ್ಮಣರಾಯನ ಭಾಗ್ಯ " ಮೊದಲಾದ ಕತೆಗಳನ್ನು ನಾನು ಮೇಲಿಂದಮೇಲೆ ಓದುತ್ತಿದ್ದುದು ಈಗ ನೆನಪಿಗೆ ಬರುತ್ತದೆ. ಪ್ರಬುದ್ಧ ಕರ್ಣಾಟಕ ಮನೆಗೆ ಬಂದ ದಿನ ಹಬ್ಬದ ದಿನದಂತೆ ಸಡಗರಪಟ್ಟುಕೊಳ್ಳುತ್ತಿದ್ದೆವು. ಮಿಕ್ಕೆಲ್ಲ ಕೆಲಸ ಏನೇ ಇರಲಿ ಬಿಟ್ಟು ಓದಲು ತೊಡಗುತ್ತಿದ್ದೆವು. ನಾನು ಮುಂದು ತಾನುಮುಂದು ಎಂದು ಓದಲು ಆತುರಪಡುತ್ತಿದ್ದೆವು. ಕೆಲವು ವರ್ಷಗಳ ಹಿಂದೆ ಪ್ರಬುದ್ಧ ಕರ್ಣಾಟಕದ ಬರಹಗಾರರ ಪಂಕ್ತಿಯಲ್ಲಿ ನನ್ನ ಹೆಸರೂ ಇಣುಕಿನೋಡಿತು. ನಾನು ಹೆಮ್ಮೆಪಟ್ಟುಕೊಳ್ಳುವ ಹಾಗೆ ಮಾಡಿರುವುದರಲ್ಲಿ ಇದೂ ಒಂದು. ಹೊಗಳಿಕೆಯುಮಾತನ್ನು ತಂದೆ ಯಾವಾಗಲೂ ಎದುರಿಗೆ ಹೇಳಿದವರಲ್ಲ. ಎಂದೂ ಹೇಳದವರು ಅಂದು ಹೇಳಿದರು. ತಂದೆಗೆ ಕನ್ನಡದಲ್ಲಿದ್ದ ಅಭಿಮಾನವನ್ನು ನೆನಸಿಕೊಂಡಾಗ ನನ್ನ ಕಣ್ಣಮುಂದೆ ಈ ಎಲ್ಲ ಸಂಗತಿಗಳು ನೆನ್ನೆ ತಾನೆ ನಡೆದುವೇನೊ ಎನ್ನುವಷ್ಟು ಸಹಜವಾಗಿ ಬಂದು ನಿಲ್ಲುತ್ತವೆ.

ಸರಕಾರದ ಕೆಲಸದಿಂದ ನಿವೃತ್ತರಾದಮೇಲೆ ತಂದೆ ಯಾವರೀತಿ ಪರಿಷತ್ತಿನ ಕಾರ್ಯಗಳಲ್ಲಿ ನೆರವಾಗುತ್ತ ಬಂದರು ಎನ್ನುವುದನ್ನು ಸಂದರ್ಭ ಬಂದಾಗ ಮುಂದೆ ವಿವರಿಸುತ್ತೇನೆ.

## ಮಿಥಿಕ್ ಸೊಸೈಟಿ

ಸಮಾಜದ ಏಳಿಗೆಗಾಗಿ ನುಡಿಯ ಏಳಿಗೆಗಾಗಿ ಈ ಕಾಲಕ್ಕೆ ಸಂಘಗಳು ಹುಟ್ಟಿಕೊಂಡು ತಮ್ಮ ಕಾರ್ಯ ನಡೆಸಿಕೊಂಡು ಬಂದಂತೆ, ನಾಡಿನ ಏಳಿಗೆಯನ್ನು ಸಾಧಿಸುವುದಕ್ಕಾಗಿ ಕೆಲವು ಇಂಗ್ಲೀಷು ಮಹನೀಯರ ಪ್ರೋತ್ಸಾಹದಿಂದ ಮಿಥಿಕ್ ಸೊಸೈಟಿ ಎಂಬ ಸಮಾಜ ೧೯೧೦ ರಲ್ಲಿ ಸ್ಥಾಪಿತವಾಗಿತ್ತು. ನಮ್ಮ ದೇಶದ ಹಿಂದಿನ ಚರಿತ್ರೆಯನ್ನು ಶೋಧಮಾಡುವುದೇ ಈ ಸಂಘ ಇಟ್ಟುಕೊಂಡ ಉದ್ದೇಶವಾಗಿತ್ತು. ಆ ಕಾಲದಲ್ಲಿ, ವಿದ್ಯಾವಂತರಾದವರಿಗೂ ಕೂಡ ತಮ್ಮ ನಾಡಿನ ಹಿರಿಮೆಯು ಅರಿವಾಗಿರಲಿಲ್ಲ. ದೇಶದ ಹಿಂದಿನ ಚರಿತ್ರೆ ತಿಳಿದಿರಲಿಲ್ಲ. ಇಂಥ ಕೀರ್ತಿವೆತ್ತ ನಾಡು ನಮ್ಮದು ಎಂಬ ಕೆಚ್ಚು ಹೆಮ್ಮೆ ಅವರಲ್ಲಿ ಉದಿಸಿರಲಿಲ್ಲ. ಶ್ರೀ ರೈಸ್ ಅವರ ಶೋಧದಿಂದ ನಮ್ಮ ಮೈಸೂರು ದೇಶ ಎಂಥ ಹಿರಿಯ ದೇಶವಾಗಿ ಬಾಳಿತ್ತು, ಕನ್ನಡದ ಸಂಸ್ಕೃತಿ ಎಷ್ಟು ಪುರಾತನವಾದುದು, ಕನ್ನಡ ನುಡಿಯಲ್ಲಿ ಎಂಥೆಂಥ ಮಹಿಮೆವೆತ್ತ ಕವಿಗಳು ಕಲಿಗಳು ಆಗಿಹೋಗಿದ್ದರು, ಅವರ ಕಾವ್ಯಗಳು, ಅವರ ಕಾರ್ಯಗಳು ಎಷ್ಟು ಅಮರವಾದುವು ಎನ್ನುವುದು ಬೆಳಕಿಗೆ ಬಂದಿತ್ತು. ರೈಸ್ ಅವರು ತೋರಿಕೊಟ್ಟ ದಾರಿಯಲ್ಲಿ ಇನ್ನೂ ಶೋಧಮಾಡುವುದರ ಅಗತ್ಯ ಕಂಡಿತ್ತು. ರೈಸ್ ಅವರು ಮಾಡಿದ ಶೋಧನಾಕಾರ್ಯವನ್ನು ಮುಂದುವರಿಸುವ ಉದ್ದೇಶವಾಗಿಯೇ ಮಿಥಿಕ್ ಸಮಾಜ ೧೯೧೦ ರಲ್ಲಿ ಜನ್ಮತಾಳಿತು. ಬ್ರಿಟಿಷ್ ರೆಸಿಡೆಂಟರಾದ ಸರ್ ಹ್ಯೂ ಡೇಲಿ ಮತ್ತು ರೆವರೆಂಡ್ ಟಬಾರ್ಡ್ ಇವರುಗಳು ಸಂಘ ಜನ್ಮತಾಳಲು ಮುಖ್ಯವಾಗಿ ಕಾರಣರಾಗಿದ್ದರು.

ಮಿಥಿಕ್ ಸಮಾಜ ಏವ ಟಬಾರ್ಡ್ ಗುರು:
ಟಬಾರ್ಡ್ ಗುರುರೇವ ಮಿಥಿಕ್ ಸಮಾಜ:

ಮಿಥಿಕ್ ಸೊಸೈಟಿಯೆಂದರೆ ಟಬಾರ್ಡ್ ಗುರು, ಟಬಾರ್ಡ್ ಗುರು ಎಂದರೆ ಮಿಥಿಕ್ ಸಮಾಜ ಎಂದು ಎಲ್ಲರೂ ಆಡಿಕೊಳ್ಳುವಷ್ಟು ಮಿಥಿಕ್ ಸೊಸೈಟಿಯ ಕಾರ್ಯದಲ್ಲಿ ರೆವರೆಂಡ್ ಟಬಾರ್ಡರು ಲೀನವಾಗಿದ್ದರು.

೧೯೧೫ ನೆಯ ಇಸವಿಯಲ್ಲಿ ಮಿಥಿಕ್ ಸಮಾಜದ ಐದನೆಯ ವಾರ್ಷಿಕ ಅಧಿವೇಶನ ಬೆಂಗಳೂರಲ್ಲಿ ನಡೆಯಿತು. ಸಮ್ಮೇಳನದ ಅಧ್ಯಕ್ಷತೆಯನ್ನು

ಶ್ರೀಮದ್ಯುವರಾಜರು ವಹಿಸಿದ್ದರು. ಮೈಸೂರಿನಲ್ಲಿ ಗಣ್ಯರಾದ ಮಹನೀಯ ರೆಲ್ಲರೂ ಅಂದು ಆ ಸಭೆಯಲ್ಲಿ ನೆರೆದಿದ್ದರು. ಆಗತಾನೆ ವಿದೇಶದಿಂದ ಹಿಂದಿರುಗಿ ಬಂದಿದ್ದ ನಮ್ಮ ತಂದೆ ಕೂಡ ಪ್ರೇಕ್ಷಕರಾಗಿ ಆ ದಿನದ ಸಭೆಯಲ್ಲಿ ಭಾಗಿಯಾಗಿದ್ದರು. ಆ ಹೊತ್ತಿನ ಮುಖ್ಯ ಉಪನ್ಯಾಸ ರೆವರೆಂಡ್ ಟಬಾರ್ಡ್ ರದು. ಉಪನ್ಯಾಸದ ವಸ್ತು ಮೈಸೂರಿನ ಗತಕಾಲದ ಚರಿತ್ರೆಗೆ ಸಂಬಂಧಿಸಿದುದು. ಅಶೋಕನ ಕಾಲದಿಂದ ಹಿಡಿದು, ಬನವಾಸಿಯ ಕದಂಬರು ತಲಕಾಡಿನ ಗಂಗರು, ದ್ವಾರಸಮುದ್ರದ ಹೊಯ್ಸಳರು ಆದಿಯಾಗಿ ಮೈಸೂರು ಒಡೆಯರ ಇಂದಿನ ರಾಜ್ಯಭಾರಕ್ರಮದವರೆಗಿನ ಸಮಗ್ರ ಚರಿತ್ರೆಯನ್ನು ಅಡಕವಾಗಿ, ಸಭಿಕರಲ್ಲಿ ಹೆಮ್ಮೆ ಸ್ಫೂರ್ತಿ ಹುಟ್ಟುವಂತೆ ಟಬಾರ್ಡ್ಅವರು ಭಾಷಣಮಾಡಿದರು. ಹುಟ್ಟು ಮೈಸೂರಿನವನಿಗೂ ಇರಲಾರದಂಥ ಒಂದು ಹುಮ್ಮಸಿನಿಂದ, ಒಂದು ಕೆಚ್ಚಿನಿಂದ ಮೈಸೂರಿನ ಹಿರಿಮೆಯ.ನ್ನು, ಪ್ರಕೃತಿ ಸೌಂದರ್ಯದಲ್ಲಾಗಲಿ ವಾಸ್ತುಶಿಲ್ಪದಲ್ಲಾಗಲಿ, ಸಾಹಿತ್ಯದಲ್ಲಾಗಲಿ, ಎಲ್ಲದರಲ್ಲೂ ಮೈಸೂರು ಹೆಮ್ಮೆಯ ಸ್ಥಾನಗಳಿಸಿಕೊಂಡಿದೆ ಎಂದು ವರ್ಣಿಸಿ ಹೇಳಿದರು. ಮೈಸೂರಿನ ಚರಿತ್ರೆಯನ್ನು ಚಿತ್ರಿಸುವ ಕಾರ್ಯವನ್ನೆ ಮುಖ್ಯವಾಗಿ ಮಿಥಿಕ್ ಸಮಾಜ ಕೈಗೊಳ್ಳಬೇಕೆಂದು ತಮ್ಮ ಆಶಯುವನ್ನು ವ್ಯಕ್ತಪಡಿಸಿದರು. "ಈಗ ಅಜ್ಞಾತರಾಗಿರುವ ವಿಷ್ಣುವರ್ಧನ, ಕೆಂಪೇಗೌಡ, ಜಗದೇವರಾಯ, ಚಿಕದೇವರಾಯ ಇವರ ಹೆಸರುಗಳನ್ನು ಬೆಳಕಿಗೆ ತಂದು, ಹಿಂದೂದೇಶದ ಆಳರಸರ ಪಂಕ್ತಿಯಲ್ಲಿ ಅವರು ಸೇರುವಂತೆ ಮಾಡಬೇಕು.... ಕಾರ್ಯಕ್ಷೇತ್ರ ವಿಶಾಲವಾದುದು. ಕಾರ್ಯ ಫಲಕೊಡುವಂಥದು. ಮೈಸೂರು ಚರಿತ್ರೆಯೇ ಆಗಲಿ, ಮೈಸೂರಿನ ಪ್ರಾಚ್ಯಶೋಧನೆಯೇ ಆಗಲಿ, ಅಥವಾ ವೇದಾಂತದ ಮೂರು ಮುಖ್ಯ ಶಾಖೆಗಳನ್ನು ಬಾಲ್ಯದಿಂದ ಬೆಳೆಸಿದ ಮೈಸೂರೇ ಆಗಲಿ, ಇವೆಲ್ಲ ಬಿಟ್ಟರೂ ಕೊನೆಗೆ ಮೈಸೂರಿನ ಪ್ರಕೃತಿ ಸೌಂದರ್ಯವೇ ಆಗಲಿ, ಈ ಯಾವುದನ್ನೆ ಆಗಲಿ ಸಹಾನುಭೂತಿಯಿಂದ ಅಧ್ಯಯನಮಾಡಲು ತೊಡಗುವವನಿಗೆ ಶ್ರಮಕ್ಕೆ ಸರಿಯಾದ ಪ್ರತಿಫಲ ದೊರೆಯುತ್ತದೆ ಎಂದು ನಾನು ಭರವಸೆ ಕೊಡುತ್ತೇನೆ". ಟಬಾರ್ಡ್ ಅವರು ತಮ್ಮ ಭಾಷಣವನ್ನು ಮುಕ್ತಾಯಮಾಡುತ್ತ ಹೇಳಿದ ಮಾತುಗಳಲ್ಲಿ ಇದೂ ಒಂದು. ಶ್ರೋತೃವಾಗಿ ನನ್ನ ತಂದೆ ಸಮ್ಮೇಳನಕ್ಕೆ

ಹೋಗಿದ್ದರೆಂದು ಹೇಳಿದ್ದೇನೆ. ಟಿಬಾರ್ಡ್ ಅವರ ಭಾಷಣ ತಂದೆಯ ಮನಸಿನಮೇಲೆ ವಿಶೇಷವಾದ ಪರಿಣಾಮ ಉಂಟುಮಾಡಿತೆಂದು ತೋರುತ್ತದೆ. ಮೈಸೂರು ದೇಶದ ಚರಿತ್ರೆಯ ಸಂಬಂಧವಾಗಿ ಏನಾದರೂ ಶೋಧವನ್ನು ನಡೆಸಬೇಕೆಂದು ಅವರಲ್ಲಿ ಆಸೆ ಬಲಿಯಿತು. ಅಂದಿನಿಂದ ವಿಷಯ ಸಂಗ್ರಹಮಾಡುತ್ತ ಹೋದರು. ನಾಲ್ಕು ವರ್ಷಗಳ ನಂತರ ತಂದೆ ಮಿಥಿಕ್ ಸಮಾಜದ ಆಶ್ರಯದಲ್ಲಿ ಮೂರು ಉಪನ್ಯಾಸಗಳನ್ನು ಕೊಟ್ಟರು. ಮೂರು ಉಪನ್ಯಾಸಗಳೂ ಮೈಸೂರು ಚರಿತ್ರೆಗೆ ಸಂಬಂಧಿಸಿದವು. ಮೊದಲನೆಯ ಉಪನ್ಯಾಸ ಮಹಾರಾಜ ಚಿಕದೇವರಾಯರನ್ನು ಕುರಿತುದು, ಎರಡನೆಯದಕ್ಕೆ ವಸ್ತು ಬೆಂಗಳೂರಿನ ನಿರ್ಮಾಪಕನಾದ ಕೆಂಪೇಗೌಡ ಮತ್ತು ಅವನ ವಂಶದ ಅರಸರು. ಮೈಸೂರು ರತ್ನಸಿಂಹಾಸನದ ಐತಿಹ್ಯ ಮೂರನೆಯ ಉಪನ್ಯಾಸಕ್ಕೆ ವಸ್ತುವಾಗಿತ್ತು.

ಈ ಮೂರು ಉಪನ್ಯಾಸಗಳಲ್ಲೂ ಸ್ವಂತವಾಗಿ ಶೋಧಮಾಡಿ ಹೊಸ ಸಾಕ್ಷ್ಯಗಳನ್ನು ಒದಗಿಸಿರುವುದೇನೂ ತೋರುವುದಿಲ್ಲ. ಅಲ್ಲಿ ಇಲ್ಲಿ ಚದುರಿದ್ದ ವಿಷಯ ಸಂಪತ್ತೆಲ್ಲವನ್ನು ಒಂದೆಡೆಯಲ್ಲಿ ಒಟ್ಟುಗೂಡಿಸಿ ಸಮಗ್ರವಾದ ಸಂಪೂರ್ಣವಾದ ಚಿತ್ರವನ್ನು ಮುಂದಿಡುವುದೇ ಉಪನ್ಯಾಸಗಳ ಮುಖ್ಯ ಉದ್ದೇಶವಾಗಿ ಕಾಣುತ್ತದೆ. ಈ ಉದ್ದೇಶ ಮೂರು ಉಪನ್ಯಾಸಗಳಲ್ಲೂ ಬಹುಮಟ್ಟಿಗೆ ಸಾಧಿಸಿದೆ. ಉಪನ್ಯಾಸಗಳ ಸಾರಾಂಶವನ್ನು ಇಲ್ಲಿ ಕೊಟ್ಟಿದ್ದೇನೆ.

– ೧ –

ಚಿಕ್ಕದೇವರಾಜರು ತಮ್ಮ ರಾಜ್ಯಭಾರಕ್ರಮದಲ್ಲಿ ಯಾವ ಮೊಗಲ ಅರಸುಗಳಿಗೂ ಕಡಿಮೆಯಾಗಿರಲಿಲ್ಲ ಎನ್ನುವುದು ಮೊದಲನೆಯ ಉಪನ್ಯಾಸ ಓದುವುದರಿಂದ ಮನದಟ್ಟಾಗುತ್ತದೆ. ಚಿಕದೇವರಾಜರ ರಾಜ್ಯಭಾರ ಕ್ರಮದ ವಿವರ ಇಲ್ಲಿ ಒಟ್ಟಿಗೆ ಸಿಗುತ್ತವೆ. ವಿಶಾಲಾಕ್ಷ ಪಂಡಿತ, ತಿರುಮಲಯ್ಯಂಗಾರ್ಯ, ಚಿಕುಪಾಧ್ಯಾಯ, ಷಡಕ್ಷರಯ್ಯ, ಲಿಂಗಣ್ಣಯ್ಯ ಇವರುಗಳನ್ನೊಳ

ಗೊಂಡ ಮಂತ್ರಿ ಸಭೆಯ ಏರ್ಪಾಡು; ಅಂಚೆಯ ವ್ಯವಸ್ಥೆ; ಸೈನ್ಯ ಕ್ರಮ ಗೊಳಿಸಿದ ಬಗೆ; ಒಂದೊಂದು ಹಳ್ಳಿಯೂ ಸ್ವತಂತ್ರವಾಗಿ ಹನ್ನೆರಡು ಮಂದಿ ಅಧಿಕಾರಿಗಳೊಡನೆ (ಬಾರಾಬಲೂತಿ) ಕಾರ್ಯ ನಡೆಸಿಕೊಂಡು ಹೋಗುತ್ತಿದ್ದ ರೀತಿ; ಮೋಸವನ್ನು ತಡೆಗಟ್ಟಲು ತನ್ನ ಮುದ್ರಾಂಕಿತವಾದ 'ದೆ' ಎಂಬ ಅಕ್ಷರ ವನ್ನು ಪ್ರತಿ ತೂಕದ ಮೇಲೆಯೂ ಒತ್ತಿಸಿ, ಅಂಥ ಅಂಕಿತವಿರುವ ತೂಕ ಗಳನ್ನೆ ಬಳಕೆಯಲ್ಲಿಡಬೇಕೆಂದು ಕಟ್ಟುಮಾಡಿ ತೂಕದಲ್ಲಿ ನಡೆಯುತ್ತಿದ್ದ ಮೋಸವನ್ನು ನಿಲ್ಲಿಸಿದ ರೀತಿ; ಜಮೀನಿನ ಮೇಲೆ ಹಾಕುತ್ತಿದ್ದ ಕಂದಾಯದ ಕ್ರಮ; ಪೇಟೆಗಳನ್ನು ಕಟ್ಟಿ, ಹಳ್ಳಿಗಳನ್ನು ಪಟ್ಟಣಮಾಡಿದ ಬಗೆ; ಪಟ್ಟ ಣದ ಪೇಟೆಗಳಲ್ಲಿ ನಡೆಯುವ ವ್ಯಾಪಾರದಮೇಲೆ ತೆರಿಗೆಯನ್ನು ಹಾಕಿ ಹೊಸ ದೊಂದು ಆದಾಯವನ್ನು ಕಂಡುಹಿಡಿದ ಬುದ್ಧಿವಂತಿಕೆ; ಈ ರೀತಿಯಾಗಿ ಹತ್ತೂ ಕಡೆಯಿಂದ ಖಜಾನೆಗೆ ಹಣ ಬರುವಂತೆ ಮಾಡಿ ನವಕೋಟಿನಾರಾ ಯಣ ಎಂಬ ಬಿರುದು ಪಡೆದುಕೊಂಡುದು; ಅವರು ಕಟ್ಟಿಸಿದ ದೇವ ಸ್ಥಾನಗಳು ಅಗ್ರಹಾರಗಳು; ಗೆದ್ದ ರಾಜರು ರಾಜ್ಯಗಳು; ಧಾಳಿ ನಡೆಸುತ್ತಿದ್ದ ಮರಾಟರನ್ನು ಮೈಸೂರು ಎಲ್ಲೆಯಿಂದ ದೂರವಿರಿಸಿದುದು; ಔರಂಗ ಜೇಬನ ಆಸ್ಥಾನಕ್ಕೆ ಕರಣಿಕ ಲಿಂಗಣ್ಣಯ್ಯನನ್ನು ರಾಯಭಾರಿಯಾಗಿ ಕಳು ಹಿಸಿದುದು; ಔರಂಗಜೇಬ ಮಾಡಿದ ಮರ್ಯಾದೆ; ಕೊಟ್ಟ ಬಿರುದು; ರಾಜ್ಯ ಭಾರದಲ್ಲಿ ಕಂಡುಬಂದ ಶಿಸ್ತು ಕ್ರಮ; ಸಾಹಿತ್ಯದಲ್ಲಿ ಸಂಗೀತದಲ್ಲಿ ಅವರಿಗಿದ್ದ ಅಭಿರುಚಿ; ಇವು ಒಂದಾಗುತಲೊಂದು ಕ್ರಮವಾಗಿ ಇಲ್ಲಿ ಚರ್ಚಿತವಾಗಿವೆ. ಯಾವುದಕ್ಕೆ ಕೈಹಾಕಲಿ ಅದರಲ್ಲಿ ಕೀರ್ತಿಗಳಿಸಿದ ದೊರೆ ಚಿಕದೇವರಾಯ. ಕೈಮುಗಿದುಕೊಂಡು ನಿಂತಿರುವ ಇವರ ವಿಗ್ರಹ ಗುಂಡ್ಲುಪೇಟೆಯ ಪರ ವಾಸುದೇವರ ಗುಡಿಯಲ್ಲಿದೆಯಂತೆ.

ಶ್ರೀಮಂತಂ ಯದುಶೈಲವಲ್ಲಭ ಪದಾಂಭೋಜಾತ ಭೃಂಗಂ ಗುಣಾ |
ರಾಮಂ, ಪಶ್ಚಿಮರಂಗಧಾಮ ನಗರೀ ಸಿಂಹಾಸನಾಧೀಶನು
ದ್ದಾಮ ಶ್ರೀ ಯದುವಂಶ ಕಲ್ಪತರು ಪ್ರೌಢಪ್ರವಾಳಂ ಜಗ
ಶ್ರೀಮಂಬೊತ್ತು ನೆಗಳ್ಗೆ ಬಾಳ್ಗೆ ಚಿಕದೇವೇಂದ್ರ ಮಹೀಚಂದ್ರಮಂ ||

- ೨ -

ಎರಡನೆಯ ಉಪನ್ಯಾಸ ಕೆಂಪೇಗೌಡ ಪ್ರಭುಗಳ ಚರಿತ್ರೆಗೆ ಸಂಬಂಧಿಸಿದ್ದು. ಕೆಂಪೇಗೌಡ ಎನ್ನುವ ಹೆಸರು ಆತನು ಆಳಿದ ನಾಡಿನಲ್ಲಿ ಮನೆ ಮಾತಾಗಿ ಉಳಿದಿದೆ. ಆತನ ಪೂರ್ವಜರು ಕಂಚೀವರದವರಂತೆ. ಎಲಹಂಕದ ಬಳಿ ಮೊದಲು ಬಂದು ನೆಲೆಸಿದರಂತೆ ಆದರಿಂದಾಗಿ ಇವರಿಗೆ ಎಲಹಂಕ ನಾಡ ಪ್ರಭುಗಳು ಎಂದು ಹೆಸರು. ದೇವಿ ಕೆಂಪಮ್ಮನಿಂದಾಗಿ ಇವರ ವಂಶ ಅಳಿಯದೆ ಉಳಿದುದರಿಂದ ಈ ಮತದ ಅರಸರೆಲ್ಲರೂ ಕೆಂಪನಂಜಯ್ಯಗೌಡ ಅಥವಾ ಕೆಂಪೇಗೌಡ ಎಂದೇ ಹೆಸರಿಟ್ಟುಕೊಳ್ಳುತಿದ್ದರಂತೆ. ಇವರಲ್ಲಿ ಮೊದಲನೆಯ ಕೆಂಪೇಗೌಡನೇ ಬೆಂಗಳೂರನ್ನು ಸ್ಥಾಪಿಸಿದವನು. ಮಣ್ಣು ಕೋಟೆಯನ್ನು ಕಟ್ಟಿಸಿ ಅದನ್ನು ಭದ್ರಪಡಿಸಿದವನು. ಕೆಂಪೇಗೌಡ ದೇವರಲ್ಲಿ ಬಹಳ ಭಕ್ತಿಯುಳ್ಳವನು. ಗವಿಗಂಗಾಧರೇಶ್ವರನ ದೇವಸ್ಥಾನ, ಹಲಸೂರಿನ ಸೋಮೇಶ್ವರ ದೇವಸ್ಥಾನ, ಕೆಂಪಾಂಬುಧಿ ಕೆರೆ ಈತ ಕಟ್ಟಿಸಿದವು. ಕೆಂಪೇಗೌಡ ಕಟ್ಟಿಸಿದ ಒಂದೊಂದು ದೇವಸ್ಥಾನದಲ್ಲಿಯೂ ವರ್ಷಂಪ್ರತಿ ಜಾತ್ರೆ ನಡೆಯುತ್ತದೆ. ವಿಶೇಷವಾಗಿ ಜನ ಸೇರುತ್ತಾರೆ. ಬೆಂಗಳೂರಿನ ನಾಲ್ಕು ದಿಕ್ಕಿನಲ್ಲಿ ನಾಲ್ಕು ಗೋಪುರಗಳನ್ನು ಕಟ್ಟಿಸಿ ಬೆಂಗಳೂರು ಇಲ್ಲಿಯವರೆಗೆ ಬೆಳೆಯುತ್ತದೆ ಎಂದು ಭವಿಷ್ಯ ನುಡಿದು ಅದನ್ನು ಗುರುತಿಸಿದ ಮಹನೀಯ ಈತ.

ಈತನ ಆಳಿಕೆಯಾದಮೇಲೆ ಹೆಸರುಗಳಿಸಿ ಬೆಂಗಳೂರು ಮಾಗಡಿ ಎರಡನ್ನೂ ಆಳಿದವನು ಎರಡನೆ ಅಥವಾ ಇಮ್ಮಡಿ ಕೆಂಪೇಗೌಡ. ಹದಿನಾಲ್ಕು ವರ್ಷ ಆಳಿದಮೇಲೆ ಬೆಂಗಳೂರು ಬಿಜಾಪುರದ ಸೇನಾಧಿಪತಿ ರಣದುಲ್ಲಾಖಾನನ ತುತ್ತಾಯಿತು. ಕೆಂಪೇಗೌಡ ಮಾಗಡಿ ಸೇರಿ ಅಲ್ಲಿ ಹದಿನೆಂಟು ವರ್ಷಕಾಲ ರಾಜ್ಯಭಾರ ಮಾಡಿದ. ಅಂದಿನಿಂದ ಅವನ ವಂಶ ಮಾಗಡಿ ಕೆಂಪೇಗೌಡನ ವಂಶ ಎಂದು ಹೆಸರಾಯಿತು. ಮಾಗಡಿಯನ್ನೂ ಸಾವನದುರ್ಗವನ್ನೂ ಭದ್ರಪಡಿಸಿದವನು ಈತ. ಒಂದು ಸಲ ದೇಶದಲ್ಲಿ ರೌರವ ಕ್ಷಾಮ ತಲೆದೋರಿ ಜನರೆಲ್ಲ ಬಂದು ರಾಜನಲ್ಲಿ ಮೊರೆ ಇಟ್ಟಾಗ ರಾಜ ಏಕಮನದಿಂದ ಧ್ಯಾನಮಾಡಿ ದೇವರು ಮಳೆಗರೆಯುವಂತೆ ಬೇಡಿ

ಕೊಂಡನಂತೆ. ಮಳೆ ಧಾರಾಕಾರವಾಗಿ ಸುರಿಯಿತಂತೆ. ಅದರಿಂದ ಆತನಿಗೆ 'ಮಳೆ ಕೆಂಪರಾಯ' ಎಂದು ಹೆಸರಾಯಿತಂತೆ.

ಮಳೆ ಕೆಂಪರಾಯನ ಮೊಮ್ಮಗನೇ ಈ ವಂಶದ ಅರಸುಗಳಲ್ಲಿ ಹೆಸರಾಂತು ಬಾಳಿದವನು. ಈತನ ಪೂರ್ತಿ ಹೆಸರು ಮುಮ್ಮಡಿ ಕೆಂಪವೀರಪ್ಪ ಗೌಡ. ಮಾಗಡಿಯ ಪ್ರಸಿದ್ಧಿಯಾದ ದೇವಸ್ಥಾನ ಕಟ್ಟಿಸಿದವನು ಇವನು. ಈತನು ಕಟ್ಟಿದ ಕೆಂಪೇಗೌಡ ಹಜಾರದಲ್ಲಿ ಒಂದು ಕಂಬದಮೇಲೆ ಕಂಬಳಿ ಹೊತ್ತು ಕೋಲೂರಿ ನಿಂತಿರುವ ಹಳ್ಳಿಗನ ಚಿತ್ರವಿದೆ. ಇದು ಯಲಹಂಕ ಪ್ರಭುಗಳ ಮೂಲಪುರುಷನಾದ ಕೆಂಪೇಗೌಡನ ಚಿತ್ರ ಎಂದು ಹೇಳುತ್ತಾರೆ. ಮುಮ್ಮಡಿ ಕೆಂಪೇಗೌಡನ ಹತ್ತಿರ ಬಿಳಿಯ ಆನೆ ಒಂದು ಇತ್ತಂತೆ. ಅದನ್ನು ಒಡಗೊಂಡು ಆಸ್ಥಾನಕ್ಕೆ ಬರಬೇಕೆಂದು ಮೈಸೂರು ಅರಸರು ಹೇಳಿಕಳುಹಿಸಿದರಂತೆ. ಕೆಂಪೇಗೌಡ ಹೋಗದಿರಲು ಸೈನ್ಯ ಕಳುಹಿಸಿ ಸಂಚಿನಿಂದ ಕೆಲವು ದ್ರೋಹಿಗಳ ಸಹಾಯದಿಂದ ಕೋಟೆಯೊಳಕ್ಕೆ ನುಗ್ಗಿ ಕೆಂಪೇಗೌಡನನ್ನು ಅವನ ವಂಶದವರನ್ನು ಸೆರೆ ತೆಗೆದುಕೊಂಡು ಶ್ರೀರಂಗಪಟ್ಟಣಕ್ಕೆ ಹೋದರಂತೆ. ಕೆಂಪೇಗೌಡನ ಬಿಡುಗಡೆಯಾಗಲಿಲ್ಲ. ಆತನ ರಾಜ್ಯ ಈ ರೀತಿ ಕೊನೆಯಾಯಿತು. ಮಾಗಡಿ ರಾಜ್ಯ ಮೈಸೂರು ರಾಜ್ಯದಲ್ಲಿ ಸೇರಿಹೋಯಿತು.

ಇದಿಷ್ಟು ಕೆಂಪೇಗೌಡ ಅರಸುಗಳ ಚರಿತ್ರೆ. ಉಪನ್ಯಾಸದ ಕೊನೆಯಲ್ಲಿ ಓಲೆಗರಿಯ ಪತ್ರದ ನಕಲು ಬಂದಿದೆ. ಕೆಂಪೇಗೌಡ ಅವಸಾನ ಕಾಲದಲ್ಲಿ ಸೆರೆಮನೆಯಿಂದ ತನ್ನ ಮಗ ಕೃಷ್ಣರಾಜಗೌಡನಿಗೆ ಬರೆದ ಕಾಗದ ಇದು. ವೈಭವದಿಂದ ಬಾಳಿದ ದೊರೆ ಸೆರೆಮನೆಯಲ್ಲಿ ಕೊಳೆಯುತ್ತ ಕೊನೆಯ ಕಾಲ ಬಂದಿತೆಂದು ತಿಳಿದು ದುಃಖದಿಂದ ಬರೆದ ಕಾಗದ ಓದುವರ ಮನ ಕರಗುತ್ತದೆ. ಆ ಕಾಲದಲ್ಲಿ ಕನ್ನಡದಲ್ಲಿ ಬರೆದ ಕಾಗದದ ಒಕ್ಕಣೆ ಯಾವ ರೀತಿ ಇತ್ತು ಎನ್ನುವುದನ್ನು ಇದು ತೋರಿಸುವುದರಿಂದ ಅದನ್ನು ಇಲ್ಲಿ ಪೂರ್ತಿಯಾಗಿ ಕಾಣಿಸಿದ್ದೇನೆ.

ಶ್ರೀಮತು ಕೆಂಪವೀರಪ್ಪ ಗವುಡರು ಚಿರಂಜೀವಿ ಹುಲಿಕಲ್ಲು ನಮ್ಮ ಕೃಷ್ಣರಾಜ ಗವುಡರಿಗೆ ಮಾಡುವ ಆಶೀರ್ವಾದ ಅದಾಗಿ|| ಈ ಫಾಲ್ಗುಣ

ಬ॥ ೧೦ ವರಿಗೆ ಶ್ರೀರಂಗಪಟ್ಟಣದಲ್ಲಿ ನಾವು ಕ್ಷೇಮದಲ್ಲಿ ಇದ್ದೇವೆ. ಅಲ್ಲಿ ಇರುವಂತ ಸಕಲರು ಸಹ ನಿಮ್ಮ ಕ್ಷೇಮಕ್ಕೆ ಬರಸಿ ಕಳುಹಿಸುವುದು. ತರುವಾಯ ನಮಗೆ ಸೋಮನಾಥನ ವಿಲಾಸದಿಂದ ಈ ದುರ್ದಶ ಬಂದು ಇರುವುದು ಸರಿಯಷ್ಟೆ. ಈಗ ನಮ್ಮ ದೇಹಸ್ಥಿತಿ ಬಹುತರ ಉಪದ್ರವ ವಾಗಿ ಇದೆ. ಸೋಮನಾಥನ ಪಾದಗಳಲ್ಲಿ ಐಕ್ಯವಾಗೋ ಹಾಗೆ ತೋರುತ್ತ ಇದೆ. ನಿರ್ವಾಹ ತೋರಲಿಲ್ಲ. ನಮ್ಮ ವಂಶಕ್ಕೆ ಬಾಧ್ಯರು ನೀವೆ ಅಲ್ಲದೆ ಮತ್ತೆ ಬೇರೆ ಇಲ್ಲ. ಆದ್ದರಿಂದ ನಿಮ್ಮ ಬಳಿಗೆ ನಮ್ಮ ಸೋಮನ ಕೈಯಲ್ಲಿ ನಮ್ಮ ಮುಖ್ಯ ಪಟ್ಟದ ಆಯುಧ ಶಿಖಿಸರ ಸಹ ಕೊಟ್ಟು ಕಳುಹಿಸಿ ಇದ್ದೇವೆ. ನೀವು ಬುದ್ಧಿವಂತರಾಗಿ, ಕಾಲಾನು ಗುಣ್ಯವಾಗಿ ಇದ್ದುಕೊಂಡು ನಮ್ಮ ದೇಹಸ್ಥಿತಿ ವಿಚಾರಿಸಿಕೊಂಡು ಆ ತರುವಾಯ ಆಗತಕ್ಕ ಕೆಲಸಗಳನ್ನು ಆಗಮಾಡಿಸುವುದು. ಕಡಿಮೆ ವಿಚಾರ ವಾಲೆ ಮುಖಾಂತರ ಬರೆಯುತಕ್ಕದ್ದು ಅಲ್ಲವಲ್ಲ. ಈ ಸೋಮನ ಬಾಯಿಮಾತಿಂದ ಎಲ್ಲ ವಿವರವು ತಿಳಿಯುತ್ತದೆ. ಈ ವಿವರ ನಮ್ಮ ಮನಸಿಗೆ ಶರೋಹಾಗೆ ಮಾಡಿಸುವುದು. ನಿಮಗೆ ಆಪ್ತರಾದವರನ್ನು ಇಲ್ಲಿಗೆ ಕಳುಹಿಸುವುದು—

ಕೆಂಪಯ್ಯ.

ಹುಲಿಕಲ್ಲು ಪಾಳೆಯಗಾರರಾದ ಶ್ರೀ ಚಿಕ್ಕಪ್ಪಯ್ಯನವರು ಮೇಲೆ ಕಾಣಿಸಿರುವ ಓಲೆಗರಿಯ ಪತ್ರವನ್ನು ನಮ್ಮ ತಂದೆಗೆ ಕಳುಹಿಸಿಕೊಟ್ಟರಂತೆ. ಚಿಕ್ಕಪ್ಪಯ್ಯನವರು ಕೃಷ್ಣರಾಜಗೌಡರಿಂದ ನೇರವಾಗಿ ಇಳಿದು ಬಂದ ವಂಶ ಸ್ಥರು. ಅವರು ಕಳುಹಿಸಿಕೊಟ್ಟ ಪತ್ರವನ್ನು ಮೈಸೂರು ಗತ ಚರಿತ್ರೆಯ ಗುರುತಾಗಿ ಬೆಂಗಳೂರಿನ ಮ್ಯೂಸಿಯಂನಲ್ಲಿಟ್ಟಿದ್ದಾರಂತೆ.

ಬೆಂಗಳೂರಿನ ನಾಗರಿಕರಿಗೆ, ವಿದ್ಯಾಭ್ಯಾಸವನ್ನು ಮುಗಿಸಿಕೊಂಡು ಶಾಲೆಗಳಿಂದ ಹೊರಬೀಳುವ ಯುವಕರನೇಕರಿಗೆ, ಕೆಂಪೇಗೌಡ ಎಂಬ ಹೆಸ ರೊಂದು ಬಿಟ್ಟು, ಆತನ ವಿಷಯವಾಗಲಿ, ಆತನ ವಂಶದವರ ವಿಷಯ ವಾಗಲಿ ಏನೂ ತಿಳಿದಂತೆ ತೋರುವುದಿಲ್ಲ. ಬೆಂಗಳೂರಿನಂಥ ಕಲ್ಯಾಣ ನಗರವನ್ನು ಮೊದಲು ಕಟ್ಟಿದ, ಅದು ಇಲ್ಲಿಯುವರೆಗೂ ವಿಸ್ತರಿಸಿ ಇಷ್ಟು

ದೊಡ್ಡ ಪಟ್ಟಣವಾಗಿ ಬಾಳುತ್ತದೆ ಬೆಳೆಯುತ್ತದೆ ಎಂದು ಭವಿಷ್ಯ ನುಡಿದು, ಅದು ಅಳಿಸಿಹೋಗದಂತೆ ಸೊಗಸಾದ ಮಂಟಪಗಳನ್ನು ಕಟ್ಟಿಸಿ ಬೆಂಗಳೂರಿನ ಎಲ್ಲೆಯನ್ನು ಗುರುತಿಸಿದ ಮಹಾನುಭಾವನಾದ ಕೆಂಪೇಗೌಡನ ಸ್ಮಾರಕವಾಗಿ, ಅವನು ಉಳಿಸಿಟ್ಟು ಹೋದ ಗುರುತು ವಿನಹ ಬೇರೆ ಯಾವ ಬಗೆಯ ಸ್ಮಾರಕವೂ ಇಲ್ಲದಿರುವುದು ನಗರದಲ್ಲಿ ದೊಡ್ಡದೊಂದು ಕುಂದು. ಶಿವಗಂಗೆಯಲ್ಲಿ ಕೆಂಪೇಗೌಡನ ಪ್ರತಿಮೆ ಒಂದಿದೆಯಂತೆ. ಬೆಂಗಳೂರಲ್ಲಿ ಇದ್ದಂತೆ ಕಾಣಲಿಲ್ಲ. ಬೆಂಗಳೂರು ಮುನಿಸಿಪಾಲಿಟಿಯ ಹೊಸ ಕಟ್ಟಡದ ಮುಂದೆ ಕೆಲವು ವರ್ಷಗಳಿಗೆ ಹಿಂದೆ ಒಂದು ಮೂರ್ತಿಯನ್ನು ನಿಲ್ಲಿಸಿಟ್ಟ ಜ್ಞಾಪಕ. ಕೈಜೋಡಿಸಿ ನಿಂತಿದ್ದ ಈ ಮೂರ್ತಿ ಕೆಂಪೇಗೌಡನದೆಂದು ಮಾತು ನಾನು ಕೇಳಿದ್ದೆ. ಅದು ನಿಜವಾಗಿ ಕೆಂಪೇಗೌಡನದೋ ಅಲ್ಲವೋ ನನಗೆ ತಿಳಿಯದು. ಅದು ನಿಜವಾಗಿ ಕೆಂಪೇಗೌಡನದೇ ಆಗಿದ್ದರೆ ಆ ವಿಗ್ರಹವನ್ನು ದ್ವಾರಪಾಲಕನಂತೆ ಎಲ್ಲಿಯೋ ನಿಲಿಸಿದ್ದ ರೀತಿ ಪೌರಸಭೆಗೂ, ಆ ರೀತಿ ನಿಲ್ಲಿಸಿದುದನ್ನು ತಾಳಿಕೊಂಡು ಉಸಿರೆತ್ತದೆ ಓಡಾಡುತ್ತಿರುವ ಪುರಜನರಿಗೂ ಮರ್ಯಾದೆ ತರತಕ್ಕದ್ದಲ್ಲ. ಬೆಂಗಳೂರು ನಗರದಂಥ ದೊಡ್ಡ ನಗರವನ್ನು ಸ್ಥಾಪಿಸಿದ ಮಹನೀಯನ ಪ್ರತಿಮೆಯನ್ನು ಅದೂ ಪುರಭವನದ ಮಧ್ಯದಲ್ಲಿ ಒಂದು ಉನ್ನತಸ್ಥಾನವನ್ನು ಕೊಡದೆ ಹುಲ್ಲಿನ ಮಧ್ಯೆ ನಿಲ್ಲಿಸಿರುವುದು ತೀರ ಅನ್ಯಾಯವಾಗಿ ತೋರುತ್ತದೆ. ಕೆಂಪೇಗೌಡನ ಹೆಸರನ್ನು ತಾಳಿಕೊಂಡಿರುವ ರಸ್ತೆ ಒಂದು ಈಚೆಗೆ ಕಂಗೊಳಿಸುತ್ತಿದೆ. ಈ ರಸ್ತೆ ನಗರದ ಜೀವನಾಡಿಯಾಗಿ ಯಾವಾಗಲೂ ಲವಲವಿಕೆಯಿಂದ ಒಡಗೂಡಿದೆ. ಈ ಮೂಲಕವಾಗಿಯಾದರೂ ಕೆಂಪೇಗೌಡನ ನಾಮಸ್ಮರಣೆಯನ್ನು ಬೆಂಗಳೂರು ನಾಗರಿಕರು ಮಾಡುತ್ತಿದ್ದಾರೆ.

– ೩ –

ಮಿಥಿಕ್ ಸೊಸೈಟಿಯಲ್ಲಿ ತಂದೆ ಕೊಟ್ಟ ಮೂರನೆಯ ಉಪನ್ಯಾಸ ಮೈಸೂರು ಮಹಾರಾಜರ ರತ್ನ ಸಿಂಹಾಸನಕ್ಕೆ ಸಂಬಂಧಪಟ್ಟದು. ಇಂಗ್ಲೀಷು ರಾಜರಿಗೆ ಕಿರೀಟ ಹೇಗೆ ಮುಖ್ಯವೋ ಹಾಗೆ ನಮ್ಮ ದೇಶದ ರಾಜರಿಗೆ ಸಿಂಹಾಸನ ಮುಖ್ಯ. ರಾಜ ಎನಿಸಿಕೊಳ್ಳಬೇಕಾದವರು ಸಿಂಹಾಸನಾ

ಧೀಶ್ವರರಾಗಬೇಕು. ಮೈಸೂರು ರತ್ನಸಿಂಹಾಸನದ ಸುತ್ತ ಬೇಕಾದ ಹಾಗೆ ಕತೆ ಬೆಳೆದುಕೊಂಡಿದೆ. ಯಾವುದು ಅದರ ನಿಜವಾದ ಚರಿತ್ರೆ ಎಂದು ರೂಪಿಸುವುದು ಉಪನ್ಯಾಸದ ಉದ್ದೇಶ.

ಮೊಗಲ ಬಾದಷಹ ಔರಂಗಜೇಬ ೧೬೯೯ ರಲ್ಲಿ ಚಿಕದೇವರಾಜರಿಗೆ ಕೊಟ್ಟುಕಳುಹಿಸಿದ ರತ್ನಸಿಂಹಾಸನವೇ ಇದು ಎಂದು ಒಂದಭಿಪ್ರಾಯ. ಇನ್ನೊಂದು ಅಭಿಪ್ರಾಯದ ಪ್ರಕಾರ ಸಿಂಹಾಸನ ಪಾಂಡವರಿಗೆ ಸೇರಿದುದು; ಅವರು ಉಪಯೋಗಿಸುತಿದ್ದುದು. ಅದು ಹೂತಿದ್ದ ಸ್ಥಳವನ್ನು ವಿದ್ಯಾರಣ್ಯರು ಹಕ್ಕಬುಕ್ಕರಿಗೆ ತೋರಿಸಿದರು. ಈ ಸಿಂಹಾಸನದ ಮೇಲೆಯೇ ವಿಜಯನಗರದ ಮೂಲಪುರುಷನಾದ ಹಕ್ಕ ಅಥವಾ ಹರಿರಾಯನಿಗೆ ಆನೆಗೊಂದಿಯಲ್ಲಿ ಪಟ್ಟಕಟ್ಟಿದ್ದು. ತಿರುಮಲರಾಯನ ಆಳ್ವಿಕೆಯವರೆಗೂ ಸಿಂಹಾಸನವನ್ನು ವಿಜಯನಗರದ ಅರಸುಗಳೇ ಉಪಯೋಗಿಸುತಿದ್ದರು. ತಿರುಮಲರಾಯ ತನ್ನ ಹಿರಿಯಮಗ ಶ್ರೀರಂಗರಾಯನಿಗೆ ಮೈಸೂರು ದೇಶವನ್ನೂ, ಈ ಸಿಂಹಾಸನವನ್ನೂ ಕೊಟ್ಟ. ಅದರ ಫಲವಾಗಿ ಸಿಂಹಾಸನ ಆನೆಗೊಂದಿಯನ್ನು ಬಿಟ್ಟು ಶ್ರೀರಂಗಪಟ್ಟಣಕ್ಕೆ ಬಂತು. ವಿಜಯನಗರದ ಅರಸರ ಪ್ರತಿನಿಧಿಗಳೇ ಸಿಂಹಾಸನವನ್ನು ಉಪಯೋಗಿಸುತ್ತಿದ್ದರು. ಕೊನೆಯ ಪ್ರತಿನಿಧಿಯಾದ ಏಳನೇ ಶ್ರೀರಂಗರಾಯ ತಾನಾಗಿಯೇ ಸಿಂಹಾಸನವನ್ನು ರಾಜಒಡೆಯರ ವಶಕ್ಕೆ ಒಪ್ಪಿಸಿ ತನ್ನ ಹೆಂಡತಿಯರಾದ ಅಲಮೇಲಮ್ಮ ರಂಗಮ್ಮನವರೊಡನೆ ತಲಕಾಡಿಗೆ ಹೊರಟು ಹೋದ. ರಾಜಒಡೆಯರು ೧೬೧೦ ರಲ್ಲಿ ವೈಭವದಿಂದ ಇದೇ ಸಿಂಹಾಸನ ಹತ್ತಿದರು. ಆ ಕಾಲದಿಂದ ಸಿಂಹಾಸನ ಮೈಸೂರು ರಾಜರ ವಶದಲ್ಲಿಯೇ ಇದೆ. ಶ್ರೀರಂಗರಾಯ ರಾಜ ಒಡೆಯರಿಗೆ ಸಿಂಹಾಸನ ಕೊಟ್ಟ ಎನ್ನಲು ಶಾಸನದ ಆಧಾರ ಇದೆ. ರಾಜ ಒಡೆಯರು ಸಿಂಹಾಸನವನ್ನು ಉಪಯೋಗಿಸುತಿದ್ದರು ಎನ್ನುವುದಕ್ಕೂ ಶಾಸನದ ಆಧಾರ ಇದೆ. ಔರಂಗಜೇಬ ಸಿಂಹಾಸನವನ್ನು ಚಿಕದೇವರಾಜರಿಗೆ ಕೊಟ್ಟ ಎನ್ನುವ ಸಮಾಚಾರವನ್ನು ಚಿಕದೇವರಾಜರೇ ತಮ್ಮ ನೆರೆಯ ರಾಜರಲ್ಲಿ ತಮ್ಮ ಪರ ಗೌರವ ಹೆಚ್ಚುವಂತೆ ಮಾಡಲು ತಾವೇ ಪ್ರಚಾರ ಮಾಡಿರಬೇಕು. ಟಿಪ್ಪು ಸುಲ್ತಾನ ಮೈಸೂರು ದೊರೆಯಾಗುವವರೆಗೂ ಈ ಸಿಂಹಾಸನವನ್ನು ಮೈಸೂರು ಅರಸರು ಉಪಯೋಗಿಸುತಿದ್ದರು.

ಶ್ರೀರಂಗಪಟ್ಟಣ ಇಂಗ್ಲೀಷರ ಕೈವಶವಾದಾಗ ಈ ಸಿಂಹಾಸನ ಟಿಪ್ಪುವಿನ ಅರಮನೆಯ ಉಗ್ರಾಣದಲ್ಲಿರುವುದು ಕಂಡುಬಂತು. ಈ ಸಿಂಹಾಸನವನ್ನು ಹೊರತೆಗೆದು ಅದರಮೇಲೆಯೇ ಮುಮ್ಮಡಿ ಕೃಷ್ಣರಾಜರನ್ನಿಟ್ಟು ಪಟ್ಟಕಟ್ಟಿದರು. ಇದಿಷ್ಟು ಶಾಸನಗಳಿಂದ, ಇರುವ ಲೇಖನಗಳ ಸಹಾಯದಿಂದ ತಿಳಿದು ಬರುವ ಅಂಶ. ಹಿಂದಿದ್ದ ಸಿಂಹಾಸನ ದಂತದ್ದಂತೆ. ಅದು ಈಗ ಬಹು ಬದಲಾಯಿಸಿದೆ. ದಂತದಮೇಲೆ ಚಿನ್ನದ ತಗಡು ಹೊದ್ದಿಸಿದೆ. ಬಂಗಾರದಿಂದ ಮಾಡಿದ ಬಾಳೆಯ ಕಂಬ ಮಾವಿನೆಲೆಗಳಿಂದ ಅಲಂಕರಿಸಿದೆ. ಮೇಲಿರುವ ಛತ್ರದ ತುದಿಯಲ್ಲಿ ರತ್ನದಿಂದ ಕೆತ್ತಲ್ಪಟ್ಟ ಪಕ್ಷಿ ಇದೆ. ಹತ್ತುವ ಮೆಟ್ಟಲುಗಳ ಪಕ್ಕದಲ್ಲಿ ಸುಂದರವಾದ ಸ್ತ್ರೀಮೂರ್ತಿಗಳಿವೆ. ಛತ್ರಿಯ ಸುತ್ತ ಮುತ್ತಿನ ಕುಚ್ಚುಗಳಿವೆ. ಪೂರ್ವಕ್ಕೆ ಆನೆಗಳಿವೆ, ದಕ್ಷಿಣಕ್ಕೆ ಕುದುರೆಗಳಿವೆ, ಪಶ್ಚಿಮಕ್ಕೆ ಪದಾತಿ ಸೈನ್ಯವಿದೆ, ಉತ್ತರಕ್ಕೆ ರಥವಿದೆ. ಉಪನ್ಯಾಸದ ಕೊನೆಯಲ್ಲಿ ಸಿಂಹಾಸನದ ಪೂರ್ತಿಯಾದ ವಿವರ ಇದೆ.

ಮಿಥಿಕ್ ಸಮಾಜದಲ್ಲಿ ತಂದೆ ಕೊಟ್ಟ ಮೂರು ಉಪನ್ಯಾಸಗಳ ವಿವರ ಮೇಲೆ ಕೊಟ್ಟಿದೇನೆ. ಇವುಗಳಲ್ಲದೆ ಬೇರೆ ಯಾವುದನ್ನು ತಂದೆ ಕೊಟ್ಟ ಹಾಗೆ ಕಾಣಲಿಲ್ಲ. ಕೊಟ್ಟಿದ್ದರೂ ಮಿಥಿಕ್ ಸಮಾಜದ ಪತ್ರಿಕೆಗಳಲ್ಲಿ ನನಗೆ ಅದರ ಗುರುಹು ಸಿಗಲಿಲ್ಲ. ಆದರಿಂದ ಬೇರೆ ಯಾವ ಉಪನ್ಯಾಸವನ್ನೂ ಅವರು ಕೊಡಲಿಲ್ಲವೆಂದು ಭಾವಿಸಿದ್ದೇನೆ. ತಾವಾಗಿ ಉಪನ್ಯಾಸ ಕೊಡದೆ ಹೋದರೂ ಸಮಾಜದಲ್ಲಿ ನಡೆಯುತಿದ್ದ ಯಾವ ಉಪನ್ಯಾಸಗಳನ್ನೂ ಅವರು ತಪ್ಪಿಸಿಕೊಂಡಂತೆ ಕಾಣಲಿಲ್ಲ. ಸಮಾಜದ ಕಾರ್ಯಕಾರಿ ಮಂಡಲದ ಸದಸ್ಯರಾಗಿದ್ದರು. ಕೊನೆಯವರೆಗೂ ಸಮಾಜ ನಡೆಸಿಕೊಂಡು ಬರುತಿದ್ದ ಪತ್ರಿಕೆಯ ಜನಪದ ಸಾಹಿತ್ಯಶಾಖೆಯ ಸಂಪಾದಕರಾಗಿದ್ದರು. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ಯಾವರೀತಿ ನಮ್ಮ ಮನೆಯ ಅಲಮಾರುವಿನ ಅರೆಯಲ್ಲಿ ಜೋಡಿಸಿಟ್ಟಿತ್ತೊ ಅದೇ ರೀತಿಯಲ್ಲಿ ಮಿಥಿಕ್ ಸಮಾಜದ ಪತ್ರಿಕೆ ಕೂಡ ಮೊದಲನೆಯ ಸಂಚಿಕೆಯಿಂದ ಹಿಡಿದು ಕೊನೆಯುದರವರೆಗೂ ಕ್ರಮವಾಗಿ ಇನ್ನೊಂದು ಅರೆಯಲ್ಲಿ ಜೋಡಿಸಿಟ್ಟಿತ್ತು. ಮಿಥಿಕ್ ಎಂಬುದರ ಅರ್ಥ ನನಗೆ ಚಿಕ್ಕಂದಿನಲ್ಲಿ ಬಹುಕಾಲ ಹೊಳೆದಿರಲಿಲ್ಲ. ಈ ಪುಸ್ತಕಗಳಲ್ಲಿ ಏನಿ

ದೆಯೋ ಎಂದು ಆಶ್ಚರ್ಯಪಡುತಲಿದ್ದೆ. ತಂದೆ ಕೊಟ್ಟ ಉಪನ್ಯಾಸಗಳನ್ನು ಹುಡುಕುವ ಸಲುವಾಗಿ ಮಿಥಿಕ್ ಸಮಾಜದ ಪತ್ರಿಕೆಯ ಹಾಳೆಗಳನ್ನು ತಿರುವಿ ಹಾಕಿದೆ. ಮಿಥಿಕ್ ಸೊಸೈಟಿ ಯಾವ ಕೆಲಸಮಾಡಲು ಹೊರಟಿತು, ಏನನ್ನು ಸಾಧಿಸಿತು ಎಂದು ಆಗ ನಾನು ಮನಗಂಡೆ. ತಂದೆ ಮಿಥಿಕ್ ಸಮಾಜದ ಕಾರ್‍ಯದಲ್ಲಿ ವಹಿಸಿದ ಪಾತ್ರವನ್ನು ಮೇಲೆ ವಿವರಿಸಿದ್ದೇನೆ

# ಬ್ರಾಹ್ಮಣ ಅಬ್ರಾಹ್ಮಣ ವಾದ.

ನಾವು ಗಂಗಡಿಕಾರ ಮತದ ಒಕ್ಕಲಿಗರು. ಬ್ರಾಹ್ಮಣೇತರ ಎಂಬ ಅಸಂಖ್ಯಾತ ವರ್ಗಕ್ಕೆ ಸೇರಿದವರು. ಮುಸ್ಲಿಮ ಮುಸ್ಲಿಮೇತರ ಎಂದು ವಿಭಾಗಮಾಡಿ ದೇಶದಲ್ಲಿ ಪಾಕಿಸ್ಥಾನದ ಬೀಜ ಬಿತ್ತಿದಂತೆ, ಜಾತಿಯನ್ನೆ ಮುಂದುಮಾಡಿ ಬ್ರಾಹ್ಮಣ ಬ್ರಾಹ್ಮಣೇತರ ಎಂದು ಮಾಡಿರುವ ಈ ವಿಭಾಗ ನಮ್ಮಲ್ಲಿಯೂ ಒಂದು ಒಳ ಪಾಕಿಸ್ಥಾನವನ್ನು ಏರ್ಪಡಿಸುತ್ತ ಬಂದಿದೆ. ಆ ಜಾತಿಯಲ್ಲಿ ಹುಟ್ಟಿದ ಮಾತ್ರದಿಂದ ಬ್ರಾಹ್ಮಣನಾದವನು ಶ್ರೇಷ್ಠ ಎಂದೆನಿಸಿಕೊಳ್ಳುತ್ತಾನೆ. ಆ ಜಾತಿಯಲ್ಲಿ ಹುಟ್ಟದ ಮಾತ್ರದಿಂದ ಮಿಕ್ಕವರೆಲ್ಲರೂ ಬೇರೆಯೊಂದು ವರ್ಗವಾಗುತ್ತಾರೆ ಬ್ರಾಹ್ಮಣನ ದೃಷ್ಟಿಯಲ್ಲಿ ಇವರೆಲ್ಲ ಅವನಿಗಿಂತ ಕಡಿಮೆ ದರ್ಜೆಯವರು. ಅವನ ಒಂದಿಗೆ ಸಹಕರಿಸಲು ಅಯೋಗ್ಯರು. ವಿದ್ಯೆ ಸಂಸ್ಕಾರ ಇವು ಯಾವುದೂ ಈ ಹುಟ್ಟಿನ ಜಾತಿಬೇಧವನ್ನು ನಿರ್ಮೂಲನಮಾಡುವುದಿಲ್ಲ ಹಿಂದಿನ ಕಾಲದಲ್ಲಿ ಜಾತಿ ಮತದ ಕಟ್ಟುಪಾಡು ಮಾಡಲು ಯಾವ ಅಗತ್ಯ ಇತ್ತೊ ಅದು ನನಗೆ ಗೊತ್ತಿಲ್ಲ. ಅದೇ ಅಗತ್ಯ ಈ ಕಾಲದಲ್ಲಿ ಇಲ್ಲ ಎನ್ನುವದಂತೂ ಸ್ಪಷ್ಟವಾಗಿದೆ. ಆದರೂ ಈ ಬಗೆಯ ಸಂಪ್ರದಾಯವನ್ನು ನಡೆಸಿಕೊಂಡು ಬರುತ್ತಿರುವುದು ಸಮಾಜದಲ್ಲಿ ದೊಡ್ಡ ಕುಂದು. ಇದು ಹುಣ್ಣಿನಂತೆ ನಾರುತ್ತಿದೆ ; ಕೊಳೆತು ದುರ್ಗಂಧ ಬೀರುತ್ತಿದೆ.

ಬ್ರಾಹ್ಮಣರಾಗಿ ಹುಟ್ಟದ ಕಾರಣದಿಂದ ತಮಗೆ ಕೆಲವು ಸಾಮಾನ್ಯವಾದ ಹಕ್ಕುಗಳೂ ಇಲ್ಲದೆ ಹೋದುದು ಆ ಕಾಲದಲ್ಲಿ ವಿದ್ಯಾವಂತರಾಗಿದ್ದ ಅನೇಕ ಬ್ರಾಹ್ಮಣೇತರ ಮುಖಂಡರಿಗೆ ತೋರಿತು, ನಾನು ವಿವರಿಸುತ್ತಿರುವ ಕಾಲದ ಸುಮಾರಿಗೆ ದಕ್ಷಿಣದಲ್ಲಿ ಬ್ರಾಹ್ಮಣೇತರರ ಚಳುವಳಿ, "Non-Brahmin Movement" ಪ್ರಾರಂಭವಾಯಿತು. ಜಾತಿ ಮತದ ಹೆಸರಿನಲ್ಲಿ ಅಲ್ಪಸಂಖ್ಯಾತರಾಗಿದ್ದರೂ ಪ್ರಬಲರಾಗಿದ್ದ ಬ್ರಾಹ್ಮಣ ವರ್ಗದವರಿಂದ ಬಹುಸಂಖ್ಯಾತರಿಗೆ ಆಗುತಿದ್ದ ಅನ್ಯಾಯವನ್ನು ತಂದೆ ಬಲ್ಲವರಾಗಿದ್ದರು. ಸ್ವಂತವಾಗಿ ಅದರ ಕಹಿಯುನ್ನುಂಡಿದ್ದರು. ಹಿಂದಿನ ಒಂದು ಅಧ್ಯಾಯದಲ್ಲಿ ಯಾವರೀತಿ ನನ್ನ ಸೋದರತ್ತೆಯರಿಗೆ, ಅವರು ಹುಟ್ಟಿದ ಮತವೇ ಕಾರಣ

ವಾಗಿ ಶಾಲೆಯಲ್ಲಿ ಮಿಕ್ಕವರೊಡನೆ ಸರಿಸಮಾನರಂತೆ ಓದುವ ಅವಕಾಶ ಕೂಡ ಸಿಗಲಿಲ್ಲವೆಂದು ತಿಳಿಸಿದ್ದೇನೆ. ಇಂಥ ಹಲವು ಅನ್ಯಾಯಗಳು ಹೋಗುವುದಕ್ಕೆ ತಂದೆ ಬಹುವಾಗಿ ಶ್ರಮಿಸಿದರು.

ಜಾತಿಯ ಹೆಸರಿನಲ್ಲಿ ನಡೆಯುವ ಅನ್ಯಾಯ ಎಂಥದು, ಬ್ರಾಹ್ಮಣನಲ್ಲದವನಿಗೆ ಇದು ಎಷ್ಟು ಚುಚ್ಚುತ್ತದೆ ಎಂದು ತೋರಿಸಿಕೊಡುವುದು ಅಗತ್ಯವಾಗಿ ಕಾಣುತ್ತದೆ. ಈಗ ಕೂಡ ಚಿಕ್ಕಂದಿನಿಂದ ಮನೆಮನೆಯಲ್ಲಿ ಜಾತಿ ಬೇಧವನ್ನು ಮಕ್ಕಳಿಗೆ ಕಲಿಸಿಕೊಡುತ್ತಿದಾರೆ. ಇದನ್ನು ದಿನವೂ ನಾನು ಕಿವಿಯಾರೆ ಕೇಳುತ್ತಿದೇನೆ. 'ಅದು ಶೂದ್ರರ ಮನೆ ಅಲ್ಲಿಗೆ ಹೋಗಬೇಡ' 'ಅವರು ಶೂದ್ರರು ಅವರನ್ನು ಮುಟ್ಟಿಸಿಕೊಳ್ಳಬೇಡ' ಎಂದು ಮನೆಯ ಹಿರಿಯರು ಮಕ್ಕಳಿಗೆ ಹೇಳಕೊಡುತ್ತಾರೆ. ಮಕ್ಕಳು ಇಂಥದೇ ವಾತಾವರಣದಲ್ಲಿ ಬೆಳೆದು ದೊಡ್ಡವರಾಗುತ್ತಾರೆ. ಆಮೇಲೆ ಅವರು ಎಷ್ಟು ವಿದ್ಯೆ ಕಲಿಯಲಿ ಎಂಥ ಸಂಸ್ಕಾರ ಪಡೆಯಲಿ ಚಿಕ್ಕಂದಿನಲ್ಲಿ ಕಲಿತ ಸಂಕುಚಿತ ಮನೋಭಾವ ಹೋಗುವುದಿಲ್ಲ. ತಾನು ಯಾವುದೋ ಒಂದು ಬಗೆಯಲ್ಲಿ ಮಿಕ್ಕವರಿಗಿಂತ ಶ್ರೇಷ್ಟ ಎನ್ನುವ ಭಾವನೆ ಅವನಲ್ಲಿ ಬೇರೂರಿಬಿಡುತ್ತದೆ. ಬ್ರಾಹ್ಮಣನಿಗೆ ಹೇಗೆ ತಾನು ಶ್ರೇಷ್ಟ ಎಂಬ ಭಾವನೆ ಬಲಿತಿರುತ್ತದೆಯೋ ಅದೇ ರೀತಿಯಲ್ಲಿ ಬ್ರಾಹ್ಮಣನಲ್ಲದವನಿಗೂ ತಾನು ಕನಿಷ್ಟ ಎನ್ನುವ ಭಾವನೆ ಇರುತ್ತದೆ. ವ್ಯವಹಾರದಲ್ಲಿಯೂ ಅದೇರೀತಿ ನಡೆದುಕೊಳ್ಳುತಾನೆ. ಈ ಬಗೆಯ ಬೇಧಭಾವನೆ ರಕ್ತದಲ್ಲಿಯೇ ಅಡಿಗಿದೆಯೋ ಎನ್ನುವಷ್ಟು ಸಹಜವಾಗಿಬಿಟ್ಟಿದೆ.

ಜಾತಿಯ ಕಟ್ಟುಪಾಡಿನಿಂದ ನಮ್ಮ ಮನೆಯ ಹಿರಿಯರು ಎಷ್ಟೋ ನೊಂದಿದ್ದರೂ, ಈ ಜಾತಿಯ ಭೂತ ನಮ್ಮ ಮನೆಯಲ್ಲಿ ತಲೆಹಾಕಿರಲಿಲ್ಲ. ನಮ್ಮೊಂದಿಗೆ ಒಡನಾಡುತ್ತಿದ್ದ ಬ್ರಾಹ್ಮಣ ಹುಡುಗರಿಗಿಂತ ನಾವು ಯಾವ ಬಗೆಯಲ್ಲೇ ಆಗಲಿ ಕಡಿಮೆಯುವರು ಎನ್ನುವ ಭಾವ ಬಂದಿರಲಿಲ್ಲ. ಬ್ರಾಹ್ಮಣರಲ್ಲದವರಾಗಿ ಹುಟ್ಟಿದರೆ ಹೊರಗಿನ ಬಾಳಿನಲ್ಲಿ ಕೆಲವು ಅನ್ಯಾಯಗಳನ್ನು ಎದುರಿಸಬೇಕು ಎನ್ನುವುದು ತಿಳಿದಿರಲಿಲ್ಲ. ನಾನು ವಿದ್ಯಾಭ್ಯಾಸ ಮುಗಿಸಿಕೊಂಡು ಹೊರಪ್ರಪಂಚದಲ್ಲಿ ನನ್ನ ಕಾಲಮೇಲೆ ನಾನು ನಿಲ್ಲುವವರೆಗೂ

ತಿಳಿಯಲಿಲ್ಲ. ನಮ್ಮ ಜಾತಿ ಹೆಚ್ಚಿನದು ಅವರದು ಕಡಿಮೆಯದು, ಅವರನ್ನು ಮುಟ್ಟಕೂಡದು ಇವರನ್ನು ಒಳಗೆ ಸೇರಿಸಕೂಡದು, ಈ ಬಗೆಯ ಮಾತುಗಳನ್ನು ನಾವು ಚಿಕ್ಕಂದಿನಲ್ಲಿ ಕಂಡರಿಯೆವು.

ಜಾತಿಯ ಹೆಸರಿನಲ್ಲಿ ನಡೆದ ಅನ್ಯಾಯದ ಕಟುವಾದ ಅನುಭವ ನನಗೆ ಉಂಟಾದುದು ನಾನು ಉದ್ಯೋಗ ಸೇರಿಕೊಂಡ ಮೊದಲನೆಯ ವರ್ಷದಲ್ಲಿ. ಕಾರ್ಯದ ಸಲುವಾಗಿ ನಾನು ನನ್ನ ಮೇಲಧಿಕಾರಿಗಳೊಡನೆ ಬಿಳಿಗಿರಿರಂಗನ ಬೆಟ್ಟಕ್ಕೆ ಹೋಗಬೇಕಾಯಿತು. ಗುಮಾಸ್ತರು ಒಬ್ಬರು ನಮ್ಮೊಂದಿಗೆ ಇದ್ದರು. ರಾತ್ರಿಯನ್ನು ಬೆಟ್ಟದ ಮೇಲೆಯೇ ಕಳೆಯುವ ಪ್ರಸಂಗ ಬಂತು ರಾತ್ರಿಯ ಊಟವನ್ನು ಅಲ್ಲಿಯೇ ಒಂದು ಮನೆಯಲ್ಲಿ ಏರ್ಪಾಡುಮಾಡಿದ್ದರು. ನಡುಮನೆಯಲ್ಲಿ ಬ್ರಾಹ್ಮಣರಾದ ನನ್ನ ಮೇಲಧಿಕಾರಿಗಳಿಗೂ, ಗುಮಾಸ್ತರಿಗೂ ಎಲೆಹಾಕಿತ್ತು. ಅವರಿಗೆ ಕಾಣುವಂತೆಯೇ ಹೊರಗಡೆ ವರಾಂಡದಲ್ಲಿ ಇನ್ನೊಂದು ಎಲೆ ಹಾಕಿತ್ತು. ಈ ಎಲೆ ಹೀನ ಜಾತಿಯವನಾದ ನನಗೆ ಎಂದು ಅಲ್ಲಿನ ಪಾರುಪತ್ತೆಗಾರ ಮುಂದಟ್ಟುಮಾಡಿ ಕೊಟ್ಟ ನಮ್ಮ ಮನೆಯಲ್ಲಿ ನಾಯಿಗೆ ಕೂಡ ಇನ್ನೂ ಸ್ವಚ್ಛವಾದ ಜಾಗದಲ್ಲಿ ಊಟ ಹಾಕುತಿದ್ದರು. ಅಂದು ನಾನು ಅಲ್ಲಿ ಊಟಮಾಡಬೇಕಾಗಿ ಬಂತು. ಇಂಥ ಅನುಭವ ನನಗೆ ತೀರ ಹೊಸದು. ನನ್ನ ಜೊತೆಯವರಿಗೆ ಪಾರುಪತ್ತೆಗಾರ ಕಲ್ಪಿಸಿದ ಬೇಧ ವಿಚಿತ್ರವಾಗಿ ತೋರಲಿಲ್ಲ ಅವರು ಏನೊಂದೂ ಯೋಚನೆಯಿಲ್ಲದೆ ಊಟಮಾಡತೊಡಗಿದ್ದರು. ಈಗಾಗಿದ್ದರೆ ನಾನು ಊಟಮಾಡದೆ ಎದ್ದು ಬರುತ್ತಿದ್ದೆನೊ ಏನೊ. ಆದರೆ ಆಗ ಹಾಗೆ ಮಾಡಲಿಲ್ಲ. ನುಂಗಲಾರದ ತುತ್ತು ನುಂಗಿ ಎದ್ದದ್ದಾಯಿತು. ಅದೇ ನನ್ನ ಮೊದಲ ಕಟುವಾದ ಅನುಭವ. ಈಗ ಕೂಡ ಆ ದಿನ ನೆನಸಿಕೊಂಡರೆ ಮೈಯಲ್ಲಿ ಉರಿ ಏಳುತ್ತದೆ. ಆ ದಿನದಿಂದೀಚೆಗೆ ಇದೇ ತರದ ಅನುಭವ ಬೇಕಾದ ಹಾಗೆ ಆಗಿದೆ. ಆ ಸಮಯದಲ್ಲಿ ನನ್ನ ಮನಸಿಗೆ ಸಮಾಧಾನವಾಗುವ ರೀತಿಯಲ್ಲಿ ನಾನು ನಡೆದುಕೊಂಡಿದ್ದೇನೆ. ಬಾಯಾರಿ ಬಂದ ಬ್ರಾಹ್ಮಣ ಮಿತ್ರರು ಕೆಲವರಿಗೆ ಪ್ರೀತಿಯಿಂದ ನೀರ ಕೊಡಹೋಗಿ ಅವರಿಂದ ಒಲ್ಲೆ ಎನಿಸಿಕೊಂಡಿದೇನೆ. ಒಲ್ಲೆಯೆಂದವರು ಮರುಗಳಿಗೆಯಲ್ಲಿ ಕೊಳಕು ಬಟ್ಟೆಯ ಸಾರುವ ಹೋಟಲು ಬ್ರಾಹ್ಮಣ, ಜಿಡ್ಡುಕಟ್ಟಿದ ಪಾತ್ರೆಯಲ್ಲಿ ತಂದ

ನೀರು ಕುಡಿದುದನ್ನು ನೋಡಿ ನೊಂದಿದ್ದೇನೆ. ಇಂಥ ನಿದರ್ಶನ ಹತ್ತಾರು. ಸ್ನೇಹಿತರ ಮಧ್ಯೆ, ಸೌಹಾರ್ದಭಾವದಿಂದ ನಡೆಕೊಳ್ಳುತ್ತಿರುವ ಸಹೋದ್ಯೋಗಿಗಳ ಮಧ್ಯೆ ಈ ಜಾತಿಯ ಭೂತ ಆಗಾಗ ಎದ್ದು ನಿಂತು ನನ್ನ ಮನಸಿನ ನೆಮ್ಮದಿಯನ್ನು ಹಾಳುಮಾಡಿದೆ. ನಾನು ಮುಟ್ಟಿದ ನೀರನ್ನು ಇಂದು ಕುಡಿಯದವರು ನಾಳೆ ಹೊರದೇಶಗಳಲ್ಲೆಲ್ಲ ಸುತ್ತಾಡಿ ಬರಲು ತಯಾರಾಗಿದ್ದಾರೆ. ಹೊರಗಡೆ ಮಾತ್ರ ಜಾತಿ ಮತಗಳ ಪರಿವೆಯಿಲ್ಲದೆ ನಾವು ಹಿಂದೀಯರು ನಾವೆಲ್ಲರೂ ಒಂದು ಎನ್ನುವ ಒಗ್ಗಟ್ಟಿನ ಭಾವನೆಯಿಂದ ನಡೆದುಕೊಳ್ಳುವ ಜನ ನಮ್ಮದೇಶಕ್ಕೆ ಹಿಂದಿರುಗಿದ ಕ್ಷಣವೇ ಹಳೆಯ ನೆನಪುಗಳನ್ನು ಕೆಣಕಿ, ಜಾತಿಗಳನ್ನು ಬೆದಕಿ ದೂರವಾಗುತ್ತಾರೇಕೋ ತಿಳಿಯದು. ನಮ್ಮ ದೇಶದ ವಾತಾವರಣದಲ್ಲಿಯೇ ಅಂತಃಕಲಹ ಬೆರೆತಿದೆಯೊ ಏನೊ !

ಬ್ರಾಹ್ಮಣರಲ್ಲದ ನಮ್ಮ ಮನಸಿನಲ್ಲಿ ಜಾತಿಯ ಹೆಸರಿನಲ್ಲಿ ನಡೆಯುವ ಆಚಾರದಸರ ಯಾವ ಭಾವನೆಯಿದೆ ಎನ್ನುವುದಕ್ಕೆ ಮೇಲೆ ರೂಪ ಕೊಟ್ಟಿದೇನೆ. ಬ್ರಾಹ್ಮಣನಿಗೆ ಹೇಗೊ ಇತರರಿಗೂ ಸಮಾಜದಲ್ಲಿ ಸರಿಯಾದ ಸ್ಥಾನಮಾನಗಳು ದೊರೆಯಲಿ ಎನ್ನುವುದಕ್ಕಾಗಿ ಪ್ರಯತ್ನ ನಡೆಯುತ್ತಿದೆ. ಹೀಗೆ ಪ್ರಯತ್ನಪಟ್ಟವರಲ್ಲಿ ನನ್ನ ತಂದೆಯೂ ಒಬ್ಬರು. ಆದರೆ ಇವರೆಲ್ಲ ಪಟ್ಟ ಪ್ರಯತ್ನ ಸರಕಾರದಲ್ಲಿ ಹೆಚ್ಚು ಕೆಲಸ ಗಳಿಸುವ ಕಡೆಗೇ ಕೂಲಿತು. ಇಂಥ ವ್ಯತ್ಯಾಸಗಳಿಗೆ ಮೂಲವಾದ ಮನಸಿನ ಭಾವನೆಗಳನ್ನು ನಿವಾರಣೆಮಾಡುವ ಪ್ರಯತ್ನ ಆಗಲೂ ನಡೆಯಲಿಲ್ಲ. ಈಗಲೂ ನಡೆಯುತ್ತಿಲ್ಲ. ಹಿಂದುಳಿದ ಕೋಮಿನವರು, ನಾವು ಹಿಂದುಳಿದವರು ಎಂದು ಹೇಳಿಕೊಳ್ಳಲು ಹೆಮ್ಮೆಪಡುತ್ತಾರೆಯೇ ವಿನಹ ಆ ಹೆಸರು ತೊಡೆದು ಹೋಗುವಂತೆ ಪ್ರಯತ್ನ ಪಡುತ್ತಿಲ್ಲ. ಆಡಳಿತದಲ್ಲಿ ಮೊದಲು ಬ್ರಾಹ್ಮಣರಿಗೆ ನೌಕರಿ ಸುಲಭವಾಗಿ ದೊರೆಯುತ್ತಿದ್ದ ಕಡೆ ಈಗ ಅಬ್ರಾಹ್ಮಣರಿಗೆ ದೊರೆಯುತ್ತಿದೆ. ಶಾಲೆಗಳಲ್ಲಿ ಕಾಲೇಜುಗಳಲ್ಲಿ ಕೂಡ ಸ್ಥಳ ಕೊಡುವಾಗ ಇಷ್ಟು ಜನ ಲಿಂಗಾಯಿತರಿಗೆ, ಇಷ್ಟು ಒಕ್ಕಲಿಗರಿಗೆ, ಇಷ್ಟು ಕುರುಬರಿಗೆ ಎಂದು ಮತಮತದ ಲೆಕ್ಕ ನಡೆಯುತ್ತಿದೆ. ಈ ಲೆಕ್ಕಾಚಾರದಲ್ಲಿ, ಮೇಧಾಶಕ್ತಿ ಬುದ್ಧಿವಂತಿಕೆ ಮೂಲೆ ಪಾಲಾಗಿಬಿಟ್ಟಿದೆ. ಈ ರೀತಿ ನಡೆಯುವುದು ಅನ್ಯಾಯ ಎಂದು ನನ್ನ

ಮನಸು ಹೇಳುತ್ತದೆ. ಆದರೆ ನನಗೆ ತಪ್ಪಾಗಿ ತೋರುವುದು ನನ್ನ ತಂದೆಗೆ ಆ ರೀತಿ ತೋರಲಿಲ್ಲ. ಸರಕಾರದಲ್ಲಿ, ಶಾಲಾ ಕಾಲೇಜುಗಳಲ್ಲಿ, ಅಧ್ಯಾಪಕ ವರ್ಗದಲ್ಲಿ ಹೆಚ್ಚು ಮಂದಿ ಬ್ರಾಹ್ಮಣೇತರರಿಗೆ ಅವಕಾಶವನ್ನು ದೊರಕಿಸಿ ಕೊಡುವ ಪ್ರಯತ್ನಕ್ಕೆ ಅವರು ಬೆಂಬಲಕೊಟ್ಟರು. ತಾವೂ ಬಹುವಾಗಿ ಶ್ರಮಿಸಿದರು. ಮತದ ಹೆಸರಿನಲ್ಲಿ ನಡೆಯುವ ನಾನು ಮೇಲು ನೀನು ಕೀಳು ಎಂದೆಣಿಸುವ ಅನ್ಯಾಯ ಹೋಗಲಾಡಿಸಲು ಸರಕಾರದಲ್ಲಿ ಹೆಚ್ಚು ನೌಕರಿ ಸಂಪಾದಿಸಿಕೊಟ್ಟ ಮಾತ್ರದಿಂದ ಆಗಲಿಲ್ಲ. ಈ ಬಗೆಯ ಪ್ರಯತ್ನದಿಂದ ಹಿಂದಿದ್ದ ಅನ್ಯಾಯ ಹೋಗುವುದಿಲ್ಲ. ಒಂದಿದ್ದ ಕಡೆ ಎರಡು ಹುಟ್ಟಿ ಕೊಳ್ಳುತ್ತದೆ. ಬ್ರಾಹ್ಮಣ ಅಬ್ರಾಹ್ಮಣರಲ್ಲಿ ವಿದ್ವೇಷ ಮಾತ್ರ ಹೆಚ್ಚುತ್ತದೆ. ಎಳೆತನದಿಂದ ಪ್ರಯತ್ನ ನಡೆಯಬೇಕು. ನಾವು ಇಂಥ ಜಾತಿಯವರು, ನಮ್ಮದು ಶ್ರೇಷ್ಠ ಅವರದು ಹೀನ ಎಂದು ಚಿಕ್ಕಂದಿನಿಂದ ಪ್ರತಿ ಮನೆಯಲ್ಲೂ ನಡೆಯುತ್ತಿರುವ ಉಪದೇಶ ನಿಲ್ಲಬೇಕು. ನಾವೆಲ್ಲರೂ ಸಮಾನರು, ಒಂದೇ ನಾಡವರು ಎನ್ನುವ ಭಾವ ಬಲಿಯುವಂತೆ ಚಿಕ್ಕಮಕ್ಕಳ ಶಿಕ್ಷಣ ತಿದ್ದುಪಾಡಾಗಬೇಕು. ಮಕ್ಕಳ ವಿದ್ಯಾಭ್ಯಾಸದ ಉದ್ದಕ್ಕೂ ಇದೇ ಭಾವನೆ ಬಲಿಯಬೇಕು. ಈ ಬಗೆಯ ವಿದ್ಯಾಭ್ಯಾಸ ಈಗ ಎಲ್ಲಿಯೂ, ಯಾವ ಶಾಲೆಯಲ್ಲೂ ನಡೆಯುತಿರುವಂತೆ ಕಾಣಲಿಲ್ಲ. ಚಿಕ್ಕಂದಿನಿಂದ ನಾವೆಲ್ಲ ಸರಿಸಮಾನರು ಎನ್ನುವ ಭಾವ ಯಾವಾಗ ಬೆಳೆದು ಬರುವುದಿಲ್ಲವೋ, ದೊಡ್ಡವರಾದಮೇಲೆ ಎಂಥ ಸಂಸ್ಕಾರ ದೊರೆತರೂ ಚಿಕ್ಕಂದಿನ ನಾಯಬಾಲದ ಬುದ್ಧಿ ನೇರವಾಗುವುದಿಲ್ಲ. ಕೊನೆಗೂ ಡೊಂಕಾಗಿಯೇ ಉಳಿಯುತ್ತದೆ.

ಬ್ರಾಹ್ಮಣರದೇ ಸರ್ವಾಧಿಕಾರವೂ ಆಗಿದ್ದಕಡೆ ಬ್ರಾಹ್ಮಣೇತರರಿಗೂ ಸ್ಥಾನಮಾನ ದೊರಕಿಸಲು ಚಳುವಳಿ ಪ್ರಾರಂಭವಾಯಿತು ಎಂದು ಹಿಂದೆ ತಿಳಿಸಿದೆ. ಹಿಂದುಳಿದ ಬ್ರಾಹ್ಮಣೇತರರಿಗೆ ಕೆಲವು ರಿಯಾಯಿತಿಗಳನ್ನು ಸಂಪಾದಿಸಿಕೊಡಲು ಈ ಚಳುವಳಿ ಸಹಾಯಕವಾಯಿತು. ಹುಟ್ಟುತಲೇ ಮಗು ದೊಡ್ಡವರೊಡನೆ ಸರಿಸಮಾನವಾಗಿ ಪೈಪೋಟಿಗೆ ನಿಲ್ಲಲು ಸಾಧ್ಯವೆ. ಅದನ್ನು ಪಾಲನೆಮಾಡಬೇಕು. ಕೈಹಿಡಿದು ನಡಿಗೆ ಕಲಿಸಿಕೊಡಬೇಕು. ದೊಡ್ಡದನ್ನಾಗಿ ಮಾಡಿ ಮಿಕ್ಕವರೊಡನೆ ಸರಿದೂಗುವಂತೆ ಮಾಡಬೇಕು. ಇವನ್ನೆಲ್ಲ ನಾವು ಮಾಡುತ್ತೇವಷ್ಟೆ. ಹೀಗೆಯೇ, ಬಹುಕಾಲದಿಂದ ಹಿಂದೆಯೇ ಉಳಿದು

ಮೂಕರಾಗಿದ್ದವರು ಒಮ್ಮೆಗೇ ಹಿಂದಿನಿಂದ ವಿದ್ಯೆ ಸಂಸ್ಕಾರಗಳನ್ನು ಪಡೆದು ಕೊಂಡ ಬ್ರಾಹ್ಮಣರೆದುರು ಸರಿಸಮನಾಗಿ ಪೈಪೋಟಿಗೆ ನಿಲ್ಲಲು ಸಾಧ್ಯವಿಲ್ಲ. ಆದಕ್ಕಾಗಿಯೇ ಹಿಂದುಳಿದವರಿಗಾಗಿ ಅನೇಕ ರಿಯಾಯಿತಿಗಳನ್ನು ತೋರಿಸ ಬೇಕಾಯಿತು. ಅವರಿಗೆ ವೇತನಕೊಡಬೇಕಾಯಿತು. ಉಚಿತವಾದ ನಿಲಯ ಗಳಲ್ಲಿ ಅವರನ್ನು ಸಾಕಬೇಕಾಯಿತು. ವಿದ್ಯೆ ಕಲಿತಾದಮೇಲೆ ಅವರಿಗೆ ಸರಿಯಾದ ನೌಕರಿ ಕೊಟ್ಟು ಅವರನ್ನು ಮನ್ನಿಸಬೇಕಾಯಿತು. ಇದೆಲ್ಲ ತೀರ ಆವಶ್ಯಕ. ಇದೆಲ್ಲ ಕೂಡದು ಎಂದು ಯಾರೂ ಹೇಳದಿರಲಿ. ನಾವಿರು ವುದು ಪರ್ವಕಾಲ. ಇಂಥ ರಿಯಾಯಿತಿಗಳು ಈಗ ಅತ್ಯಗತ್ಯ. ಎಲ್ಲರಿಗೂ ಸಮಾನವಾದ ಸಂಸ್ಕಾರ ದೊರೆತ ಕಾಲಕ್ಕೆ ಇಂಥ ರಿಯಾಯಿತಿಗಳು ಇರುವ ಅವಶ್ಯಕತೆ ಇಲ್ಲ. ನನಗೆ ತಿಳಿದಂತೆ ನನ್ನ ಒಂದಿಗೆ ಹೈಸ್ಕೂಲಿನಲ್ಲಿ ಓದು ತಿದ್ದ ಕೆಲವು ಹರಿಜನ ವಿದ್ಯಾರ್ಥಿಗಳು ಯಾರೂ ಮುವ್ವತ್ತು ವರ್ಷಕ್ಕೆ ಕಡಿಮೆ ಇದ್ದಂತೆ ತೋರುತಿರಲಿಲ್ಲ. ಹುಡುಗರಾದ ನಮ್ಮ ಮಧ್ಯೆ ಅವರು ದೀರ್ಘದೇಹಿಗಳಾಗಿ ಓಡಾಡುತಿದ್ದರು. ನನ್ನ ಕಿರಿಯ ತಮ್ಮನ ಸ್ನೇಹಿತರು ಕೆಲವರು ಇದಾರೆ. ಇವರೆಲ್ಲರೂ ಅವನ ಸಮವಯಸ್ಕರಾಗಿಯೇ ಇದಾರೆ. ಅವರಲ್ಲಿಯೂ ವಿದ್ಯೆ ಕಲಿಯುವ ದಾಹ ಹೆಚ್ಚಾಗಿದೆ. ತಾವೇ ಯಾರ ಬಲ ವಂತವಿಲ್ಲದೆಯೇ ಶಾಲೆಗೆ ಬಂದು ವಿದ್ಯೆ ಕಲಿಯುತ್ತಿದಾರೆ. ಅವರಿಗೆ ಮೊದಲು ತೋರಿಸಿದ್ದ ರಿಯಾಯಿತಿಗಳೂ ಈಗ ಒಂದೊಂದಾಗಿ ಮಾಯ ವಾಗುತ್ತಿವೆ. ಕ್ರಮೇಣ ಪೂರ್ತಿ ಮಾಯವಾಗುತ್ತವೆ. ಅಂಥ ಕಾಲ ಬೇಗನೆ ಬರಲಿ ಎಂಬುದೇ ನಮ್ಮೆಲ್ಲರ ಹಾರೈಕೆಯಾಗಬೇಕು. ನಾನು ಹಿಂದುಳಿದ ಕೋಮಿನವನು, ನನಗೆ ಕೆಲಸಕೊಡಿ, ಎಂದು ಕೇಳಿ ಬರುವ ಕೂಗು ಕಡಿಮೆಯಾಗಬೇಕು. ಹಿಂದುಳಿದವನು ಎಂದು ಹೇಳಿಕೊಳ್ಳುವುದು ಹೆಮ್ಮೆಯ ವಿಷಯವಲ್ಲ, ನಮ್ಮ ಮನಸನ್ನು ಚುಚ್ಚಬೇಕಾದ ಮುಳ್ಳು ಎಂದು ನಾವೆಲ್ಲ ಅರಿಯುವಂತಾಗಬೇಕು. ಅಂದಿಗೆ ಈ ವಾದ ಈ ಸಮಸ್ಯೆ ಪರಿಹಾರವಾಗುತ್ತದೆ.

# ಏಟ್ಸ್ ದಂಪತಿಗಳು.

ಶ್ರೀಯುತ ಮತ್ತು ಶ್ರೀಮತಿ ಏಟ್ಸ್ ಅವರುಗಳಿಗೂ ನಮ್ಮ ತಂದೆಗೂ ಇದ್ದ ಮೈತ್ರಿಯನ್ನು, ಈ ದಂಪತಿಗಳಿಂದ ನಮ್ಮ ಮನೆತನಕ್ಕಾಗಿರುವ ಉಪಕಾರವನ್ನು ಹಿಂದಿನ ಅಧ್ಯಾಯ ಒಂದರಲ್ಲಿ ಸ್ಮರಿಸಿದೇನೆ. ೧೯೧೭ ರಲ್ಲಿ ಶ್ರೀ ಏಟ್ಸ್‌ರವರು ಸರಕಾರಿ ಮುದ್ರಣಶಾಲೆಯ ಅಧ್ಯಕ್ಷಪದವಿಯಿಂದ ನಿವೃತ್ತರಾದರು. ಹನ್ನೆರಡು ವರ್ಷಕಾಲ ಬೆಂಗಳೂರಿನ ನಾಗರಿಕ ಜೀವನದಲ್ಲಿ ಬೆರೆತು ಎಲ್ಲರಿಗೂ ಬೇಕಾದವರಾಗಿ ಬಾಳಿದ ಏಟ್ಸ್‌ರವರನ್ನು ಬೀಳ್ಕೊಳ್ಳುವುದಕ್ಕಾಗಿ Y. M. C. A. ನಲ್ಲಿ ಸಭೆ ಸೇರಿತ್ತು. ಅಂದು ಅಧ್ಯಕ್ಷತೆ ವಹಿಸಿದ್ದ ರೆಸಿಡೆಂಟರಾದ ಶ್ರೀ A. V. ಕಾಬ್ ಅವರು—

We are saying good-bye to a very true gentleman in thought word and deed............Never has he been heard to say an unkind word about any one and never a day has passed without his doing a kind action. In twelve years of active life, whether public or private, Mr. Yates has commanded the trust, the admiration and may I say, the affection of all, English and Indian alike with whom he came into contact. ಎಂದು ಏಟ್ಸ್ ಅವರ ಗುಣಕಥನ ಮಾಡಿದರು. ಏಟ್ಸ್ ಅವರನ್ನು ನಮ್ಮ ಹಿರಿಯಣ್ಣ ಹೊರತು ಚಿಕ್ಕವರಾದ ನಾವು ಯಾರೂ ನೋಡಿರಲಿಲ್ಲ. ಅವರ ಚಿತ್ರ ನಾನು ನೋಡಿದೇನೆ. ಅವರದು ಸುಂದರವಾದ ನಗುಮುಖ. ಮಕ್ಕಳ ಮುಖದ ಮೇಲೆ ಕಾಣುವ ತುಂಟ ನಗು ಅವರ ಮುಖದಲ್ಲಿಯೂ ಕಾಣುತಿತ್ತು. ನಿವೃತ್ತಿ ಹೊಂದಿದಮೇಲೆ ಏಟ್ಸ್‌ರವರು ಬಹುಕಾಲ ಬದುಕಲಿಲ್ಲ. ಸ್ವದೇಶಕ್ಕೆ ಹೋಗಬೇಕೆಂದಿದ್ದ ಅವರ ಆಸೆ ಫಲಿಸಲಿಲ್ಲ. ಮಹಾಯುದ್ಧದ ಕಾಲವಾದುದರಿಂದ ತಮ್ಮ ನಾಡಿಗೆ ತೆರಳಲು ತಡವಾಯಿತು. ನಡುವಿನ ಈ ಕಾಲವನ್ನು ನೀಲಗಿರಿಯ ಕೂನೂರಿನಲ್ಲಿ ಕಳೆಯುತ್ತಿದ್ದರು. ಒಂದುದಿನ

ಮರಗೆಲಸ ಮಾಡಿ ಬಂದವರು ಕುಳಿತಕಡೆಯೇ ಪ್ರಾಣಬಿಟ್ಟರು. ಹೆಂಡತಿ ಮಾತ್ರ ಮಕ್ಕಳೊಡನೆ ಸ್ವದೇಶಕ್ಕೆ ಪ್ರಯಾಣಮಾಡಿದರು. ಶ್ರೀಮತಿಯವರಿಗೂ ತಂದೆಗೂ ಆಗಾಗ ಪತ್ರವ್ಯವಹಾರ ನಡೆಯುತ್ತಿತ್ತು. ಈ ಪತ್ರಗಳಲ್ಲಿ ಒಂದನ್ನು ಮಾತ್ರ ತಂದೆ ಜತನವಾಗಿ ಕಾಪಾಡಿಕೊಂಡು ಬಂದಿದ್ದರು. ವಾತ್ಸಲ್ಯಮಯಿಯಾದ ಈ ಏಟ್ಸ್ ತಾಯಿ ಬರೆದ ಈ ಪತ್ರದ ಕೆಲವು ಪಂಕ್ತಿಗಳನ್ನಾದರೂ ಇಲ್ಲಿ ಉದ್ಧರಿಸದೆ ಇರಲಾರೆ.

20-3-1922

I am sending a line to say that I have not forgotten you, althou I have not heard any thing of you.... It is two years since Mr. Paton and I left Bombay. I promised Nellie some weeks ago that I would write you and I was to give her love to you and tell you she loves 'Monicha' as much as ever. In fact she has discarded all her dolls. I do not wonder at it for the one you so kindly gave her is a sweet face to look at, and she has as many different suits of cloth all made by Nellie as there are days in the week. Lilie and the children are all well.

I have been here since November and am very comfortable as far as I can be ; but I need not tell you that I do not like the loneliness and my thoughts are very often in India and sometimes I wish myself there............I have not been able to hold a pen until my rooms are shut up at night and I have a good fire all day, but am looking for-

ward to brighter and longer days of sunshine. I should like a letter if you would like to write me one....... ....with very kind regards. I am sincerly yours.

E. YATES.

ಕಾಗದ ಓದುತ್ತ, ಗಂಡನಿಲ್ಲದೆ ಏಕಾಂಗಿಯಾಗಿ ಮಕ್ಕಳನ್ನು ಸಲಹುತ್ತ ಹಿಂದಿನ ನೆನಪುಗಳನ್ನು ಸ್ಮರಿಸುತ್ತ ಇದ್ದ ವೃದ್ಧಮಾತೆಯ ಚಿತ್ರ ನನ್ನ ಕಣ್ಣ ಮುಂದೆ ನಿಲ್ಲುತ್ತದೆ. ಹಣ್ಣುಹಣ್ಣು ಮುದುಕಿಯಾದ ಶ್ರೀಮತಿ ಏಟ್ಸ್‌ರ ಚಿತ್ರ ನಮ್ಮ ಮನೆಯಲ್ಲಿ ಒಂದಿದೆ. ನಸುಕೆದರಿದ ಬೆಳ್ಳಿಯಂಥ ಕೂದಲು. ಮುಖವೆಲ್ಲ ಸುಕ್ಕು ಸುಕ್ಕು. ಏನೊ ಒಂದು ಬಗೆಯ ಸಾತ್ವಿಕ ಕಳೆ ಮುಖದಮೇಲೆ. ಇವರ ಮಗ ದೊಡ್ಡವನಾದಮೇಲೆ ಮದುವೆ ಮಾಡಿ ಕೊಂಡು ಹೆಂಡತಿಯೊಡನೆ ಬೇರೆಯಾದನಂತೆ. ಈಕೆ ಮಾತ್ರ ಒಂದು ಫೋಟೋಗ್ರಾಫ್ ಅಂಗಡಿಯನ್ನಿಟ್ಟುಕೊಂಡು ಒಂಟಿಯಾಗಿ ಹೇಗೊ ಕಾಲ ತಳ್ಳಿದರಂತೆ. ಹಣ್ಣಾದ ಈ ಜೀವಕ್ಕೂ ಒಂದು ದಿನ ಬಿಡುಗಡೆ ಬಂತು. ೧೯೩೩ ರಲ್ಲಿ ತನ್ನ ಗಂಡನಂತೆಯೇ ತಾನೂ ಇದ್ದಕಿದ್ದ ಹಾಗೆ ಪ್ರಾಣ ಬಿಟ್ಟರು. ತಾಯಿ ತೀರಿಹೋದ ಸಮಾಚಾರವನ್ನು ಆಕೆಯ ಮಗ ನಮ್ಮ ತಂದೆಗೆ ತಿಳಿಸಿದ. ತಂದೆಯ ಮನಸಿನಮೇಲಿನ ಪರಿಣಾಮವನ್ನು ತಿಳಿಯಲು ಯಾವ ಸಾಕ್ಷ್ಯ ದೊರೆತಿಲ್ಲ. ನನ್ನ ತಂದೆಯ ಹಿತೈಷಿಗಳ ಪೈಕಿ ಏಟ್ಸ್ ದಂಪತಿಗಳು ಮೊಟ್ಟಮೊದಲನೆಯ ಸ್ಥಾನ ಪಡೆದವರು. ಇವರ ಜೀವನ ಕಥೆ ಈ ರೀತಿ ಮುಗಿದುಹೋಯಿತು.

ಮೈಸೂರು ವೆಸ್ಲಿ ಪ್ರೆಸ್ಸಿನ ಮುಖ್ಯರಾದ ಶ್ರೀ ಥಾಮಸ್‌ಗೋಲ್ಡ್ ಅವರು ಶ್ರೀಮತಿ ಏಟ್ಸ್ ನಿಧನರಾದ ಸಂಗತಿಯನ್ನು ತಂದೆಯಿಂದ ತಿಳಿದು ವಿಷಾದ ಸೂಚಿಸಿ ಪತ್ರ ಬರೆದರು—

I was sorry to see by your letter that Mrs. Yates had passed away, but it was good for you and also me to have had the previlege of

knowing both Mr. and Mrs. Yates. I feel that my life would be the poorer if it had been without the influence of their lives.

ರೆವರೆಂಡ್ ಸಾಡೆಯುವರು ಬರೆದ ಒಂದು ಪತ್ರದಲ್ಲಿಯೂ ಏಟ್ಸ್ ದಂಪತಿಗಳ ಪ್ರಸ್ತಾಪ ಬರುತ್ತದೆ—

I had known Mr. and Mrs. Yates for many years and the more I knew of them the more my love and admiration for them increased. They were really good and carried out the teaching of the Lord Christ in their daily lives so that they influenced for good all who came near them. It is good to know how greatly you appreciate their loving thoughts for you. I know how greatly interested in you they were.

## ದಿವಾನರ ಅಸಿಸ್ಟೆಂಟ್ ಪ್ರೈವೇಟ್ ಸೆಕ್ರೆಟರಿಯಾಗಿ ನೇಮಕ.

ಇಂಗ್ಲೆಂಡಿನಿಂದ ತಂದೆ ಹಿಂದಿರುಗಿದಮೇಲೆ ಅವರನ್ನೂ ಅವರ ಸಹಪಾಠಿಗಳಾದ ಶ್ರೀ. ಶ್ರೀನಿವಾಸಯ್ಯಂಗಾರ್ಯರನ್ನೂ ಮುದ್ರಣಶಾಲೆಯಲ್ಲಿ Sub-Assistant Superintendentರನ್ನಾಗಿ ನೇಮಕಮಾಡಿದರೆಂದು ಹಿಂದೆಯೇ ತಿಳಿಸಿದೇನೆ. ೧೯೧೭ ರಲ್ಲಿ ಸೂಪರಿಂಟೆಂಡೆಂಟರಾದ ಏಟ್ಸ್ ರವರು ನಿವೃತ್ತಿಹೊಂದಿದರು. ಅವರ ಸ್ಥಾನಕ್ಕೆ ಶ್ರೀ. ಡಿ. ಬಿ. ರಾಮ ಚಂದ್ರಮೊದಲಿಯಾರರು ನೇಮಕವಾದರು. ತಂದೆಯೂ, ಶ್ರೀನಿವಾಸಯ್ಯಂ ಗಾರ್ಯರೂ ಅಸಿಸ್ಟೆಂಟ್ ಸೂಪರಿಂಟೆಂಡೆಂಟರಾಗಿ ಮುಂದುವರಿದರು.

ಇದ್ದಕಿದ್ದಂತೆ ೧೯೨೧ರ ಜನವರಿಯಲ್ಲಿ ತಂದೆಯನ್ನು ದಿವಾನರ ಅಸಿಸ್ಟೆಂಟ್ ಪ್ರೈವೇಟ್ ಸೆಕ್ರೆಟರಿಯಾಗಿ ನೇಮಕಮಾಡಿದ ನಿರೂಪ ಸರಕಾರದಿಂದ ಹೊರಟಿತು. ಆಗ ದಿವಾನರಾಗಿದ್ದವರು ರಾಜಕುಮಾರ್ ಸರ್ ಆಲ್ಬಿಯನ್ ಬಾನರ್ಜಿಯವರು. ಶ್ರೀ. ನ್ಯಾಯಮತಿ ಮಾಧವರಾಯರನ್ನು ಪ್ರೈವೇಟ್ ಸೆಕ್ರೆಟರಿಯಾಗಿಯೂ ತಂದೆಯನ್ನು ಅಸಿಸ್ಟೆಂಟ್ ಪ್ರೈವೇಟ್ ಸೆಕ್ರೆಟರಿಯಾಗಿಯೂ ನೇಮಕ ಮಾಡಲಾಗಿತ್ತು. ಮುದ್ರಣಶಾಲೆಯಿಂದ ಪ್ರೈವೇಟ್ ಸೆಕ್ರೆಟರಿಯ ಸ್ಥಾನಕ್ಕೆ ಬದಲಾವಣೆಮಾಡುವ ಅಗತ್ಯವೇನಿತ್ತೋ ಗೊತ್ತಿಲ್ಲ. ಈ ಬದಲಾವಣೆಗಾಗಿ ತಂದೆ ತಾವಾಗಿಯೇ ಪ್ರಯತ್ನಪಟ್ಟಿ ರೆನ್ನಲು ನನಗೆ ಯಾವ ಸಾಕ್ಷ್ಯವೂ, ಕಂಡು ಬಂದಿಲ್ಲ. ಕೋಮುವಾರು ಭಾವನೆಯೇ ಮೇಲುಗೈಯಾಗಿ ಈ ನೇಮಕವಾಯಿತೋ ಅದನ್ನೂ ನಾನು ಹೇಳಲಾರೆ. ಹೊಸ ಪದವಿಗೆ ನೇಮಕವಾದ ತಂದೆಯನ್ನು ಅಭಿನಂದಿಸಿ ಸಿ. ಆರ್. ರೆಡ್ಡಿಯವರು ಬರೆದ ಕಾಗದ ಒಂದಿದೆ. ಪ್ರಾಯಶಃ ಮೇಲಿನ ನೇಮಕಕ್ಕೆ ಅವರು ಕಾರಣರೋ ಏನೊ. ಈ ಬದಲಾವಣೆ ತಂದೆಯ ಮನಸಿಗೆ ಹಿತವಾಗಿ ತೋರಿತೊ ಇಲ್ಲವೊ ಅದನ್ನು ನಾನು ಹೇಳಲಾರೆ. ಹಿತವಾಗಿರಲಿಲ್ಲವೆಂದೇ ನನ್ನ ಊಹೆ. ಅಂತೂ ಈ ನೇಮಕದಿಂದ ಪ್ರಚಂಡ ವಾದ ಗಲಾಟೆಯಾಯಿತು. ಆಗ ಹುಟ್ಟಿದ ಟೀಕೆಗಳನ್ನೆಲ್ಲ ಇಲ್ಲಿ ಕೊಡು ವುದು ಸೂಕ್ತವಲ್ಲ. ಆದರೆ ಆಗ ಪ್ರಚಾರದಲ್ಲಿದ್ದ "ಕರ್ಣಾಟಕ" ಎಂಬ ಪತ್ರಿಕೆ ಈ ನೇಮಕದ ವಿಷಯವಾಗಿ ಬರೆದುದನ್ನು ಇಲ್ಲಿ ಕಾಣಿಸಬೇಕು

ಎಂದೆನಿಸುತ್ತದೆ. "ಕರ್ಣಾಟಕ" ಪತ್ರಿಕೆಯ ಸಂಪಾದಕರು ಯಾರಾಗಿದ್ದರೋ, ಆ ಪತ್ರಿಕೆ ಹಾಗೆಯೇ ನಡೆದುಕೊಂಡು ಬರದೆ ಮಧ್ಯದಲ್ಲಿ ಏಕೆ ನಿಂತುಹೋಯಿತೋ ನಾನು ತಿಳಿಯೆ. ಅದರಲ್ಲಿನ ಸಂಪಾದಕೀಯ ಲೇಖನಗಳು ವಿಚಾರಪೂರಿತವಾಗಿದ್ದವು. ಶೈಲಿಯಲ್ಲಿ ಬಿಗಿ ಇತ್ತು. ಉತ್ತಮ ಪತ್ರಿಕೆಗೆ ಇರಬೇಕಾದ ಲಕ್ಷಣವೆಲ್ಲ ಇತ್ತು. ಇಂಥ ಪ್ರೌಢವರ್ಗದ ಪತ್ರಿಕೆ ಈಗ ನಮ್ಮಲ್ಲಿ ಇಲ್ಲದೆ ಇರುವುದು ನಮ್ಮ ದುರದೃಷ್ಟವೇ ಸರಿ.

'ಕರ್ಣಾಟಕ' ತಂದೆಯ ನೇಮಕದ ವಿಷಯವಾಗಿ ಹೀಗೆಂದು ಬರೆಯಿತು :—

But for the fact that some principles seem to to be involved in it, we should not have liked to make any comments in the appointment of Mr. B. Puttaiya, Assistant Superintendent, Government Press, as Assistant Private Secretary to the Dewan ............the translation of a man from the Printing Press to the Private Secretary's office is a direct and violent negation of departmentalisation in public service. Mr. Puttaiya has specialised himself at considerable expense to the State and it would be a manifest waste of assets to make him unlearn his technical knowledge and skill or leave them unutilized. Personally we have nothing but approbation to Mr. Puttaiya's character and worth, and we certainly would be glad to see his prospect improved but in his own line. As compared with him, men far less worthy have been receiving a far more handsome treatment at the hands of Gov-

ernment, and we would have thought it only just if his emoluments had been added at the Press itself or if a Branch Press is started and he placed at its head or again we know Mr. Puttaiya is earnest about writing in kannada and adding to the stock of useful books in the vernacular. The Education Department or the Publication Bureau of the University for that matter should have been able to make use of such a man who is acquainted with both the literary and technical sides of book production............In any one of these ways Mr. Puttaiya's services could have been utilized with profit to himself and without injustice to anybody ............To speak frankly there is plenty of excuse to think that it is not in the interest of public service but solely in the interest of caste or communal interests that Mr. Puttaiya has been pitchforked in the new position; and we cannot think that the change would be agreeable to him apart from the financial aspect—or serviceable to communalists or partisans, for he is to our knowledge free from venom and vulgarisms of all sorts.

ತಂದೆ ಇಂಗ್ಲೆಂಡಿನಿಂದ ಬಂದಮೇಲೆ ಬೆಂಗಳೂರು ನಾಗರಿಕ ಜೀವನದಲ್ಲಿ ಬೆರೆತು ಎರಡು ಮೂರು ವರ್ಷಗಳು ಮಾತ್ರವೇ ಆಗಿದ್ದರೂ ಆಗ್ಗೆ ಆಗಲೆ ಅವರು ಎಲ್ಲರ ಕಣ್ಣಿಗೆ ಬಿದ್ದಿದ್ದರು, ಇತರರ ಗಣನೆಯಲ್ಲಿ ಒಳ್ಳೆಯ ಸ್ಥಾನಪಡೆದಿದ್ದರು, ಮನ್ನಣೆಯನ್ನು ಸಂಪಾದಿಸಿಕೊಂಡಿದ್ದರು, ಎನ್ನು

ವುದಕ್ಕೆ 'ಕರ್ನಾಟಕ' ಪತ್ರಿಕೆಯಲ್ಲಿನ ಟೀಕೆ ಸಾಕ್ಷಿಯಾಗಿದೆ ಈ ಬಗೆಯ ಟೀಕೆ ಪ್ರಚಾರಗಳ ದೆಸೆಯಿಂದ ಹೊಸ ಪದವಿಯಲ್ಲಿ ತಂದೆ ಹೆಚ್ಚು ಕಾಲ ಉಳಿಯುವುದು ಸಾಧ್ಯವಾಗಲಿಲ್ಲ. ಆರು ತಿಂಗಳಾದನಂತರ ಮತ್ತೆ ಅಸಿಸ್ಟೆಂಟ್ ಸೂಪರಿಂಟೆಂಡೆಂಟರಾಗಿ ಮುದ್ರಣಶಾಲೆಗೆ ವಾಪಸು ಬಂದರು. ಪ್ರಾಯಶಃ ಹೊಸ ವಾತಾವರಣ ಅವರಿಗೂ ಸರಿಹೋಗಿರಲಿಲ್ಲವೋ ಏನೊ. ಈ ವಿಷಯವಾಗಿ ಹೆಚ್ಚಿನ ವಿವರ ಯಾವುದೂ ನನಗೆ ದೊರೆತಿಲ್ಲ.

## N. C.

ಆಗೊಮ್ಮೆ ಈಗೊಮ್ಮೆ N. C. ಎಂದು ದೊಡ್ಡದಾಗಿ ಕೆಂಪಕ್ಷರದಲ್ಲಿ ಗುರುತಿಸಿದ ಕಡತವೊಂದನ್ನು ನಾನು ಚಿಕ್ಕಂದಿನಿಂದ ತಂದೆಯ ಮೇಜಿನ ಮೇಲೆ ನೋಡುತಿದ್ದೆ. ಈ ಎರಡು ಅಕ್ಷರಗಳು ಒಂದು ಸಂಘದ ಸಂಕೇತ ಎಂದು ಮಾತ್ರ ತಿಳಿದಿತ್ತು. ಆದರೆ ಈ ಸಂಘದ ಉದ್ದೇಶವಾಗಲಿ, N. C. ಎಂಬಕ್ಷರಗಳು ಏನನ್ನು ಸೂಚಿಸುವುದೆನ್ನುವುದಾಗಲಿ? ನನಗೆ ತಿಳಿದಿರಲಿಲ್ಲ ತಂದೆಯ ಜೀವನ ಚರಿತ್ರೆ ಚಿತ್ರಿಸಲು ಕುಳಿತಿರುವ ನನಗೆ ಈ N. C. ಕಟ್ಟಿನ ಹಾಳೆಗಳನ್ನು ತಿರುವಿ ನೋಡುವ ಅವಕಾಶ ಒದಗಿಬಂದಿದೆ N C. ಮೊದಲಾದ ಬಗೆ ಅದು ಸಾಧಿಸಿದ ಕೆಲಸ ಇಲ್ಲಿ ಹೇಳುತ್ತೇನೆ.

N. C. ಎಂಬ ಎರಡಕ್ಷರಗಳು Nonentities Club (ಅನಾಮಿಕರ ಸಂಘ)ದ ಮೊದಲನೆಯ ಎರಡಕ್ಷರಗಳು ಈ ಸಂಘ ಮೊದಲಾದುದು ೧೯೧೯ ರಲ್ಲಿ. ಸಂಘದ ಸದಸ್ಯರೆಲ್ಲ ಮೈಸೂರಿನವರು. ಎಲ್ಲರೂ ಮೈಸೂರು ಸರಕಾರದ ವೇತನ ಪಡೆದು ವಿದೇಶಗಳಲ್ಲಿ ವ್ಯಾಸಂಗಮಾಡಿ ಬಂದವರು. ಮೈಸೂರಿಗೆ ಹಿಂದಿರುಗಿದಮೇಲೆ ಇವರೆಲ್ಲರಿಗೂ ಸರಕಾರದಲ್ಲಿ ನೌಕರಿ ದೊರೆಯಿತು. ಆದರೆ ಇವರುಗಳು ಬಯಸಿದಷ್ಟು ಪುರಸ್ಕಾರ ಮನ್ನಣೆ ಮಾತ್ರ ದೊರೆಯಲಿಲ್ಲ. ತಮಗೆ ಮೊದಲು ಸಹಾಯಮಾಡಿದ ಸರಕಾರದ ಆಶ್ರಯ ಬಿಟ್ಟು ಅವರು ಬೇರೆ ಹೋಗುವ ಹಾಗಿರಲಿಲ್ಲ. ತಮಗೆ ವೇತನ ಕೊಟ್ಟ ಸರಕಾರವನ್ನು ಹತ್ತು ವರ್ಷಕಾಲ ಸೇವಿಸಿದಲ್ಲದೆ ಅವರು ಬಿಟ್ಟುಹೋಗುವಂತಿರಲಿಲ್ಲ. ಈ ಷರತ್ತು ಇವರನ್ನು ಕಟ್ಟಿಹಾಕಿತ್ತು. ಈ ಬಗೆಯ ಕಟ್ಟು ಕೆಲವರಿಗೆ ಸರಿಹೋಗಲಿಲ್ಲ. ಯಾವೊಂದ ಕಟ್ಟುಪಾಡೂ ಇಲ್ಲದೆ ವಿದೇಶಗಳಿಗೆ ಹೋಗಿ ವ್ಯಾಸಂಗಮಾಡಿಕೊಂಡು ಬರಲು ಅವಕಾಶವಿರಬೇಕು. ಅದರಂತೆ ಏನಾದರೂ ಏರ್ಪಾಡುಮಾಡಬೇಕು ಎನ್ನುವುದೇ ಎಲ್ಲರ ಮನಸಿನಲ್ಲಿಯೂ ಮೂಡಿತ್ತು. ಇಂಥ ಬಗೆಯ ಏರ್ಪಾಡುಮಾಡಲೆಂದೇ ಅವರೆಲ್ಲರೂ ಸೇರಿ ಸಂಘ ಒಂದನ್ನು ಕಟ್ಟಬೇಕೆಂದು ತೀರ್ಮಾನಿಸಿಕೊಂಡರು. ಸಂಘದ ಪ್ರತಿ ಸದಸ್ಯರೂ ತಿಂಗಳಿಗೆ ಹತ್ತು ರೂಪಾಯಿನಂತೆ ಕೊಡಬೇಕೆಂದು

ಗೊತ್ತುಮಾಡಿಕೊಂಡರು. ಹೀಗೆ ಒಟ್ಟುಗೂಡಿದ ಹಣದ ಜೊತೆಗೆ ಸ್ವಲ್ಪ ಹಣವನ್ನು ಬ್ಯಾಂಕಿನಿಂದ ಸಾಲವಾಗಿ ಪಡೆದುಕೊಂಡು ವಿದೇಶ ವ್ಯಾಸಂಗಕ್ಕೆ ಅರ್ಹನಾದ ವಿದ್ಯಾರ್ಥಿಯೊಬ್ಬನಿಗೆ ಕೊಡಬೇಕೆಂದೂ, ಹೀಗೆ ಸಂಘದಿಂದ ಸಹಾಯಪಡೆದವರು ತಾವೂ ಸಂಘದ ಸದಸ್ಯರಾಗಿ ತಮಗೆ ಅನುಕೂಲ ಸ್ಥಿತಿ ಬಂದಾಗ ಪಡೆದ ಸಾಲವನ್ನು ತೀರಿಸುವುದಲ್ಲದೆ, ತಾವು ಸಂಘದ ಸದಸ್ಯರಾಗಿದ್ದುಕೊಂಡು ತಿಂಗಳಿಗೆ ಹತ್ತು ರೂಪಾಯಿನಂತೆ ಕಟ್ಟುತ್ತ ಹೋಗಬೇಕೆಂಧೂ ತೀರ್ಮಾನವಾಯಿತು. ಹೊರಗಡೆ ಗಡಿಬಿಡಿಯಾಗದಂತೆ ತಮ್ಮ ತಮ್ಮಲ್ಲಿಯೇ ಕೆಲಸಮಾಡಲು ತೀರ್ಮಾನಿಸಿದ ಇವರು ಅನಾಮಿಕರಾಗಿರ ಬಯಸಿದರು. ಅನಾಮಿಕರ ಸಂಘ (Nonentities) ಎಂದೇ ಸಂಘಕ್ಕೆ ಹೆಸರಿಟ್ಟರು. ಸಂಘ ಮೊದಲಾದಂದಿನಿಂದ ಕೊನೆಯುವರೆಗೂ ಅದರ ಕಾರ್ಯದರ್ಶಿಯಾಗಿ ನನ್ನ ತಂದೆ ಕೆಲಸಮಾಡಿದರು.

N. C. ಎಂಬ ಗುರುತಿನ ಕಟ್ಟಿನಲ್ಲಿದ್ದ ಪತ್ರಗಳನ್ನು ತಿರುವಿ ಹಾಕಿದ ಮೇಲೆ, ಇಷ್ಟುವರ್ಷವೂ ಅಜ್ಞಾತವಾಗಿದ್ದುಕೊಂಡು ಸಂಘ ನಡೆಸಿದ ಕೆಲಸದ ವಿವರ ಸ್ವಲ್ಪ ಗೊತ್ತಾಯಿತು. ಅನಾಮಿಕರಾಗಿರಬಯಸಿದ ಸಂಘದ ಸದಸ್ಯರ ಹೆಸರುಗಳನ್ನು ಬಯಲಿಗೆ ತರಬೇಕೆಂದಿದ್ದ ನನ್ನ ಆಸೆಯನ್ನು ಹಿಡಿತದಲ್ಲಿಟ್ಟುಕೊಂಡಿದೇನೆ. ಸದಸ್ಯರುಗಳಲ್ಲಿ ಮೂರು ನಾಲ್ಕು ಜನ ಹೊರತಾಗಿ ಮಿಕ್ಕವರೆಲ್ಲ ಜೀವಂತರಾಗಿದ್ದಾರೆ. ಗುಪ್ತವಾಗಿರಬಯಸಿದ ಈ ಸದಸ್ಯರುಗಳ ಹೆಸರನ್ನು ನಾನು ಬಯಲುಮಾಡಿದರೆ ಅವರು ನೊಂದುಕೊಂಡಾರೊ ಏನೊ. ಆದ್ದರಿಂದ ಸಂಘದ ಸದಸ್ಯರುಗಳ ಹೆಸರನ್ನು ಮಾತ್ರ ಮರೆಮಾಡಿ, ಸಂಘ ನಡೆಸಿದ ಕೆಲಸವನ್ನು ಇಲ್ಲಿ ವಿವರಿಸುತ್ತೇನೆ.

ನಮ್ಮ ತಂದೆ ಕೈಕೊಂಡ ಯಾವ ಕೆಲಸವನ್ನೆ ಆಗಲಿ ಒಪ್ಪವಾಗಿ ಅಚ್ಚುಕಟ್ಟಾಗಿ ಮಾಡುತಿದ್ದರು. ಸಂಘ ನಡೆಸಿದ ಸಂಪೂರ್ಣ ಕಾರ್ಯಕಲಾಪಗಳ ವಿವರ N. C. ಕಟ್ಟಿನಲ್ಲಿದೆ. ಸಂಘದ ಎಲ್ಲ ಲೆಕ್ಕಪತ್ರಗಳು, ಪ್ರತಿ ಸದಸ್ಯರು ಕೊಟ್ಟ ಹಣದ ತಪಶೀಲು, ಸದಸ್ಯರು ಬರೆದ ಪತ್ರಗಳು, ಖರ್ಚಾದ ಪ್ರತಿ ಕಾಸಿಗೂ ಲೆಕ್ಕ ಇಲ್ಲಿದೆ. ಇದೆಲ್ಲದರ ಸಹಾಯದಿಂದಲೇ ಸಂಘದ ಕೆಲಸವನ್ನು ಸ್ಥೂಲವಾಗಿ ಇಲ್ಲಿ ವಿವರಿಸುತ್ತೇನೆ.

ಸಂಘ ೧೯೧೯ ರಲ್ಲಿ ಮೊದಲಾಯಿತು. ಆಗ ಇದ್ದ ಸದಸ್ಯರು ಹತ್ತು ಮಂದಿ ಮಾತ್ರ. ಆ ವರ್ಷದಿಂದಲೇ ಹಣ ಕೂಡುತ್ತ ಹೋಯಿತು. ಕೂಡಿಟ್ಟ ಹಣದ ಜೊತೆಗೆ ಮೈಸೂರು ಬ್ಯಾಂಕಿನಿಂದ ಮೂರುಸಾವಿರದ ನಾನ್ನೂರು ರೂಪಾಯಿ ಸಾಲ ಪಡೆದು, ತಮ್ಮ ಸಹಾಯಕ್ಕೆ ಅರ್ಹರೆಂದು ಕಂಡು ಬಂದ ಸ್ನೇಹಿತರೊಬ್ಬರಿಗೆ ಆ ಹಣಕೊಟ್ಟು ಅವರನ್ನು ಓದಲು ಇಂಗ್ಲೆಂಡಿಗೆ ಕಳುಹಿಸಿಕೊಟ್ಟರು. ಈ ರೀತಿ ಸಹಾಯ ಪಡೆದುಕೊಂಡವರು ವಿದೇಶದಲ್ಲಿ ಓದು ಮುಂದುವರಿಸಿ ಹೆಚ್ಚಿನ ಪ್ರಶಸ್ತಿ ಪಡೆದುಕೊಂಡು ಹಿಂತಿರುಗಿದರು. ಒಳ್ಳೆಯ ಪದವಿ ಸಿಕ್ಕಿತು. ಅವರಿಗೂ ಅನುಕೂಲ ವಾಯಿತು. ಸಂಘ ಮೊದಲಿಟ್ಟುಕೊಂಡ ಉದ್ದೇಶದ ಪ್ರಕಾರ ಸಂಘದಿಂದ ಸಾಲ ಪಡೆದವರು ಅನುಕೂಲಸ್ಥಿತಿ ಬಂದೊಡನೆಯೇ ತಾವು ಪಡೆದ ಸಾಲ ವನ್ನು ತೀರಿಸಬೇಕಾಗಿತ್ತು. ಅಲ್ಲದೆ ತಾವೂ ಸಂಘದ ಸದಸ್ಯರಾಗಿದ್ದು ಕೊಂಡು ತಮ್ಮ ವಂತಿಗೆಯ ಹಣ ಸಲ್ಲಿಸಬೇಕಾಗಿತ್ತು. ಸಂಘದ ಮೊದಲ ದಿವಸಗಳಲ್ಲಿಯೇ ಈ ನಿಯಮ ಪಾಲಿತವಾಗದೆ ಹೋಯಿತು. ಸಾಲವಾಗಿ ಹಣ ಪಡೆದವರು ತಮ್ಮ ಸ್ಥಿತಿ ಉತ್ತಮಗೊಂಡರೂ ಕೂಡ ಬಹುಕಾಲದ ವರೆಗೆ ಹಣವನ್ನು ಹಿಂದಿರುಗಿಸಲಿಲ್ಲ. ಸದಸ್ಯರಾಗಿ ತಮ್ಮ ವಂತಿಗೆಯ ಹಣವನ್ನು ಸಲ್ಲಿಸಲೂ ಇಲ್ಲ. ಸಂಘದ ಉದ್ದೇಶ ಮೊದಲಲ್ಲಿಯೇ ಪಾಲಿತ ವಾಗದೆ ಹೋಯಿತು. ಸದಸ್ಯರು ಇದರಿಂದ ಎದೆಗುಂದಲಿಲ್ಲ. ತಮ್ಮ ಪಾಲಿನ ಹಣವನ್ನು ಸಲ್ಲಿಸುತ್ತಾ ಹೋದರು. ಸಂಘದ ನಿಧಿಯೂ ವರ್ಷ ವರ್ಷ ಬೆಳೆಯುತ್ತ ಹೋಯಿತು. ವಿದೇಶದಲ್ಲಿ ಓದುತಿದ್ದ ವಿದ್ಯಾರ್ಥಿಗಳು ಕೆಲವರು ಕಷ್ಟಸ್ಥಿತಿಯಲ್ಲಿದ್ದರೆಂದು ಕಂಡು ಬಂದಾಗ ಸಂಘದವರು ಅವರಿಗೆ ಸಹಾಯಮಾಡಿದರು. ಆದರೆ ತಾವು ಉದಾರ ಮನಸಿನಿಂದ ಕೊಟ್ಟ ಹಣ ವಾಪಸು ಬರುವುದೆಂಬ, ಸಂಘದ ಸದಸ್ಯರು ಕ್ರಮೇಣ ಹೆಚ್ಚುವರೆಂಬ ಆಶಯ ಮಾತ್ರ ಫಲಿಸದೆ ಹೋಯಿತು. ಸಾಲವಾಗಿ ಕೊಟ್ಟ ಹಣ ಹಿಂದಕ್ಕೆ ಬರಲಿಲ್ಲ. ಯಾವಾಗ ಆ ಹಣ ಹಿಂದಕ್ಕೆ ಬರಲಿಲ್ಲವೋ, ಇರುವ ಸ್ವಲ್ಪ ಹಣ ಇತರರಿಗೆ ಸಹಾಯಮಾಡಲು ಸಾಕಾಗಲಿಲ್ಲ. ಸದಸ್ಯರು ಇಟ್ಟುಕೊಂಡ ಮುಖ್ಯ ಉದ್ದೇಶ ಸಾಧಿಸಲಿಲ್ಲ.

ಸಂಘದ ಸದಸ್ಯರೆಲ್ಲರೂ ವರ್ಷಕ್ಕೊಮ್ಮೆ ಯಾವುದಾದರೂ ಒಂದೂರಿನಲ್ಲಿ ಸೇರುತಿದ್ದರು. ಅಲ್ಲಿ ಒಟ್ಟು ಕಲೆತು ಸಮಾಲೋಚನೆ ನಡೆಸುತಿದ್ದರು. ಸಂಘದ ಮುಖ್ಯ ಉದ್ದೇಶ ಸಾಧಿಸದೆ ಹೋದರೂ ಹಲವು ಒಳ್ಳೆಯ ಪ್ರಯತ್ನಗಳಿಗೆ ಸಂಘದ ಸಹಾಯ ದೊರೆಯಿತು. ಇಂಫ್ಲುಯೆಂಸಾ ಖಾಯಿಲೆಯಲ್ಲಿ ನಷ್ಟ ಹೊಂದಿದವರಿಗೆ ಪರಿಹಾರ ಒದಗಿಸಲು ಸಂಘ ಹಣ ಕೊಟ್ಟದ್ದನ್ನು ಕೊಂಡಾಡುತ್ತ 'ಕರ್ಣಾಟಕ' ಪತ್ರಿಕೆ ಹೀಗೆ ಬರೆಯಿತು–

The "nonentity club"—a very wholesome set off we should think to the century has favoured us with a cheque for Rs. 50. towards the relieving of the distress caused by the influenza scourge. A similar donation we understand will be sent to the Gokhale League, to the Amateur Dramatic Association, to the National High School and to the City Municipality, for similar work. The Nonentities are as magnanimous in spirit as they are modest in nomenclature, and their example ought to put the notabilities of our town to shame.

ಸಂಘದ ಮುಖ್ಯ ಉದ್ದೇಶಕ್ಕೆ ನೆರವಾಗದೆ ಹಣ ಇಂಥ ಹತ್ತು ರೀತಿಯಲ್ಲಿ ವ್ಯಯವಾಗುತಿದ್ದುದು ಕೆಲವು ಸದಸ್ಯರುಗಳಿಗೆ ಸರಿಬೀಳಲಿಲ್ಲ. ಸದಸ್ಯರುಗಳು ಕೆಲವರಲ್ಲಿ ಮೊದಲಿಗಿದ್ದ ತಾರುಣ್ಯದ ಉತ್ಸಾಹ, ಹಿಂದಾದುದನ್ನು ಸಾಧಿಸಬೇಕೆನ್ನುವ ಹೆಬ್ಬಯಕೆ, ಕ್ರಮೇಣ ಕಮ್ಮಿಯಾಗುತ ಬಂತು. ವರ್ಷ ವರ್ಷ ಕೊಡುತಿದ್ದ ಚಂದಾ ಹಣ ಬರಬರುತ್ತ ಕಮ್ಮಿಯಾಯಿತು. ಸಂಘ ಕೊನೆಯಾದೀತೋ ಎನ್ನುವ ಸಂದೇಹ ಬಂತು. ಸಂಘದ ಕಾರ್ಯದರ್ಶಿಯಾಗಿದ್ದ ನನ್ನ ತಂದೆ ಇದ್ದ ಸಂಗತಿಯನ್ನು ಸದಸ್ಯರಿಗೆಲ್ಲ ಕಾಗದದ ಮೂಲಕ ತಿಳಿಸಿ ಮುಂದೇನು ಎನ್ನುವ ವಿಷಯ ತೀರ್ಮಾನಿಸಲು ಸಾವನದುರ್ಗದಲ್ಲಿ ಸದಸ್ಯರ ಸಭೆ ಸೇರುವುದೆಂದು ತಿಳಿಸಿದರು.

N. C.

160 Fourth Street,
Chamarajapet,
Bangalore City.
1st Feb. 1932.

Dear............

I enclose the statement of affairs of the N. C. for the year 1931.

I feel bound to intimate to you that almost all members have suspended payment from the new year. Others may follow suit, with the result that the club is threatened with extinction.

With a view to decide as to the future of the club and the funds at its disposal, a meeting of all the members will be held on Sunday the 21st instant at Savandrug between Closepet and Magadi. A full day outing has been arranged from morning till evening and all members are earnestly requested to make it convenient to attend the meeting and settle the matter.

A statement showing in detail the receipts and expenditure of the Club during the past thirteen years of its existence will be sent to you in a few days.

Yours Sincerely,
B. Puttaiya.

ಯುವಕರು ಸಂಘವನ್ನು ಮೊದಲುಮಾಡಿದರು. ಆಗ ಅವರಲ್ಲಿ ಉತ್ಸಾಹವಿತ್ತು. ಸಾವನದುರ್ಗದಲ್ಲಿ ಮೇಲ್ಕಂಡ ಸಭೆ ಸೇರುವ ಹೊತ್ತಿಗೆ ಮುಕ್ಕಾಲುವಾಸಿ ಸದಸ್ಯರೆಲ್ಲರ ಉತ್ಸಾಹ ಕುಗ್ಗಿಹೋಗಿತ್ತು. ಸಂಘವನ್ನು ಮುಂದುವರಿಸಿ ಇನ್ನೇನಾಗಬೇಕು, ಮುಕ್ತಾಯಮಾಡಿ ಇರುವ ಹಣವನ್ನು ಹಂಚಿಕೊಳ್ಳೋಣ ಎನ್ನುವುದೇ ಹಲವರ ಬಯಕೆಯಾಗಿತ್ತು. ಹಿರಿಯ ಹಂಬಲವನ್ನಿಟ್ಟುಕೊಂಡು ಸ್ಥಾಪಿತವಾದ ಸಂಘ ಏನೊಂದನ್ನೂ ಸಾಧಿಸದೆ ಕೊನೆಗಾಣುವ ಗತಿ ಬಂತು. ಆದರೆ. ನನ್ನ ತಂದೆಗೂ ಇತರ ಕೆಲವು ಸದಸ್ಯರುಗಳಿಗೂ ಸಂಘವನ್ನು ಈರೀತಿ ಕೊನೆಗಾಣಿಸುವುದು ಸರಿಯಾಗಿ ತೋರಲಿಲ್ಲ.

I believe it was decided at the Hunsur meeting that a rate of subscripion be fixed that all members would find it convenient to pay without feeling the pinch and would pay up regularly to build up the fund............The understanding at all stages has been that we are building up this fund to do a good turn to another fellow or to the public at large and that we were to have only the satisfaction of having been of some help. I am sure this is the predominating impulse which brought the fund into existence. Being so nobly born it can only have a noble life. ಹೀಗೆಂದು ಒಬ್ಬ ಸದಸ್ಯರು ದೂರದ ಊರಿಂದ ಕಾಗದ ಬರೆದು ತಮ್ಮ ಅಭಿಪ್ರಾಯಕ್ಕೆ ರೂಪ ಕೊಟ್ಟರು. ಸಂಘ ಕೊನೆಯಾಗುವುದು ಎನ್ನುವ ಸುದ್ದಿ ಕೇಳಿ ಹಿರಿಯಾಸೆ ಇಟ್ಟುಕೊಂಡಿದ್ದ ಒಬ್ಬ ಸದಸ್ಯರಂತೂ,

My Dear Puttaiya,

Ref. N. C.

Dissolve and disburse

I am heart broken

ಎರಡೇ ಪಂಕ್ತಿಯಲ್ಲಿ ತಮ್ಮ ಮನಸಿನ ವೇದನೆಯನ್ನು ವ್ಯಕ್ತಪಡಿಸಿದರು

ಸಾವನದುರ್ಗದಲ್ಲಿ ಸದಸ್ಯರ ಸಭೆ ಸೇರಿತು ಎಲ್ಲರಲ್ಲೂ ವಿಚಾರ ವಿನಿಮಯವಾಯಿತು. ಸಂಘ ಇರಬೇಕು ಅದನ್ನು ಒಡೆಯಬಾರದು ಎನ್ನುವರ ಪಕ್ಷವೇ ಗೆದ್ದಿತು. ಗ್ರಾಮ ಪುನರುದ್ಧಾರಕ್ಕಾಗಿ ಸಂಘದ ಹಣವನ್ನು ವೆಚ್ಚಮಾಡಬೇಕು ಎಂದು ಒಬ್ಬ ಸದಸ್ಯರು ಕೊಟ್ಟ ಸಲಹೆಗೆ ಪುರಸ್ಕಾರ ದೊರೆಯಿತು. ಇನ್ನೊಬ್ಬ ಸದಸ್ಯರು ಸಂಘ ಕೂಡಿಸುವ ಹಣ ಇಪ್ಪತ್ತು ಸಾವಿರ ಆಗುವವರೆಗೂ ಕಾದು ಅದರಲ್ಲಿ ಅರ್ಧ ಹಣಕ್ಕೆ ಒಂದು ಗ್ರಾಮವನ್ನು ಕೊಂಡುಕೊಂಡು, ಉಳಿದರ್ಧ ಹತ್ತುಸಾವಿರ ರೂಪಾಯಿ ಖರ್ಚು ಮಾಡಿ ಮನೆ ಮಠ ಬಾವಿ ಬಚ್ಚಲು ಇವುಗಳನ್ನು ಕಟ್ಟಿ, ವರ್ಷದ ಸ್ವಲ್ಪ ಭಾಗವನ್ನಾದರೂ ಸದಸ್ಯರು ಹಳ್ಳಿಯಲ್ಲಿ ಕಳೆಯಬೇಕು ಎಂದು ಸಲಹೆ ಕೊಟ್ಟರು. ಆದರೆ ಇವೆಲ್ಲ ಸಲಹೆಗಳಾಗಿಯೇ ಉಳಿಯಿತು. ಯಾವುವೂ ಕಾರ್ಯರೂಪಕ್ಕೆ ಬರಲಿಲ್ಲ. ಒಬ್ಬರಿಗೆ ಸರಿಯಾಗಿ ಕಂಡುಬಂದುದು ಇನ್ನೊಬ್ಬರಿಗೆ ಸರಿತೋರಲಿಲ್ಲ. ಕನ್ನಡ ಸಾಹಿತ್ಯ ಪರಿಷತ್ತು ಶ್ರೀ ಡಿ. ವಿ. ಗುಂಡಪ್ಪನವರ ಉಪಾಧ್ಯಕ್ಷತೆಯ ಕಾಲದಲ್ಲಿ ಸಂಚಾರೋಪನ್ಯಾಸದ ಏರ್ಪಾಡು ಕೈಗೊಳ್ಳಲು ಪ್ರಯತ್ನಮಾಡಿತು. ಈ ಏರ್ಪಾಡಿಗೆ ಬೇಕಾದ ಮೋಟಾರು ಬಸ್ಸು, ಮಾಯಾದೀಪ ಈ ಸಲಕರಣೆಗಳಿಗಾಗಿ N. C. ಯವರು ಮೂರು ಸಾವಿರ ರೂಪಾಯಿ ಕೊಡಬಹುದೆಂದು ಸಲಹೆ ಬಂತು. ಅದೂ ತಿರಸ್ಕೃತವಾಯಿತು. ಸಂಘ ಒಟ್ಟುಗೂಡಿಸಿದ ನಿಧಿಯನ್ನು ವಿಶ್ವವಿದ್ಯಾನಿಲಯಕ್ಕೆ ದತ್ತಿಯಾಗಿ ಕೊಡೋಣ ಎನ್ನುವ ಸಲಹೆಗೂ ಪುರಸ್ಕಾರ ದೊರೆಯಲಿಲ್ಲ. Let not the old campus be broken up yet, if we can help it. May be we can get new recruits and fresh blood to do what we have not done, and

why not our children among the new recruits ಎಂದ ಒಬ್ಬ ಸದಸ್ಯರ ಬೇಡಿಕೆಯೂ ಫಲಕಾರಿಯಾಗಲಿಲ್ಲ. ಮುದುಕ ರಾಗುತ್ತ ಮನೆಯಕಡೆ ತಾಪತ್ರಯಗಳು ಹೆಚ್ಚುತ್ತಿದ್ದ ಕೆಲವು ಸದಸ್ಯರುಗಳಿಗೆ ತಮ್ಮ ಪಾಲಿನ ಸಾವಿರ ರೂಪಾಯಿಗಳನ್ನು ಒಟ್ಟಿಗೇ ಕೈಬಿಡುವುದಾಗಲಿಲ್ಲ. ಅವರ ಪಕ್ಷವೇ ಕೊನೆಗೆ ಗೆದ್ದಿತು. ೧೯೩೬ ರಲ್ಲಿ ಹದಿನಾರು ವರ್ಷಕಾಲ ಬಾಳಿ ಸಂಘ ಕೊನೆಗಂಡಿತು. ಆಯಾ ಸದಸ್ಯರ ಪಾಲಿನ ಹಣ ಅವರವರಿಗೆ ಹಂಚಿ ಹೋಯಿತು.

ಸಂಘ ತನ್ನ ಬಾಳುವೆಯಲ್ಲಿ ಕೂಡಿಸಿದ್ದ ಹಣ ೧೯,೫೪೨-೩-೮. ಮೊದಲ ವರ್ಷದಲ್ಲಿ ಕೆಲವರಿಗೆ ವ್ಯಾಸಂಗಕ್ಕೆ ಅನುಕೂಲಿಸಲು ಕೊಟ್ಟ ಹಣ, ಧರ್ಮಕಾರ್ಯಗಳಿಗೆ ವಿನಿಯೋಗಿಸಿದ ಒಟ್ಟು ಹಣ ೧೧,೯೪೪-೧-೭. ಉಳಿದ ಹಣವನ್ನೆ ಸದಸ್ಯರು ತಾವು ಕೊಟ್ಟಿದ್ದ ಚಂದಾ ಹಣಕ್ಕೆ ಅನು ಗುಣವಾಗಿ ಹಂಚಿಕೊಂಡರು.

N. C. ಯ ಹುಟ್ಟನ್ನು, ಅದರ ಬಾಳುವೆಯನ್ನು, ನನ್ನ ತಂದೆ ಹದಿನಾರು ವರ್ಷಕಾಲ, ತೆರೆಯುಮರೆಯಲ್ಲಿದ್ದುಕೊಂಡು ಸಂಘದ ಎಲ್ಲ ಕಾರ್ಯ ನಡೆಸಿಕೊಂಡು ಬಂದುದನ್ನು ಇಲ್ಲಿ ಬೇಕೆಂದೇ ವಿವರವಾಗಿ ಚಿತ್ರಿಸಿದೇನೆ. ನನ್ನ ತಂದೆ ಇಂಥ ಒಂದು ಪ್ರಯತ್ನದಲ್ಲಿ ಭಾಗಿಯಾಗಿದ್ದರು, ಅದರ ಜೀವ ವಾಗಿದ್ದರು ಎನ್ನುವುದೇ ನನಗೆ ಅತಿಯಾದ ಹೆಮ್ಮೆಗೆ ಕಾರಣ. ಪ್ರತಿ ಕಾಸಿಗೂ ತಂದೆ ಲೆಕ್ಕ ಇಟ್ಟಿದ್ದರು. ಸಂಘದ ಆಗುಹೋಗುಗಳ ವಿಷಯ ವಾಗಿ ಸದಸ್ಯರು ಬರೆದ ಎಲ್ಲ ಪತ್ರಗಳನ್ನು ಜತನವಾಗಿ ಕಾಪಾಡಿದ್ದರು. ಏನೂ ತಿಳಿಯದೆ ಇದ್ದ ನಾನು, ಸಂಘದ ಸದಸ್ಯರು ಹೊರೆತು ಉಳಿದವರು ಯಾರಿಗೂ ತಿಳಿಯದಂತೆ ಅಜ್ಞಾತವಾಗಿ ಕೆಲಸ ಮಾಡಿದ ಈ ಸಂಘದ ವಿಷಯವಾಗಿ ಇಷ್ಟೊಂದು ವಿವರ ಕೊಟ್ಟಿರುವುದೇ, ತಂದೆ ಸಂಘದ ವ್ಯವ ಹಾರಗಳನ್ನು ಅತ್ಯುತ್ತಮವಾದ ರೀತಿಯಲ್ಲಿ ಇಟ್ಟಿದ್ದರೆನ್ನುವುದಕ್ಕೆ ಸಾಕ್ಷಿ ಯಾಗಿದೆ.

ಸಂಘ ಹೆಚ್ಚಿನ ಸೇವೆಮಾಡಲು ಅವಕಾಶವಾಗದೆ ಹೋದುದು ನಮ್ಮ ದುರದೃಷ್ಟ. ದೇಶದ ದುರದೃಷ್ಟ. ಸಂಘದ ಸದಸ್ಯರು ಮೊದಲು ಯಾವ

ರೀತಿ ಕೆಲಸ ನಡೆಯುತ್ತದೆ ಎಂದು ಆಶಿಸಿದ್ದರೋ ಅದೇರೀತಿ ಕೆಲಸ ನಡೆದಿದ್ದರೆ, ಸಂಘದಿಂದ ಸಾಲವಾಗಿ ಹಣ ಪಡೆದವರು ತಮ್ಮ ಜವಾಬ್ದಾರಿಯನ್ನರಿತು ಸಾಲದ ಹಣವನ್ನು ಹಿಂದಿರುಗಿಸಿದ್ದರೆ ಎಷ್ಟು ಹೆಚ್ಚುಮಂದಿ ವೇತನ ಪಡೆಯಬಹುದಾಗಿತ್ತು, ಸಂಘದಿಂದ ಎಷ್ಟೊಂದು ಪ್ರಯೋಜನವಾಗುತಿತ್ತು ಎನ್ನುವುದನ್ನು ಊಹಿಸಬಹುದು. ಇಂಥ ಸಂಘಗಳ ಅವಶ್ಯಕತೆ ಆಗಿನಕಾಲಕ್ಕಿಂತಲೂ ಈಗ ಹೆಚ್ಚು. ಹತ್ತುಜನ ಸೇರಿ ಒಮ್ಮನಿಸಿನಿಂದ ಕೆಲಸಮಾಡಿದರೆ ಎಷ್ಟು ಹಣ ಕೂಡಿಸಬಹುದು, ಆ ಹಣದಿಂದ ಎಷ್ಟೊಂದು ರೀತಿಯಲ್ಲಿ ಮಿಕ್ಕವರಿಗೆ ಸಹಾಯ ಕಲ್ಪಿಸಬಹುದು ಎನ್ನುವುದು ಗೊತ್ತಾಗುತ್ತದೆ. ಈ ವಿಷಯವನ್ನು ಮನಸಿಗೆ ತೋರಿಕೊಡುವುದಕ್ಕಾದರೂ N. C.ಯ ಚರಿತ್ರೆ ಸಹಾಯವಾದೀತು.

## ಅಭಿವೃದ್ಧಿ ಸಂದೇಶ.

೧೯೩೨ ರಲ್ಲಿ ತಂದೆ ಬರೆದ ಪುಸ್ತಕ 'ಅಭಿವೃದ್ಧಿ ಸಂದೇಶ' ಪ್ರಕಟವಾಯಿತು. ಇಂಗ್ಲೆಂಡಿಗೆ ಹೋದಮೇಲೆ ಅಲ್ಲಿ ತಾವು ಕಂಡ ವಿದ್ಯಮಾನ ತಮ್ಮ ಅನುಭವಗಳನ್ನು ತಮ್ಮ ಮಿತ್ರರೂ ಸಹ ಕೆಲಸಗಾರರೂ ಆದ ಶ್ರೀ ಕೆ. ಹೆಚ್. ರಾಮಯ್ಯನವರಿಗೆ ಬರೆಯುತಿದ್ದುದನ್ನೂ ಆ ಪತ್ರಗಳ ವಿವರವನ್ನೂ ಹಿಂದಿನ ಕೆಲವು ಅಧ್ಯಾಯಗಳಲ್ಲಿ ತಿಳಿಸಿದ್ದೇನೆ. ಈ ಪತ್ರಗಳೇ ಅಲ್ಲದೆ ವಾರವಾರ ಒಕ್ಕಲಿಗರ ಪತ್ರಿಕೆಗೆ ಬೇರೆಯಾಗಿ ಲೇಖನಗಳನ್ನು ಕಳುಹಿಸುತಿದ್ದರು. ಒಕ್ಕಲಿಗರ ಪತ್ರಿಕೆ ಬಹು ಹಿಂದಿನಿಂದ ನಡೆದುಕೊಂಡು ಬರುತಿರುವ ಕನ್ನಡ ಪತ್ರಿಕೆಗಳಲ್ಲೊಂದು. ಆ ಕಾಲದಲ್ಲಿ ಜನರ ಮನ್ನಣೆಗೆ ಪಾತ್ರವಾಗಿದ್ದಿತೆಂದೂ ತೋರುತ್ತದೆ. ವಾರವಾರ ಬರುತಿದ್ದ ಈ ಲೇಖನಗಳನ್ನು ಓದಿದ ಕೆಲವು ಮಹನೀಯರುಗಳು ತಂದೆಯ ಕಾರ್ಯವನ್ನು ಪ್ರಶಂಸೆ ಮಾಡಿದರು. ಆಗ ವಿದ್ಯಾಭ್ಯಾಸದ ಇಲಾಖೆಯ ಮುಖ್ಯರಾದ ಶ್ರೀ ಮಹಿಷಿ ಶಾಮರಾಯರು. "I have been reading your articles in the Vokkaligara Patrike and I am sure they have served to open the eyes of many of our people as to their own backwardness ಎಂದೂ, ದಿವಾನರಾದ ಪ್ರಧಾನ ಶಿರೋಮಣಿ ಟಿ. ಆನಂದರಾಯರು, ಏಟ್ಸ್ ರವರಿಗೆ ಬರೆದ ಒಂದು ಪತ್ರದಲ್ಲಿ As I have told you once before I have always read with interest and admiration Mr. Puttaiya's Kanarese contributions in the Vokkaligara Patrika. He will do well to reprint and publish in book form a collection of these contributions under the designation of "Messages of uplift to Mysoreans" ಎಂದೂ ಮುಂತಾಗಿ ಬರೆದರು. ಇಂಥ ಉತ್ತೇಜನಕರವಾದ ಮಾತುಗಳಿಂದ ಬಲಗೊಂಡು ತಂದೆ ೧೯೩೧ ರಲ್ಲಿ ಒಕ್ಕಲಿಗರ ಪತ್ರಿಕೆಯಲ್ಲಿ ಪ್ರಚುರವಾದ ತಮ್ಮ ಎಲ್ಲ ಲೇಖನಗಳನ್ನು ಒಟ್ಟುಗೂಡಿಸಿ, ಶ್ರೀ ಆನಂದರಾಯರ ಸಲಹೆ

ಯಂತೆ, ಆ ಸಂಕಲನಕ್ಕೆ ಅಭಿವೃದ್ಧಿ ಸಂದೇಶ ಎಂದು ಹೆಸರಿಟ್ಟು ಪ್ರಕಟ ಮಾಡಿದರು.

ಇಲ್ಲಿನ ಬರವಣಿಗೆ ಉಪನ್ಯಾಸರೂಪವಾಗಿದೆ, ಪತ್ರರೂಪದಲ್ಲಿಲ್ಲ. ಅದರಿಂದಲೇ ಸಹಜತೆ ಇಲ್ಲ. ಕ್ಲಿಷ್ಟವಾಗಿ ಕಾಣುತ್ತದೆ. ರಾಮಯ್ಯನವರಿಗೆ ಬರೆದ ಪತ್ರಗಳಲ್ಲಿ ಕಾಣುವ ಆತ್ಮೀಯತೆ ತೋರುವುದಿಲ್ಲ. ಸ್ವಂತ ಅನುಭವಗಳನ್ನು ಚಿತ್ರಿಸುವಾಗ, ಪತ್ರಮುಖವಾಗಿ ತಿಳಿಸಿದರೆ ಅದನ್ನು ಗ್ರಹಿಸುವುದು ಸುಲಭ. ನಮಗೆ ತಿಳಿಯದೆಯೇ ಎಷ್ಟೊ ವಿಷಯಗಳು ಚನ್ನಾಗಿ ಮುಂದಟ್ಟಾಗುತ್ತವೆ. ರಾಮಯ್ಯನವರಿಗೆ ಬರೆದ ಪತ್ರಗಳಲ್ಲಿ ಕಾಣುವ ಹೃದಯದ ಮಿಡಿತ, ಭಾವಗಳ ವೇಗ, ಸೊಗಸಿನ ಶೈಲಿ, ಉಪನ್ಯಾಸ ರೂಪವಾಗಿ ಬರೆದಿರುವ ಅಭಿವೃದ್ಧಿ ಸಂದೇಶದಲ್ಲಿ ಕಾಣುವುದಿಲ್ಲ. ಕಳೆದ ಹದಿನೈದು ವರ್ಷಗಳಲ್ಲಿ ನಾನು ಅಭಿವೃದ್ಧಿ ಸಂದೇಶ ಮೂರು ನಾಲ್ಕು ಸಾರಿ ಓದಲು ತೆಗೆದುಕೊಂಡಿದೇನೆ. ತಮ್ಮ ಅನುಭವವನ್ನೆಲ್ಲ ಸವಿಸ್ತಾರವಾಗಿ ವಿವರಿಸಿರುವ ಮೊದಲಭಾಗವನ್ನು ಪ್ರತಿಸಲ ಓದಿದೇನೆ. ಆದರೆ ಎರಡನೆಯ ಭಾಗ ಓದುವಾಗ ಇನ್ನಿಲ್ಲದ ಸೋಮಾರಿತನ ಬಂದು ಅದನ್ನು ಓದುವುದು ಬಿಟ್ಟಿದೇನೆ. ಈ ಭಾಗದಲ್ಲಿಯೂ ಬೇಕಾದಷ್ಟು ವಿಚಾರಸಂಗ್ರಹ ಇದೆ. ಆದರೆ ಹೇಳುವ ರೀತಿ ಮನಮುಟ್ಟುವುದಿಲ್ಲ.

ಅಭಿವೃದ್ಧಿ ಸಂದೇಶದಲ್ಲಿ ಅಡಕವಾಗಿರುವ ವಿಷಯಗಳೆಲ್ಲದರ ಪ್ರಸ್ತಾಪ ಹಿಂದೆಯೇ ವಿವರಿಸಿರುವ ಪತ್ರಗಳಲ್ಲಿ ಬಂದಿದೆ. ಆದಕಾರಣ ಇಲ್ಲಿ ಮತ್ತೆ ಅವುಗಳ ಪ್ರಸ್ತಾಪ ಬೇಡ. ಈ ಬಗೆಯ ಪುಸ್ತಕ ಕನ್ನಡಕ್ಕೆ ತೀರ ಹೊಸದು. ಅದುವರೆಗೆ ಎಷ್ಟೋ ಜನ ಇಂಗ್ಲೆಂಡಿಗೆ ಹೋಗಿ ಬಂದಿದ್ದವರಿದ್ದರು. ಆದರೆ ಯಾರೂ ತಮ್ಮ ಅನುಭವಗಳನ್ನು ಬರೆದಿಡುವ ಕಷ್ಟ ತೆಗೆದುಕೊಂಡಿರಲಿಲ್ಲ. ಈಚೆಗೆ ವಿನಾಯಕ ಕೃಷ್ಣ ಗೋಕಾಕರು ಬರೆದ 'ಸಮುದ್ರದಾಚೆಯಿಂದ' ಎಂಬ ಸೊಗಸಾದ ಗ್ರಂಥ ಬಿಟ್ಟರೆ ಈ ಬಗೆಯ ಸಾಹಿತ್ಯ ಈಗಲೂ ಕೂಡ ಕನ್ನಡದಲ್ಲಿ ಇಲ್ಲವೆಂತಲೇ ಹೇಳಬೇಕು. ಕನ್ನಡದ ಶೋಧನೆಯಲ್ಲಿಯೇ ಹಣ್ಣಾಗಿದ್ದ ಪ್ರಾಕ್ತನ ವಿಮರ್ಶ ವಿಚಕ್ಷಣರಾದ ರಾ. ನರಸಿಂಹಾಚಾರ್ಯರು ತಂದೆಗೆ ಬರೆದ ಒಂದು ಪತ್ರದಲ್ಲಿ—

I have just been able to go through your book. I found it interesting reading from beginning to the end. It may be looked upon as an impressive and eloquent homily on the importance of method in our doings. We have a number of Europe and America returned men among us, but no one has thought it fit to give to his stay at home countryman a good idea of his experience in foreign lands and of the lessons which one may learn with advantage from the customs and habits of the people of those lands. I am very glad that you have written this useful work which I think is the first of its kind in kannada. It is a creditable performance with regard to both matter and manner ಎಂದು ಮೆಚ್ಚಿಕೆಯುಮಾತು ಬರೆದರು.

ಅಭಿವೃದ್ಧಿ ಸಂದೇಶದ ಪ್ರಕಟನ ಕಾರ್ಯವನ್ನು ಸರಕಾರದ ವಿದ್ಯಾಭ್ಯಾಸದ ಇಲಾಖೆಯವರೇ ಕೈಗೊಂಡರು. ಎಂಟ್ರೆನ್ಸ್ ಪರೀಕ್ಷೆಗೆ ಒಂದು ವರ್ಷ ಅದು ಪಠ್ಯಪುಸ್ತಕವಾಗಿಯೂ ಇತ್ತು. ೧೯೩೨ನೆ ಇಸವಿಯಲ್ಲಿ ಈ ಪುಸ್ತಕಕ್ಕೆ ಕನ್ನಡ ಸಾಹಿತ್ಯ ಪರಿಷತ್ತಿನವರು ಇಪ್ಪತ್ತು ರೂಪಾಯಿ ಬಹುಮಾನ ಕೊಟ್ಟು ಗೌರವಿಸಿದರು. ಈ ತೀರ್ಮಾನವನ್ನು ತಿಳಿಸಿ ಪರಿಷತ್ತಿನ ಗೌರವ ಕಾರ್ಯದರ್ಶಿಗಳಾದ ಶ್ರೀ ಬೆಳ್ಳಾವೆ ವೆಂಕಟನಾರಾಯಣಪ್ಪನವರು ಬರೆದ ಕಾಗದವನ್ನು ಇಲ್ಲಿ ಕೊಟ್ಟಿದೇನೆ—

ಕರ್ಣಾಟಕ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿ ಬೆಳ್ಳಾವೆ ವೆಂಕಟನಾರಾಯಣಪ್ಪನ ವಿಜ್ಞಾಪನೆಗಳು,

ಇದೇ ಮೇ ತಿಂಗಳು ೧೨ ೧೩. ೧೪ನೆಯ ತಾರೀಖುಗಳಲ್ಲಿ ದಾವಣಗೆರೆಯಲ್ಲಿ ನಡೆದ ಕರ್ಣಾಟಕ ಸಾಹಿತ್ಯ ಸಮ್ಮೇಳನದಲ್ಲಿ ಈ

ವರುಷ ರಚಿತವಾದ ಕನ್ನಡ ಗ್ರಂಥಗಳಿಗಾಗಿ ಬಹುಮಾನ ಹಂಚುವುದ ರಲ್ಲಿ ತಾವು ರಚಿಸಿರುವ 'ಅಭಿವೃದ್ಧಿ ಸಂದೇಶ'ಕ್ಕೆ ಇಪ್ಪತ್ತು ರೂಪಾಯಿಗಳ ಬಹುಮಾನವನ್ನು ಸಭೆಯಲ್ಲಿ ಕೊಡಲಾಗಿದೆ. ಆ ಮೊಬಲಗನ್ನು ಇದ ರೊಡನೆ ತಮಗೆ ಕಳುಹಿಸಿರುತ್ತೇನೆ. ಅದು ಸೇರಿದುದಕ್ಕೆ ದಯವಿಟ್ಟು ಉತ್ತರವನ್ನು ಬರೆಯಿಸಬೇಕೆಂದು ಕೇಳಿಕೊಳ್ಳುತ್ತೇನೆ.

B. Venkatanaranappa,
ಗೌರವ ಕಾರ್ಯದರ್ಶಿ.

ಅಭಿವೃದ್ಧಿ ಸಂದೇಶದ ಪ್ರತಿಗಳು ಮುಗಿದು ಹೋಗಿ ಬಹಳ ಕಾಲ ವಾಯಿತು. ಈಗ ಎಲ್ಲಿಯೂ ಅದರ ಪ್ರತಿ ಸಿಗಲಾರದು. ತಂದೆಯ ಹತ್ತಿರ ಮಾತ್ರ ಒಂದು ಪ್ರತಿ ಉಳಿದಿತ್ತು. ಅವರಿಗೆ ಎರಡನೆಯ ಬಾರಿ ಅಭಿವೃದ್ಧಿ ಸಂದೇಶವನ್ನು ಮುದ್ರಿಸಬೇಕೆಂಬ ಆಸೆ ಇತ್ತೆಂದು ತೋರುತ್ತದೆ. ಅದು ಇದ್ದಂತೆ ಪ್ರಕಟಮಾಡಬೇಕೆ, ಇಲ್ಲವೆ ಕೆಲವು ಬದಲಾವಣೆ ಮಾಡಿ ಬೇರೆ ಯಾಗಿಯೇ ಬರೆಯಬೇಕೆ ಎನ್ನುವ ಯೋಚನೆಯಲ್ಲಿ ಅವರಿದ್ದಂತೆ ಕಂಡಿತು. ಬಹಳ ದಿವಸ ಅಭಿವೃದ್ಧಿ ಸಂದೇಶದ ಪ್ರತಿಯನ್ನು ಅವರ ಮೇಜಿನಮೇಲೆ ನೋಡುತಿದ್ದೆ. ಅವರು ಅದನ್ನು ಮೇಲಿಂದ ಮೇಲೆ ಓದುತ್ತಲೂ ಇದ್ದರು. ಪುನರ್ಮುದ್ರಣಕ್ಕೆ ಬೇಕಾಗುವ ಕಾಗದ ಪಡೆಯಲು ಏರ್ಪಾಡು ಸಹ ಮಾಡಿ ದ್ದರು. ಆದರೆ ಏನು ಕಾರಣವೊ ಅವರು ತಮ್ಮ ಮೊದಲ ಕೃತಿಯನ್ನು ಪುನಃ ಬೆಳಕಿಗೆ ತರುವ ಪ್ರಯತ್ನಮಾಡಲಿಲ್ಲ. ಈಗ ಅದು ಹಳೆಯ ಕಾಲದ ಪುಸ್ತಕವಾಗಿ ಕೆಲವು ಪುಸ್ತಕಭಂಡಾರಗಳಲ್ಲಿ ಮಾತ್ರ ಉಳಿದಿದೆ.

ಅಭಿವೃದ್ಧಿ ಸಂದೇಶದ ಮೇಲಿನ ಯಾವ ವಿಮರ್ಶೆಯನ್ನೂ ನಾನು ಓದಿದ ನೆನಪಿಲ್ಲ. ಬಹಳ ಹಿಂದಿನ ಜಯಕರ್ಣಾಟಕದ ಸಂಚಿಕೆಯೊಂದರಲ್ಲಿ, ಚಿತ್ರಗುಪ್ತ ಎಂಬ ಹೆಸರಿನ ಒಬ್ಬರು, ಅಭಿವೃದ್ಧಿ ಸಂದೇಶದ ತುಂಬ ವೆಸ್ಟ್ ಮಿನ್‌ಸ್ಟರ್ ಅಬ್ಬೆ, ಪಿಕೆಡಲ್ಲಿ, ಇವುಗಳ ವಿಷಯ ಇದೆಯೇ ಹೊರತು, ಬಡಜನರ ವಾಸಸ್ಥಾನಗಳಾದ East Endನ ಪ್ರಸ್ತಾಪವೇ ಇಲ್ಲ ಎಂದು ಮುಂತಾಗಿ ಟೀಕೆ ಮಾಡಿದುದನ್ನು ಓದಿದ ನೆನಪು. 'ಸಮುದ್ರದಾಚೆಯಿಂದ'

ಪುಸ್ತಕ ವಿಮರ್ಶೆ ಮಾಡುತ್ತ ಕೀ. ನಂ ಶ್ರೀ. ಯವರು ಅದೇಬಗೆಯ ಪುಸ್ತಕವಾದ ಅಭಿವೃದ್ಧಿ ಸಂದೇಶವನ್ನು ಸ್ಮರಿಸಿದ್ದಾರೆ ಈ ಎರಡುಸಂದರ್ಭ ಬಿಟ್ಟರೆ ಅಭಿವೃದ್ಧಿ ಸಂದೇಶದ ವಿಷಯದ ಪ್ರಸ್ತಾಪವನ್ನು ಬೇರೆ ಎಲ್ಲಿಯೂ ಕಂಡ ನೆನಪಿಲ್ಲ.

# ಬ್ರಾಹ್ಮಣೇತರರೂ ಸಂಸ್ಕೃತ ಪಾಠಶಾಲೆಗಳೂ

ಮೈಸೂರು ಮತ್ತು ಬೆಂಗಳೂರು ನಗರಗಳಲ್ಲಿ, ಸಂಸ್ಕೃತ ವ್ಯಾಸಂಗಕ್ಕಾಗಿ ಎರಡು ಸಂಸ್ಕೃತ ಪಾಠಶಾಲೆಗಳಿವೆಯಷ್ಟೆ. ಬಹುಕಾಲದವರೆಗೆ, ಬ್ರಾಹ್ಮಣೇತರರು ಈ ಎರಡು ಶಾಲೆಗಳಲ್ಲಿ ವ್ಯಾಸಂಗಮಾಡುವ ಹಾಗಿರಲಿಲ್ಲ. ಈ ಅನ್ಯಾಯ ಹೋಗಿಸುವುದಕ್ಕೆ ಹಿಂದಿನಿಂದಲೂ ಚಳುವಳಿ ನಡೆದುಕೊಂಡು ಬಂದಿದೆ. ಈಗಲೂ ಕೂಡ ಮೈಸೂರಿನ ಶಾಲೆಗೆ ಬ್ರಾಹ್ಮಣೇತರರು ಪ್ರವೇಶ ಮಾಡುವ ಹಾಗೆಯೇ ಇಲ್ಲವಂತೆ! ಬ್ರಾಹ್ಮಣೇತರರನ್ನು ಸಂಸ್ಕೃತಶಾಲೆಗಳಿಗೆ ಸೇರಿಸಬಹುದೆ ಬೇಡವೆ ಎನ್ನುವುದನ್ನು ಚರ್ಚೆಮಾಡಿ ನಿರ್ಧಾರಕ್ಕೆ ಬರಲು ೧೯೨೦ ರಲ್ಲಿ ಸರಕಾರ ಒಂದು ಸಮಿತಿಯನ್ನು ಏರ್ಪಡಿಸಿತು. ಈ ಸಮಿತಿಯವರು ಮೈಸೂರು ಪಾಠಶಾಲೆಯಲ್ಲಿ ಬ್ರಾಹ್ಮಣೇತರರಿಗೆ ಸ್ಥಳ ಕೊಡಲೇಕೂಡದೆಂತಲೂ, ಬೆಂಗಳೂರು ಶಾಲೆಯಲ್ಲಿ ಮಾತ್ರ ವೇದ ವೇದಾಂತ ವೇದಾಂಗ ಇವುಗಳನ್ನುಳಿದು ಇತರ ಪಾಠ ವ್ಯಾಸಂಗಮಾಡುವುದಕ್ಕೆ ಬ್ರಾಹ್ಮಣೇತರರಿಗೆ ಅವಕಾಶಕೊಡಬಹುದೆಂತಲೂ ಸರಕಾರಕ್ಕೆ ವರದಿ ಮಾಡಿತು.

ಸಮಿತಿಯ ಈ ತೀರ್ಮಾನವನ್ನು ವಿರೋಧಿಸಿ ಬ್ರಾಹ್ಮಣೇತರರ ಸಭೆ ಅಲ್ಲಲ್ಲಿ ಸೇರಿ ತನ್ನ ಅಭಿಪ್ರಾಯ ವ್ಯಕ್ತಪಡಿಸಿತು. ಈ ಸಭೆಗಳಲ್ಲಿ ತಂದೆಯೂ ಭಾಗವಹಿಸಿದ್ದರು. ಬ್ರಾಹ್ಮಣೇತರರಿಗೆ ಕಂಡಂತೆ ಅನ್ಯಾಯವಾದುದನ್ನು ತಪ್ಪಿಸಲು ಪ್ರಯತ್ನಪಟ್ಟರು. ಸಮಿತಿಯವರು ಕೊಟ್ಟ ತೀರ್ಪು ಸಾಧುವಾದುದಲ್ಲ ಎನ್ನುವುದಕ್ಕೆ ತಂದೆ ಆಗ ಕೊಟ್ಟ ವಾದವನ್ನೆ ಇಲ್ಲಿ ಎತ್ತಿ ಪ್ರಸ್ತಾಪ ಮಾಡಿದ್ದೇನೆ. ಬ್ರಾಹ್ಮಣೇತರರಿಗೆ ಸಮಾಜದಲ್ಲಿ ಸರಿಯಾದ ಸ್ಥಾನ ದೊರಕಿಸಲು ಶ್ರಮಪಟ್ಟ ತಂದೆಯ ಚರಿತ್ರೆಯಲ್ಲಿ ಈ ಪ್ರಸಂಗವನ್ನು ವಿವರಿಸುವುದು ಸೂಕ್ತವೆಂದೇ ನಾನೆಣಿಸುತ್ತೇನೆ.

೧೯೦೪ ನೆಯ ಇಸವಿಯಲ್ಲಿ ಶ್ರವಣಬೆಳುಗೊಳದ ಸಂಸ್ಕೃತ ಪಾಠಶಾಲೆಯ ಅಧ್ಯಕ್ಷರಾದ ಮ|| ರಾ|| ದೋರ್ಬಲವಾಸಶಾಸ್ತ್ರಿಗಳು ವ್ಯಾಸಂಗಕ್ಕಾಗಿ ಮೈಸೂರಿನ ಸಂಸ್ಕೃತ ಪಾಠಶಾಲೆಗೆ ಸೇರಲು ಸರಕಾರದ ಅನುಮತಿ ಕೇಳಿದ

ರಂತೆ. ಈ ಪಾಠಶಾಲೆ ಬ್ರಾಹ್ಮಣ ವಿದ್ಯಾರ್ಥಿಗಳಿಗೆ ವೇದ ಮತ್ತು ವೇದಾಂಗ ಗಳಲ್ಲಿ ಪಾಠ ಹೇಳಿಕೊಡಲು ಸ್ಥಾಪಿಸಲ್ಪಟ್ಟಿರುವುದರಿಂದಲೂ, ಅಲ್ಲಿನ ಪಂಡಿತ ರೆಲ್ಲರೂ ವೈದಿಕ ಬ್ರಾಹ್ಮಣರಾದುದರಿಂದ ಬ್ರಾಹ್ಮಣೇತರರಿಗೆ ಪಾಠ ಹೇಳಲು ಅವರು ಒಡಂಬಡುವುದಿಲ್ಲವೆಂತಲೂ, ಬ್ರಾಹ್ಮಣರಲ್ಲದವರನ್ನು ಸಂಸ್ಕೃತ ಶಾಲೆಗೆ ಸೇರಿಸಿಕೊಳ್ಳಲಾಗುವುದಿಲ್ಲವೆಂದು ಹೇಳಿ ಸರಕಾರ ಶಾಸ್ತ್ರಿಗಳಿಗೆ ಉತ್ತರಕೊಟ್ಟಿತು. ಶಾಸ್ತ್ರಿಗಳಿಗೆ ಓದುವ ಅವಕಾಶ ಸಿಗಲಿಲ್ಲ. ಶ್ರವಣಬೆಳು ಗೊಳದ ಸಂಸ್ಕೃತ ಪಾಠಶಾಲೆಯಲ್ಲಿ ವ್ಯಾಸಂಗ ಮಾಡಿದ ಜೈನ ವಿದ್ಯಾರ್ಥಿ ಗಳಿಗೂ ಕೂಡ ಮೈಸೂರಿನ ಶಾಲೆಯಲ್ಲಿ ವ್ಯಾಸಂಗಕ್ಕೆ ಅವಕಾಶ ದೊರೆಯ ಲಿಲ್ಲ. ಆ ಪಾಠಶಾಲೆ ಬ್ರಾಹ್ಮಣರ ಸ್ವತ್ತಾಗಿಯೇ ಉಳಿಯಿತು. ಇದೇ ಬ್ರಾಹ್ಮಣೇತರರು ತಮ್ಮ ಸ್ಥಾನಮಾನಕ್ಕಾಗಿ ಹೊಡೆದಾಡಲು ಮೊದಲು ಮಾಡಿದುದರ ಹಿನ್ನೆಲೆ.

ಬ್ರಾಹ್ಮಣರೇ ವೇದವನ್ನು ಓದಬೇಕು, ಮಿಕ್ಕವರು ಯಾರೂ ಓದ ಕೂಡದು ಎನ್ನುವ ವಾದವನ್ನು ಸರಕಾರ ಒಪ್ಪಿಕೊಂಡಿತ್ತೆಂದು ಕಾಣುತ್ತದೆ. ೧೯೨೦ ರಲ್ಲಿ ಸರಕಾರ ನೇಮಕಮಾಡಿದ ಸಮಿತಿಯೂ ಸರಕಾರದ ಹಿಂದಿನ (೧೯೦೪ ರ) ಅಭಿಪ್ರಾಯವನ್ನೇ ಎತ್ತಿ ಹಿಡಿಯಿತು. ವೇದ, ವೇದಾಂತ ವೇದಾಂಗ ಇವೆಲ್ಲವೂ ಇಂಗ್ಲೀಷು ಜರ್ಮನ್ ಭಾಷೆಗಳಿಗೆ ಅನುವಾದವಾಗಿರು ವುದೂ, ಪಾಶ್ಚಾತ್ಯರನೇಕರು ಈ ಶಾಸ್ತ್ರಗಳಲ್ಲಿ ಪಂಡಿತರಾಗಿರುವುದೂ, ಸಮಿ ತಿಯ ಸದಸ್ಯರ ಗಣನೆಗೆ ಬಂದಂತಿಲ್ಲ. ಬ್ರಾಹ್ಮಣೇತರರಲ್ಲೂ ವಿದ್ವಾಂಸರು ವೈಯಾಕರಣಿಗಳು ಕವಿಗಳು ಇದ್ದುದೂ, ಕನ್ನಡಸಾಹಿತ್ಯಕ್ಕೆ ಜೈನ ವೀರ ಶೈವ ಮತದ ಕವಿಗಳು ಸೇವೆ ಸಲ್ಲಿಸಿರುವುದೂ ಅವರ ಮನಸಿಗೆ ಹೊಳೆದಂತೆ ಕಾಣಲಿಲ್ಲ. ವೇದಘೋಷ, ವೇದಪ್ರಯೋಗ, ವೇದಾಧ್ಯಯನ ಇವು ಗಳಿಂದ ಒಂದು ಗುಂಪಿನವರಿಗೆ ಒದಗುವ ಜ್ಞಾನ ಬೇರೆಯವರಿಗೇಕೆ ದೊರೆಯ ಬಾರದು. ಅಧ್ಯಯನಕ್ಕೆ ಅವಕಾಶಕೊಡುವುದರಿಂದ ಏನು ಹಾನಿ. ಯಾವ ಜಾತಿಯವನಾದರೇನು ಶಿಕ್ಷಣದಿಂದ ಸತ್ಫಲ ಪಡೆಯುವುದಿಲ್ಲವೆ. ಸರ್ ವಿಲಿಯಂ ಜೋನ್ಸ್, ಮೋನಿಯರ್ ವಿಲಿಯಮ್ಸ್, ಮಾಕ್ಸ್ ಮುಲ್ಲರ್ ಪಾಲ್ ಡ್ಯೂರ್ಸ, ಷೋಪನೂರ್, ಮ್ಯಾಕ್‌ಡೊನಾಲ್ಡ್ ಮೊದಲಾದ ಪಾಶ್ಚಾತ್ಯ ವಿದ್ವಾಂಸರು ನಮ್ಮ ವೈದಿಕ ಗ್ರಂಥಗಳನ್ನೆಲ್ಲ ಪರಿಶೋಧಿಸಿ,

ವಿಸ್ತಾರವಾದ ಟೀಕೆಗಳನ್ನು ಬರೆದು, ಅವುಗಳಲ್ಲಡಗಿರುವ ಅಮೂಲ್ಯವಾದ ರತ್ನಗಳನ್ನು ಪ್ರಪಂಚವೇ ಸೂರೆಗೈಯಲಿ ಎಂದು ರಾಶಿಹಾಕಿರುವಾಗ, ಊರು ಕೊಳ್ಳೆಯಾದಮೇಲೆ ಊರಬಾಗಿಲು ಹಾಕಿಕೊಂಡಂತೆ ತಿರುಳನ್ನು ಕೊಟ್ಟು ಟೊಳ್ಳಿಗೋಸ್ಕರ ಕಾದಾಡುವುದು ಈ ಕಾಲಕ್ಕೆ ಸರಿಯಾದ ವರ್ತನೆ ಎನಿಸಿ ಕೊಳ್ಳುವುದಿಲ್ಲವಲ್ಲವೆ, ಇದೇ ರೀತಿ ನಾವು ವಾದಮಾಡುತ್ತ ಹೋಗಬಹುದು. ಆದರೆ ಮತಾಚಾರಗಳ ಕೋಟೆಯನ್ನು ಸುತ್ತುಕಟ್ಟಿಕೊಂಡು ಕುಳಿತಿರು ವವರಿಗೆ ಈ ವಾದ ಯಾವುದೂ ಹಿಡಿಯುವುದಿಲ್ಲ. ಅವರ ಸಂಕುಚಿತ ಮನೋಭಾವ ಹೋಗುವುದಿಲ್ಲ. ಇಷ್ಟೆಲ್ಲ ಸಭೆ ಸೇರಿದರೂ, ಇಷ್ಟೊಂದು ಮಹನೀಯರುಗಳು ಹೊಡೆದಾಡಿದರೂ ಈಗಲೂ ಮೈಸೂರಿನ ಶಾಲೆಯಲ್ಲಿ ಬ್ರಾಹ್ಮಣೇತರರಿಗೆ ಪ್ರವೇಶ ದೊರೆಯುವುದಿಲ್ಲವಂತೆ.

ಈ ವಿಷಯವಾಗಿ ಇದುವರೆಗೆ ನಡೆದಿರಬಹುದಾದ ವಾದವಿವಾದಗಳು, ಈಗ ಸಂಸ್ಕೃತ ಪಾಠಶಾಲೆಗಳಲ್ಲಿರುವ ಸ್ಥಿತಿ, ಇವು ಯಾವುದೂ ನನಗೆ ತಿಳಿಯದುದರಿಂದ ಈ ವಿಷಯ ಹೆಚ್ಚಿನ ಪ್ರಸ್ತಾಪ ಮಾಡಲಾರೆ. ತಂದೆಯ ಮನಸಿನಲ್ಲಿ ಈ ವಿಷಯದ ಪರ ಇದ್ದ ಭಾವನೆಗಳಿಗೆ ಮಾತ್ರ ಇಲ್ಲಿ ರೂಪು ಕೊಟ್ಟಿದೇನೆ.

*

## ಸರಕಾರದ ಮುದ್ರಣಶಾಲೆಯ ಅಧ್ಯಕ್ಷರಾಗಿ ನೇಮಕ

೧೯೨೩ ರ ಜುಲೈನಲ್ಲಿ ತಂದೆಯನ್ನು ಸರಕಾರದ ಮುದ್ರಣಶಾಲೆಯ ಅಧ್ಯಕ್ಷರನ್ನಾಗಿ ನೇಮಿಸಿ ಸರಕಾರದ ನಿರೂಪ ಹೊರಟಿತು. ತಂದೆಯ ಜೊತೆಯವರಾದ ಶ್ರೀನಿವಾಸಯ್ಯಂಗಾರ್ಯರು ಅಲ್ಲಿಯವರೆಗೆ ಸರಿಸಮನಾಗಿ ಬಂದಿದ್ದರು. ಅದುವರೆಗೂ ಸರಕಾರದ ಗಣನೆಯಲ್ಲಿ ಶ್ರೀನಿವಾಸಯ್ಯಂಗಾರ್ಯರೇ ಹಿರಿಯರಾಗಿದ್ದರು. ಆದರೆ ವಯಸ್ಸಿನಲ್ಲಾಗಲಿ, ಸರಕಾರಕ್ಕೆ ಅದುವರೆವಿಗೆ ಸಲ್ಲಿಸಿದ್ದ ಸೇವೆಯ ಅವಧಿಯಲ್ಲಾಗಲೀ, ಅಥವಾ ವಿದೇಶದಲ್ಲಿ ವ್ಯಾಸಂಗ ಮಾಡಿ ಪಡೆದುಕೊಂಡು ಬಂದ ಯಶಸ್ಸಿನಲ್ಲಾಗಲಿ, ತಂದೆಯೇ ಮೊದಲಿಗ ರಾಗಿದ್ದರು. ಈ ಕಾರಣಗಳ ಸಲುವಾಗಿಯೊ ಏನೊ ಅಂತೂ ೧೯೨೩ ರಲ್ಲಿ ತಂದೆ ಮುದ್ರಣ ಶಾಲೆಯ ಅಧ್ಯಕ್ಷರಾಗಿ ನೇಮಿತರಾದರು.

ಈ ಸಂದರ್ಭದಲ್ಲಿ ಸರಕಾರದ ಮುದ್ರಣಶಾಲೆಯ ಹುಟ್ಟು ಮತ್ತು ಅದರ ಬೆಳವಣಿಗೆಯ ವಿವರ ಕೊಡುವುದು ಸೂಕ್ತವಾಗಿ ಕಾಣುತ್ತದೆ:

ಸರಕಾರದ ಮುದ್ರಣಶಾಲೆಯ ಚರಿತ್ರೆ ಸುಮಾರು ೧೮೪೦ನೆ ಇಸವಿ ಯಿಂದ ಮೊದಲಾಗುತ್ತದೆ. ಆಲಸೂರು ಪೇಟೆಯ ಹತ್ತಿರವಿದ್ದ ವೆಸ್ಲಿಯನ್ ಹೈಸ್ಕೂಲಿನ ಆವರಣದಲ್ಲಿ, ವೆಸ್ಲಿಮಿರ್ಷ ಪಾದ್ರಿಗಳಾದ ರೆವರೆಂಡ್ ಗ್ಯಾರೆಟ್ ರವರು ಒಂದು ಸಣ್ಣ ಅಚ್ಚಿನ ಯಂತ್ರ ಇಟ್ಟುಕೊಂಡು ಕೆಲಸಮಾಡುತಿದ್ದರು. ಮೈಸೂರು ಸರಕಾರ ಒಂದು ಮುದ್ರಣಶಾಲೆ ಇಟ್ಟುಕೊಳ್ಳಬೇಕೆಂದು ರೆವ ರೆಂಡ್ ಗ್ಯಾರೆಟ್ ಅವರು ಆಗ ಛೀಫ್ ಕಮಿಷನರಾಗಿದ್ದ ಸರ್ ಮಾರ್ಕ್ ಕಬ್ಬನ್‌ರವರಿಗೆ ಸಲಹೆಕೊಟ್ಟರು. ಕಬ್ಬನ್‌ರವರು ಒಪ್ಪಿದಮೇಲೆ ೧೮೬೬ ರಲ್ಲಿ ಸರಕಾರದ ಮುದ್ರಣಶಾಲೆ ಮೊದಲಾಯಿತು. ಗ್ಯಾರೆಟ್‌ರವರೇ ಮುದ್ರಣಶಾಲೆಯ ಮೊದಲ ಅಧ್ಯಕ್ಷರಾಗಿದ್ದರು. ಅಧ್ಯಕ್ಷರಾಗಿ ಕೆಲಕಾಲ ಕೆಲಸಮಾಡಿದಮೇಲೆ ವಿದ್ಯಾಭ್ಯಾಸದ ಇಲಾಖೆಯ ಮುಖ್ಯರಾಗಿ ವರ್ಗ ವಾದರು. ಮುದ್ರಣಶಾಲೆಯ ಅಧ್ಯಕ್ಷಸ್ಥಾನಕ್ಕೆ ಗ್ಯಾರೆಟ್‌ರವರ ಮಕ್ಕಳಾದ ಜೆ. ಪಿ. ಗ್ಯಾರೆಟ್‌ರವರು ನೇಮಿತರಾದರು. ಮೊದಲಿಗೆ ಸರಕಾರದ ಮುದ್ರಣ ಶಾಲೆ ಟಿಪ್ಪುಸುಲ್ತಾನರ ಅರಮನೆಯಲ್ಲಿತ್ತು. ಬೆಂಗಳೂರಿನ ಅಠಾರ ಕಛೇ

ರಿಯ ಕಟ್ಟಡ ಪೂರ್ತಿಯಾದಮೇಲೆ ೧೮೬೮ರಲ್ಲಿ ಮುದ್ರಣಶಾಲೆ ಕೂಡ ಈ ಕಟ್ಟಡಕ್ಕೆ ವರ್ಗವಾಗಿ ಬಂತು. ಆ ಕಾಲಕ್ಕೆ ಕೈಯಿಂದ ತಿರುಗಿಸುವ ಐದು ಯಂತ್ರಗಳು, ಮುವ್ವತ್ತು ಮಂದಿ ಕೆಲಸಗಾರರು ಮಾತ್ರ ಇದ್ದರು.

೧೮೬೬ ರಲ್ಲಿ ಮೈಸೂರು ಗೆಜೆಟ್ ಪ್ರಾರಂಭವಾಯಿತು. ಮಿ॥ ಎಲ್. ರಿಕೆಟ್ಸ್ ಅವರು ಅದರ ಮೊದಲ ಸಂಪಾದಕರಾಗಿದ್ದರು. ಗೆಜೆಟ್‌ನ ಮೊದಲನೆ ಸಂಚಿಕೆ ೧೮೬೬ರ ಏಪ್ರಿಲ್ ಏಳನೆಯ ತಾರೀಖು ಹೊರಟಿತು. ಗೆಜೆಟ್ ಮೊದಲು ಹೊರಟಾಗ ಸರಕಾರಕ್ಕೂ ಅದಕ್ಕೂ ಸಂಬಂಧವಿರಲಿಲ್ಲ. ೧೮೬೭ ರಲ್ಲಿ ಗೆಜೆಟ್, ಮೈಸೂರು ಸರಕಾರದ ಅಂಗವಾಗಿ, ಸರಕಾರದ ಆಜ್ಞೆಯ ಪ್ರಕಾರ ಪ್ರಕಟವಾಗಲು ಮೊದಲಾಯಿತು. ಮೊದಲಿಗೆ ಗೆಜೆಟ್‌ನ ಸಂಪಾದಕರೇ ಬೇರೆ ಮುದ್ರಣಶಾಲೆಯ ಅಧ್ಯಕ್ಷರೇ ಬೇರೆಯಾಗಿದ್ದರು. ೧೮೬೯ರಲ್ಲಿ ಈ ಎರಡು ಕೆಲಸಗಳೂ ಮುದ್ರಣಶಾಲೆಯ ಅಧ್ಯಕ್ಷರದಾಯಿತು.

ಶ್ರೀಯುತರುಗಳಾದ, ಹೆಚ್. ಹಡ್ಸನ್, ಟಿ. ಟಿ. ಲಿಯೊನಾರ್ಡ್, ಹೆಚ್. ಹೆಚ್. ಸ್ಪಾರ್ಕ್ಸ್, ಜಿ. ಹ್ಯೂವರ್, ರೈಟ್, ಇವರುಗಳು ಮುದ್ರಣಶಾಲೆಯ ಮೊದಲ ಅಧ್ಯಕ್ಷರುಗಳಾಗಿದ್ದರು. ೧೯೦೫ ರಲ್ಲಿ ಮುದ್ರಣಕಲೆಯಲ್ಲಿ ಹೆಚ್ಚು ಪ್ರಶಸ್ತಿಪಡೆದುಕೊಂಡು ಹೆಸರು ಸಂಪಾದಿಸಿದ್ದ ಶ್ರೀ ಏಟ್ಸ್‌ರವರನ್ನು ಅಧ್ಯಕ್ಷರನ್ನಾಗಿ ಮಾಡಿದರು ಹನ್ನೆರಡು ವರ್ಷಕಾಲ ಏಟ್ಸ್‌ರವರು ಆ ಪದವಿಯಲ್ಲಿದ್ದರು. ಅವರ ಕಾಲದಲ್ಲಿ ಮುದ್ರಣಶಾಲೆ ಬಹುಮುಖವಾಗಿ ಬೆಳೆಯಿತು. ೧೮೯೬ನೆಯ ಇಸವಿಯವರೆಗೆ ಕೆಲಸವೆಲ್ಲ ಕೈಯಿಂದಲೇ ನಡೆಯುತಿತ್ತು. ಆ ವರ್ಷ ಒಂದು ಗ್ಯಾಸ್ ಇಂಜನಿನ ಸಹಾಯದಿಂದ ಕೆಲಸ ನಡೆಯಲು ಮೊದಲಾಯಿತು. ೧೯೦೭ ರಲ್ಲಿ ವಿದ್ಯುಚ್ಛಕ್ತಿಯ ಸಹಾಯ ಒದಗಿ ಬಂತು.

೧೮೭೧ ರಲ್ಲಿ ಈಗ ಸರಕಾರದ ಮುದ್ರಣಶಾಲೆ ಇರುವ ಕಟ್ಟಡದ ಮೊದಲ ಅಂಕಣ ಕಟ್ಟಲಾಯಿತು. ಅದುವರೆಗೂ ಅಠಾರ ಕಛೇರಿಯಲ್ಲಿದ್ದ ಮುದ್ರಣಶಾಲೆ ತನ್ನದೇ ಕಟ್ಟಡಕ್ಕೆ ವರ್ಗವಾಗಿ ಬಂತು. ೧೮೯೪ ರಲ್ಲಿ ಇನ್ನೊಂದು ಅಂಕಣವೂ, ೧೯೧೬ ರಲ್ಲಿ ಮೂರನೆಯದೂ ಕಟ್ಟಲಾಯಿತು.

ಮೊದಲಿಗೆ ಮುದ್ರಣಶಾಲೆಯು ಮೂರು ಉಪಶಾಖೆಗಳಿದ್ದವು. ಜೈಲಿನಲ್ಲಿ ಖೈದಿಗಳು ಕೆಲಸ ಮಾಡುತಿದ್ದುದು ಒಂದು. ೧೯೦೭ ರಲ್ಲಿ ಇದು ನಿಂತಿತು. ಇನ್ನೊಂದು ಶಾಖೆ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿತ್ತು. ಮೈಸೂರಿನಲ್ಲಿದ್ದುದು ಮೂರನೆಯದು. ಮೊದಲೆರಡು ಶಾಖೆಗಳು ಈಗ ಇಲ್ಲ. ಮೈಸೂರಿನ ಮುದ್ರಣಶಾಲೆ ೧೮೪೫ ರಲ್ಲಿ ತೆರೆಯಿತು. ಮೊದಲಿಗೆ ಇದು ಜಗನ್ಮೋಹನ ಬಂಗಲೆಯಲ್ಲಿ ಸೇರಿಕೊಂಡಿತ್ತು. ಕೆಲಸ ಹೆಚ್ಚಿದಂತೆ ಅದಕ್ಕೆ ಬೇರೆ ಕಟ್ಟಡಬೇಕಾಯಿತು. ಕುಕ್ಕನಹಳ್ಳಿ ಕೆರೆ ಹಿಂಭಾಗದ Distillery ಕಟ್ಟಡದಲ್ಲಿ ಮೈಸೂರು ಮುದ್ರಣಶಾಲೆಗೆ ಸ್ಥಳ ಸಿಕ್ಕಿತು. ಈಗಲೂ ಈ ಮುದ್ರಾಲಯ ಆ ಸ್ಥಳದಲ್ಲಿಯೇ ಇದೆ.

ಸರಕಾರದ ಮುದ್ರಣಶಾಲೆಯಲ್ಲಿ ಮುದ್ರಣ ಕಲೆಯನ್ನು ಹೇಳಿಕೊಡಲು ಒಂದು ಸ್ಕೂಲು ಸಹ ಇದೆ. ಅಚ್ಚುಕೂಟದ ಕೆಲಸಗಾರರಿಗೂ, ಹೊರಗಿನವರಿಗೂ ಇಲ್ಲಿ ಶಿಕ್ಷಣ ದೊರೆಯುತ್ತದೆ. ಮದರಾಸು ಮೈಸೂರು ಸರಕಾರಗಳು ಏರ್ಪಾಡಿಸುವ ಪರೀಕ್ಷೆಗಳಿಗೆ ಕುಳಿತುಕೊಳ್ಳುವುದಕ್ಕೆ ಬೇಕಾಗುವ ಶಿಕ್ಷಣ ಇಲ್ಲಿ ದೊರೆಯುತ್ತದೆ

ಶ್ರೀ ಏಟ್ಸ್‌ರವರ ನಂತರ ೧೯೧೭ ರಲ್ಲಿ, ಶ್ರೀ ಡಿ. ಬಿ. ರಾಮಚಂದ್ರ ಮೊದಲಿಯಾರರು ಅಧ್ಯಕ್ಷರಾದರು. ಅವರನಂತರ ೧೯೩೩ ರಲ್ಲಿ ತಂದೆ ಅಧ್ಯಕ್ಷರಾಗಿ ನೇಮಿತರಾದರು. ಒಟ್ಟು ಹತ್ತು ವರ್ಷಕಾಲ ತಂದೆ ಈ ಅಧಿಕಾರದಲ್ಲಿದ್ದರು ಇವರಿದ್ದ ಕಾಲದಲ್ಲಿ ಹೊಸ ಹೊಸ ಯಂತ್ರಗಳು ಬಂದವು. ಮುದ್ರಣಶಾಲೆ ಗಣ್ಯಸ್ಥಾನವನ್ನು ಗಳಿಸಿಕೊಂಡಿತು. ತಂದೆ ಅಧ್ಯಕ್ಷತೆ ವಹಿಸಿದ್ದ ಕಾಲದಲ್ಲಿ ಮುದ್ರಣಾಲಯದ ಮುನ್ನಡೆಯನ್ನು ಮುಂದಿನ ಅಧ್ಯಾಯದಲ್ಲಿ ವಿವರಿಸುತ್ತೇನೆ.

## ಮುದ್ರಣಶಾಲೆಯ ಮುನ್ನಡೆ.

೧೯೨೩ ರಿಂದ ಹಿಡಿದು ೧೯೩೪ ರವರೆಗೆ, ಸುಮಾರು ಹನ್ನೊಂದು ವರ್ಷಗಳ ಕಾಲ ತಂದೆ ಮುದ್ರಣಶಾಲೆಯ ಅಧ್ಯಕ್ಷರಾಗಿದ್ದರು. ಈ ಕಾಲದಲ್ಲಿ ಮುದ್ರಣಶಾಲೆ ಒಳ್ಳೆಯ ಹೆಸರನ್ನು ಪಡೆದುಕೊಂಡಿತು. ತಂದೆ ವಿಶೇಷವಾದ ಮನ್ನಣೆಗೆ ಪಾತ್ರರಾದರು ಹೆಚ್ಚಿನ ಗೌರವ ಸಂಪಾದಿಸಿಕೊಂಡರು. ಮೈಸೂರು ಸರಕಾರ ಕೂಡ ತಂದೆ ಸಲ್ಲಿಸಿದ ಸೇವೆಯನ್ನು ಮೆಚ್ಚಿ ಗೆಜಿಟ್‌ನಲ್ಲಿ ನಿರೂಪ ಹೊರಡಿಸಿತು. ಮೈಸೂರು ಜನಜೀವನದಲ್ಲಿ ಹೆಸರಾಂತ ಮಹನೀಯರು ಮುದ್ರಾಲಯದಲ್ಲಿನ ಕೆಲಸದ ಪರ ಮೆಚ್ಚಿಗೆಯ ಮಾತು ಆಡಿದರು. ಮುದ್ರಣಶಾಲೆಯಲ್ಲಿ ನಡೆದ ಕೆಲಸ, ಆ ಕೆಲಸದಲ್ಲಿ ತಂದೆ ವಹಿಸಿದ ಆಸಕ್ತಿ ಇವುಗಳನ್ನು ಪ್ರಸ್ತಾಪಿಸಿ ಬರೆದ ಪತ್ರಗಳಿಂದ ಕೆಲವು ಅಭಿಪ್ರಾಯಗಳನ್ನು ಮಾತ್ರ ಎತ್ತಿಕೊಂಡು ಇಲ್ಲಿ ಕೊಟ್ಟಿದೇನೆ. ತಂದೆಯ ಮೇಧಾಶಕ್ತಿಗೆ, ಹಿರಿಯರಲ್ಲಿ ಅವರು ಗಳಿಸಿಕೊಂಡ ಉತ್ತಮವಾದ ಸ್ಥಾನಕ್ಕೆ ಈ ಅಭಿಪ್ರಾಯಗಳು ನಿದರ್ಶನವಾದಾವೆಂದು ನಂಬಿದ್ದೇನೆ:

**The Chief Secretary to the Government of Mysore.—**

I am desired to communicate to you the Government's appreciation of the good work done by you in connection with the printing work relating to the Reforms recently introduced.

**The Registrar, Mysore University.—**

I am desired to convey the best thanks of the University for the exceedingly expeditious manner in which the printing work of the University was executed. The neat execution of the work has given the University entire satisfaction.

**The "Daily Post" Bangalore, dated 19-2-1926.—**

We are glad to learn that the Committee of Judges appointed for selecting the prize winners in the Calendar competition instituted by Messrs. John Kidd & Co., Printing Ink Manufacturers of London have awarded the first prize of Rs. 150/- to the Mysore Government Art Calendar for 1926 printed at the Mysore Govt. Press, Bangalore.

**Sir K. P. Puttanna Chetty, Kt., C.I.E.—**

I thank you for the Art Calendar kindly sent by you. They are got up in your usual best style and are a credit to the Government Press.

**The Private Secretary to the Dewan.—(1926)**

I am desired by the Dewan to convey to you his appreciation of the manner in which you and your staff have done the work entrusted to you in connection with the printing of the Dewan's Speeches. The Dewan is much pleased with the neat and accurate execution of the work, within the short time at your disposal and wishes me to convey his thanks to you and your staff for the same.

**The Editor, Mysore Economic Journal who edited the Dewan's Speeches.—**

I would invite the Dewan Saheb's attention to the indefatigable manner in which Mr. Puttaiya,

and his staff have worked for bringing out the book in good form and within the short time at their disposal. To bring out a book covering some 1250 pages within five or six weeks time is no small exertion. I have some idea of what printing work is and I can testify to the Commendable prompt manner in which Mr. Puttaiya and his good men have responded to my demands on them.

**The Asst. Supt., Govt. Branch Press, Mysore.—**

I am wonder struck that you have been able to get out a volume of 1300 pages in five weeks. This is indeed marvellous. The get up of the book is also very neat and I must heartily congratulate you on this achievment.

**Rajamanthrapravina Mr. K. Matthan.—**

The book (Sir Albion Banerji's Speeches) is exceedingly well got up and I must congratulate you on the high quality of the work you have been able to execute in the Government Press.

**The Manager, Wesleyan Mission Press, Mysore.—**

The Viceroy's hand-book is a particularly nice piece of work and I have great pleasure in complimenting you on such a nice production.

**Sir Charles Todhunter, K.C.S.I.—**

Many thanks for the splendid way in which you have helped us throughout (the Viceroy's visit). I do not know what we should have done if you had not been able to put us up the various editions of the detailed programme with the promptitude you did. I am most grateful not only for them but also for your help in connection with the Menus and many other matters.

**Sir Charles Todhunter. K.C.S.I.—**

I have received and read with much interest your most comprehensive report on your visit to the presses in Bombay and Hyderabad. It was a most extensive tour and I am sure you have derived full benefit from it all. I am very glad you able to say that with the aid of the additions and improvements you suggest, you will be able to make the Mysore Government Press the equal of any in the Country.

**Sir M. Visveswaraya, K.C.S.I.**

I feel I should send you a personal letter of thanks for the trouble and interest you took in printing the Report and Evidence of the Bangalore Disturbances Enquiry Committee. You are always ready to receive suggestions and to add your own

whenever you thought they would improve the quality of the work. I have informed Government of the help you rendered to the Committee in a separate letter.

With warm thanks and best wishes for your success.

**G. O. No. G. 12564-5/P. & S. 70-28-4, dated 16th April 1929.—**

Government realise that considerable stress and strain must have devolved on the Superintendent and the entire staff in supervising the work (Bangalore Disturbances Evidence) and getting it through with commendable promptitude. They therefore wish to place on record their appreciation of the good work turned out by the Superintendent and his staff in this direction.

**Dr. W. S. Urquhart, Vice-Chancellor of the Calcutta University. Reviewing the edition of the Mysore Tribes & Castes, Vol. I.**

In the beauty of its illustration and printing, it is a credit to the press from which it has issued.

**Mr. A. Padmanabha Iyer of Trivandrum.—**

Mysore Gazetteer, the Castes and Tribes, etc will do credit to an English firm of Printers and the binding also is equally excellent. The whole

get up is simply admirable. Every publication is an admirable specimen of the high and finished style of printing which is a great compliment to Indian talent and Indian skill.

**Mr. M. Venkatesha Iyengar, Census Supt., in the Preface to Census Report of 1931 Vol. I.—**

Mr. B. Puttaiya, Superintendent, Government Printing, has done all the printing required by the Census Department from the beginning with an interest and consideration which I cannot sufficiently praise.

## ಸರಕಾರದ ಕೆಲಸದಿಂದ ನಿವೃತ್ತಿ.

೧೯೩೪ ರ ಮೇ ತಿಂಗಳು ತಂದೆ ಸರಕಾರದ ಕೆಲಸದಿಂದ ಬಿಡುಗಡೆ ಹೊಂದಿದರು. ಪೋಲೀಸು ಗುಮಾಸ್ತರಾಗಿ ಅವರು ಮೊದಲು ಕೆಲಸಕ್ಕೆ ಸೇರಿದ್ದು ೧೯೦೨ ರಲ್ಲಿ. ಹೀಗೆ ಒಟ್ಟು ಮೂವತ್ತೆರಡು ವರ್ಷಗಳ ಕಾಲ ಸರಕಾರದ ಸೇವೆಯಲ್ಲಿದ್ದರು. ಈ ಸೇವೆಯ ಕೊನೆಯ ಹತ್ತು ವರ್ಷಗಳನ್ನು ಮುದ್ರಣಶಾಲೆಯ ಅಧ್ಯಕ್ಷರಾಗಿ ಕಳೆದರು ಇಲ್ಲಿಗೆ ಅವರ ಜೀವನದ ಒಂದು ಅಂಕ ಮುಗಿಯಿತು.

ದಿನ ಆಫೀಸಿಗೆ ಹೋಗುವುದು, ಬೆಳಗಿನಿಂದ ಸಂಜೆಯವರೆಗೆ ಅಲ್ಲಿನ ಕೆಲಸ ಕಾರ್ಯಗಳಲ್ಲಿ ಸಂಪೂರ್ಣವಾಗಿ ಮಗ್ನರಾಗುವುದು, ಮನೆಗೆ ಬರುವುದು, ಈ ಬಗೆಯ ಒಂದೇ ರೀತಿಯ ದಿನಚರಿಯನ್ನಿಟ್ಟು, ಜೀವನದ ಬಹುಭಾಗವನ್ನು ಕಳೆದವರು, ಕೆಲಸದಿಂದ ನಿವೃತ್ತಿ ಹೊಂದಿದ ಮಾರನೆಯ ದಿನ ಏನುಮಾಡಲೂ ತೋರದೆ, ಕಾಲ ಕಳೆಯುವುದು ಹೇಗೆ ಎನ್ನುವುದೇ ತಿಳಿಯದೆ, ಮನಸಿನ ಲವಲವಿಕೆ ಹೋಗಿ ಶರೀರ ಕುಗ್ಗಿ ಅತಿ ಮುಪ್ಪಾಗಿ ತೋರುವುದುಂಟು. ಸರಕಾರದ ಸೇವೆಯಲ್ಲಿರುವವರೆಗೂ ಅತಿ ದರ್ಪದಿಂದ ಠೀವಿಯಿಂದ ಮೆರೆದವರು, ಕೆಲವರು, ನಿವೃತ್ತಿ ಹೊಂದಿದ ಮರುದಿನವೆ ಖಿನ್ನವದನರಾಗಿರುವುದನ್ನೂ. ಪುರಾಣಶ್ರವಣವನ್ನೆ ತಮ್ಮ ಜೀವನದ ಏಕ ಮಾತ್ರ ಸಾಧನೆಯಾಗಿಟ್ಟುಕೊಂಡಿರುವುದನ್ನೂ ನಾನು ಕಂಡಿದ್ದೇನೆ. ಇಂಥ ವರ ಪಂಕ್ತಿಗೆ ತಂದೆ ಸೇರಿರಲಿಲ್ಲ. ಸರಕಾರದ ಸೇವೆಯಲ್ಲಿರುವಾಗ ಮನೆ ಆಫೀಸು ಇವೆರಡನ್ನೆ ತಮ್ಮ ಕಾರ್ಯರಂಗ ಮಾಡಿಕೊಂಡಿರಲಿಲ್ಲ. ಸಾಮಾ ಜಿಕ ಸಂಘಗಳೆಲ್ಲದರ ಕಾರ್ಯಕಾರೀ ಮಂಡಲದಲ್ಲಿದ್ದರು. ಮುಖ್ಯವಾದೊಂದು ಸಂಘದ ಗೌರವ ಕಾರ್ಯದರ್ಶಿಯಾಗಿ ದುಡಿಯುತ್ತಿದ್ದರು. ಬೆಂಗಳೂರು ನಗರದ ಮುಕ್ಕಾಲುವಾಸಿ ಸಹಕಾರ ಸಂಘಗಳ ಸದಸ್ಯರಾಗಿ, ಕೆಲವದರ ಪಂಚಾಯಿತದಾರರಾಗಿ, ಕಾರ್ಯದರ್ಶಿಯಾಗಿ, ಉಪಾಧ್ಯಕ್ಷರಾಗಿ ಕೆಲಸಮಾಡು ತ್ತಿದ್ದರು. ಬೆಳಿಗ್ಗೆ ಎಂಟರಿಂದ ಹನ್ನೆರಡು, ಮಧ್ಯಾಹ್ನ ಎರಡರಿಂದ ಆರು ಗಂಟೆಯವರೆಗಿನ ಕಾಲವೆಲ್ಲ ಮುದ್ರಣಶಾಲೆಗೆ ಮೀಸಲಾಗಿದ್ದರೆ, ಸಾಯಂ ಕಾಲವೆಲ್ಲ ಸಾರ್ವಜನಿಕ ಸಂಸ್ಥೆಗಳ ಸೇವೆಗೆ ಸಲ್ಲುತ್ತಿತ್ತು. ಆಫೀಸಿನಿಂದ

ನೆಟ್ಟಗೆ ಅವರು ಮನೆಗೆ ಬರುತಿದ್ದುದು ಅಪರೂಪ. ನಗರ್ತರಪೇಟೆ, ಗಾಣಿಗರ ಪೇಟೆಯಲ್ಲಿ ಬಡಮಕ್ಕಳಿಗೆ ಹಾಲನ್ನು ಉಚಿತವಾಗಿ ಕೊಡುವ, ಅವುಗಳಿಗೆ ಸ್ನಾನಮಾಡಿಸಿ ಆರೋಗ್ಯ ನೋಡಿಕೊಳ್ಳುವ ಸಂಸ್ಥೆಯಲ್ಲಿ ಕೆಲಸವಿರುತಿತ್ತು. ಅರಳೇಪೇಟೆಯ ರಾತ್ರಿ ಶಾಲೆಯೊಂದರಲ್ಲಿ ವಯಸ್ಕರಿಗೆ ಶಿಕ್ಷಣ ನಡೆಯು ತಿತ್ತು. ಸಿವಿಕ್ ಸಂಘಕ್ಕೆ, ಸಂಘ ಕೈಗೊಳ್ಳುವ ಸೇವಾಕಾರ್ಯಗಳಿಗೆ ಹಣ ಒದಗಿಸಲು ಹಣವಂತರಾದ ಮಹನೀಯರನ್ನು ಕಾಣಬೇಕಾಗಿತ್ತು. ಸಂಘದ ಆಶ್ರಯದಲ್ಲಿ ವಾರಕ್ಕೊವ್ಮೆಯಾದರೂ ಉಪನ್ಯಾಸವನ್ನು ಏರ್ಪಡಿಸಬೇಕಾ ಗಿತ್ತು ಉಪನ್ಯಾಸಕರನ್ನು ಹುಡುಕಿ ಅವರಿಂದ ಉಪನ್ಯಾಸ ಕೊಡಿಸುವು ದಲ್ಲದೆ, ಸಭಿಕರೂ ಹೆಚ್ಚು ನೆರೆಯುವಂತೆ ಮಾಡಿ ಉಪನ್ಯಾಸದಿಂದ ಹೆಚ್ಚಿನ ಪ್ರಯೋಜನ ದೊರಕುವಂತೆ ಪ್ರಚಾರಮಾಡಬೇಕಾಗಿತ್ತು. Y. M.C.A. ಮಿಥಿಕ್ ಸೊಸೈಟಿ. ರೆಡ್‌ಕ್ರಾಸ್ ಸೊಸೈಟಿ, ಈ ಸಂಸ್ಥೆಗಳ ಕೆಲಸ ಬೇರೆ ಇರು ತಿತ್ತು. ಸಂತೋಷ ಕೂಟಗಳು, ಉಪನ್ಯಾಸಗಳು, ಸತ್ಕಾರ ಸಮಾರಂಭ ಗಳು ಇವು ಇದ್ದೇ ಇರುತಿದ್ದುವು. ದಿನದಿನ ಹೆಚ್ಚುತ್ತಿದ್ದ ಸ್ನೇಹಿತ ವರ್ಗ ದವರೊಡನೆ ಸಂಪರ್ಕವಿಟ್ಟುಕೊಳ್ಳಬೇಕಾಗಿತ್ತು. ಸತತವೂ ಯಾವುದಾದ ರೊಂದು ಕೆಲಸವನ್ನಿಟ್ಟುಕೊಂಡು ಅದರಲ್ಲಿಯೇ ಮಗ್ನರಾಗಿರುತಿದ್ದ ಇಂಥ ವರಿಗೆ ಬಿಡುವೆಲ್ಲಿ. ತಂದೆ ಮನೆಗೆ ಹಿಂತಿರುಗುವ ವೇಳೆಗೆ ಒಂಭತ್ತು ಹೊಡೆದಿರುತಿತ್ತು. ರಾತ್ರಿ ಬಹುಹೊತ್ತು ಎದ್ದಿರುತಿದ್ದರು. ಅವರ ಬರ ವಣಿಗೆ ಓದುಗಾರಿಕೆ ಎಲ್ಲ ಈ ವೇಳೆಯಲ್ಲಿ ನಡೆಯಬೇಕಾಗಿತ್ತು. ಸಾಹಿತ್ಯ ದಲ್ಲಿದ್ದ ಅಭಿರುಚಿಯನ್ನು ಈ ವೇಳೆಯಲ್ಲಿ ಈಡೇರಿಸಿಕೊಳ್ಳಬೇಕಾಗಿತ್ತು.

ಸರಕಾರದ ನೌಕರರಾಗಿದ್ದುಕೊಂಡೂ ಈ ಬಗೆಯ ಬಹುತರದ ಚಟು ವಟಿಕೆಯಲ್ಲಿ ತೊಡಗಿದ್ದ ತಂದೆಗೆ ನಿವೃತ್ತಿ ಹೊಂದಿದ ಮರುದಿನ ಅಂಥ ಹೆಚ್ಚಿನದೇನೂ ಬದಲಾವಣೆ ಆದಂತೆ ತೋರಲಿಲ್ಲ. ಅದುವರೆಗೂ ಒಮ್ಮುಖ ವಾಗಿ ನಡೆದಿದ್ದ ಜೀವನ ಬಹುಮುಖವಾಯಿತು. ಕಾರ್ಯಕ್ಷೇತ್ರ ವಿಶಾಲ ವಾಯಿತು. ಅವರು ನಿವೃತ್ತಿ ಹೊಂದಿದ ಕಾಲಕ್ಕೆ 'ವಿಶ್ವಕರ್ಣಾಟಕ' ವಾರಪತ್ರಿಕೆ ಅವರ ಚಿತ್ರವನ್ನು ಮುಖಪತ್ರದ ಮೇಲೆ ಮುದ್ರಿಸಿ "ಸಾರ್ವ ಜನಿಕ ಜೀವನಕ್ಕವರು ದೊರೆತರು. ಒಂದು ಅಪೂರ್ವ ಲಾಭ" ಎಂದು

ಬರೆಯಿತು. ವಿಶ್ವಕರ್ನಾಟಕ ಬರೆದಂತೆಯೇ ತಂದೆ ಬೆಂಗಳೂರಿನ ಸಾರ್ವಜನಿಕ ಜೀವನದಲ್ಲಿ ಸಂಪೂರ್ಣವಾಗಿ ಬೆರೆತರು. ನಿವೃತ್ತಿ ಹೊಂದಿದಮೇಲೆ ತಂದೆ ಹತ್ತು ವರ್ಷಕಾಲ ಜೀವಿಸಿದ್ದರು. ಈ ಹತ್ತುವರ್ಷಗಳೂ ಅವರಿಗೆ ಸುಖವಾಗಿ ಕಳೆದುಹೋದಂತೆ ಭಾಸವಾಗಿರಬೇಕು. ಯೋಚಿಸಲು ಕೂಡ ಅವಕಾಶವಿಲ್ಲದಂತೆ ಅವರು ಬಹುತರದ ಕಾರ್ಯಕಲಾಪಗಳಲ್ಲಿ ಮಗ್ನರಾಗಿ ಹೋಗಿದ್ದರು.

ಇಂಗ್ಲಿಷ್ ಜ್ಞಾನಿ ಬರ್ನಾರ್ಡ್ ಷಾ ತನ್ನ ನಾಟಕವೊಂದರ ಪೀಠಿಕೆಯಲ್ಲಿ ಸಾರ್ಥಕ ಜೀವನದ ಸ್ವರೂಪವನ್ನು ಚಿತ್ರಿಸುತ್ತ. This is the true joy in life. The being used for a purpose recognised by yourself as a mighty one; the being thoroughly worn out before you are thrown out on the scrapheap; the being a force of nature instead of a feverish selfish little clod of ailments and grievances complaining that the world will not devote itself to making you happy. ಎಂದು ಹೇಳಿದ್ದಾನೆ.

ಇಂಥದೊಂದು ಆದರ್ಶವನ್ನು ಮುಟ್ಟಲು ತಂದೆ ಪ್ರಯತ್ನಿಸಿದ್ದರು. ತಮ್ಮ ಮನಸಿಗೆ ನೆಮ್ಮದಿಯನ್ನು, ಶಾಂತಿಯನ್ನು, ಆನಂದವನ್ನು ಕೊಡುವಂಥ ಕೆಲಸಗಳನ್ನು ಆಯ್ದುಕೊಂಡಿದ್ದರು. ಆ ಕೆಲಸಗಳಲ್ಲಿ ಮಗ್ನರಾಗಿದ್ದರು. ಅವರು ಅಷ್ಟಾಗಿ ಖಾಯಿಲೆ ಮಲಗಿದ ಜ್ಞಾಪಕವಿಲ್ಲ. ಒಂದೆರಡು ಬಾರಿ ಖಾಯಿಲೆ ಬಿದ್ದಿದ್ದರೂ ಅವರೇ ಹೇಗೊ ಚೇತರಿಸಿಕೊಂಡು, ತಾವೇ ಆಸ್ಪತ್ರೆಗೆ ಹೋಗಿ ವಾಸಿಮಾಡಿಕೊಂಡು ಬಂದಿದ್ದರು. ತಮ್ಮ ಕಷ್ಟವೇನೇ ಇರಲಿ ಅದನ್ನು ತಾವೇ ತಾಳಿಕೊಂಡರು ಅವರ ಸುತ್ತಲಿನವರಾದ ನಮಗೆ ಜೀವನ ಕಹಿಯಾಗದಂತೆ ನೋಡಿಕೊಂಡರು. ಇನ್ನೊಬ್ಬರಿಗೆ ಹೊರೆಯಾಗಿ ಅವರು ಎಂದೂ ಬಾಳಲಿಲ್ಲ. ಅವರಿಗೆ ಖಾಯಿಲೆ ಬಂದಿತ್ತೆನ್ನುವುದು ಅವರಿಗೆ ಖಾಯಿಲೆ ವಾಸಿಯಾದಮೇಲೆಯೇ ನಮಗೆ ತಿಳಿಯುತಿತ್ತು. ಮನೆಯವರು ನಾವು ಯಾರೂ ಅವರ ಸೇವೆ ಮಾಡಿದಹಾಗೆ ನನಗೆ ನೆನಪಿಲ್ಲ. ಮಕ್ಕಳಾದ

ನಾವು ಕ್ಲೇಶಪಟ್ಟಾಗ, ರೋಗಬಂದು ನಮ್ಮನ್ನು ಕಾಡಿದಾಗ, ಅತಿಯಾದ ವಾತ್ಸಲ್ಯದಿಂದ ಹತ್ತಿರ ಕುಳಿತು ನೋಡಿಕೊಂಡ ತಂದೆಯ ಚಿತ್ರ ಮಾತ್ರ ಮೇಲಿಂದಮೇಲೆ ನನ್ನ ನೆನಪಿಗೆ ಬರುತ್ತದೆ. ಕಷ್ಟಕಾಲ ಬಂದಿದ್ದಾಗ ಕೂಡ ಇನ್ನೊಬ್ಬರ ಆಶ್ರಯವನ್ನು ಬೇಡಹೋಗಲಿಲ್ಲ. ಅವರ ಮನೋಧರ್ಮಕ್ಕೆ ತಕ್ಕಂತೆಯೇ ಅವರ ಜೀವನವನ್ನು ಭಗವಂತ ಸುಗಮವಾಗಿ ಮಾಡಿಕೊಟ್ಟ. ತಮ್ಮ ಇಷ್ಟದ ಕೆಲಸದ ಸಂಧ್ಯದಲ್ಲಿರುವಾಗಲೆ ಸುಖಮರಣ ಕೊಟ್ಟ. ನೋಯಲಿಲ್ಲ, ನರಳಲಿಲ್ಲ, ಯಾರಿಗೂ ಕಷ್ಟಕೊಡಲಿಲ್ಲ. ದೂರದ ಊರಿಗೆ ಹೋದವರು ಸದ್ದಿಲ್ಲದೆ ಮಾಯವಾದರು. ಚಿರಕಾಲ ಅಗಲಿ ಹೊರಟು ಹೋದರು. ಅವರ ಜೀವನದ ಕೊನೆಯ ಹತ್ತು ವರ್ಷಗಳ ಪರಿಚಯವನ್ನು ಮುಂದಿನ ಪುಟಗಳಲ್ಲಿ ಮಾಡಿಕೊಡಲು ಪ್ರಯತ್ನಪಟ್ಟಿದೇನೆ.

## ಕೆ. ಹೆಚ್. ರಾಮಯ್ಯನವರ ಮರಣ.

೧೯೩೦ ನೆ ಇಸವಿ ಅಕ್ಟೋಬರ್ ತಿಂಗಳು ಐದನೆಯ ತಾರೀಖು ಶ್ರೀ ಕೆ. ಹೆಚ್. ರಾಮಯ್ಯನವರು ಅಕಸ್ಮಾತ್ತಾಗಿ ತೀರಿಹೋದರು.

ಒಕ್ಕಲಿಗರ ಸಂಘದ ಮೊದಲನ್ನು, ಅದನ್ನು ಮುಂದಕ್ಕೆ ತರಲು ಹೆಣಗಿದ ರಾಮಯ್ಯನವರ ಜೀವನದ ಸೂಕ್ಷ್ಮ ಪರಿಚಯವನ್ನು ಹಿಂದಿನ ಅಧ್ಯಾಯವೊಂದರಲ್ಲಿ ಮಾಡಿಕೊಟ್ಟಿದೇನೆ. ಒಕ್ಕಲಿಗರನ್ನು ಮುಂದಕ್ಕೆ ತಂದ ಕೀರ್ತಿ ಎಲ್ಲ ರಾಮಯ್ಯನವರಿಗೆ ಸಲ್ಲಬೇಕಾಗಿದೆ. ಅವರಂಥ ಪ್ರಭಾವ ಶಾಲಿಯಾದ ವ್ಯಕ್ತಿ ಇಲ್ಲದಿದ್ದರೆ ಸಂಘ ತಲೆಯೆತ್ತುತ್ತಿರಲಿಲ್ಲ. ಅಷ್ಟೊಂದು ಜನ ಸಂಘದಡಿಯಲ್ಲಿ ನಿಂತು ಸಾಂಘಿಕಶಕ್ತಿಯನ್ನು ಮೆರೆಯುತ್ತಿರಲಿಲ್ಲ. ಗೌಡರೆನ್ನಿಸಿಕೊಳ್ಳುವುದು ಹೆಮ್ಮೆಯ ವಿಷಯ ಎಂದು ತಿಳಿಯುತ್ತಿರಲಿಲ್ಲ.

ರಾಮಯ್ಯನವರಿಗೂ ನನ್ನ ತಂದೆಗೂ ಒಕ್ಕಲಿಗರ ಸಂಘವನ್ನು ಅದೆಷ್ಟೋ ರೀತಿಯಲ್ಲಿ ಮುಂದೆ ತರಬೇಕೆನ್ನುವ ಆಸೆ ಇತ್ತು. ತಂದೆ ಇಂಗ್ಲೆಂಡಿಗೆ ಹೋಗಿ ಅಲ್ಲಿ ತಮ್ಮ ಮನಸನ್ನು ಸೂರೆಗೊಂಡ ಏನೊಂದು ಕಾರ್ಯ ಕಂಡರೂ, ಇಂಥ ಕಾರ್ಯವನ್ನು ನಮ್ಮ ಸಂಘದಲ್ಲಿಯೂ ಕೈಗೊಳ್ಳ ಬೇಕು ಎಂದು ಹಂಬಲಪಡುತ್ತಿದ್ದರು. ಅವರ ಮನಸಿಗೆ ತೋರಿದ ಭಾವನೆ ಗಳನ್ನು ಯಾವರೀತಿ ರಾಮಯ್ಯನವರಿಗೆ ಪತ್ರದಮೂಲಕ ತಿಳಿಸುತ್ತಿದ್ದರು ಎನ್ನುವುದನ್ನು ಹಿಂದೆಯೇ ದೀರ್ಘವಾಗಿ ಪ್ರಸ್ತಾಪಮಾಡಿದ್ದೇನೆ. ರಾಮಯ್ಯ ನವರು ಕೂಡ ಇಂಗ್ಲೆಂಡಿಗೆ ಹೋಗಿಬಂದರು. ಒಕ್ಕಲಿಗರ ಸಂಘಕ್ಕಾಗಿ ದುಡಿದ ಈ ಇಬ್ಬರೂ ಇಂಗ್ಲೆಂಡಿಗೆ ಹೋಗಿ ಹೊಸನೋಟ, ಹೊಸ ಅಭಿ ಪ್ರಾಯಗಳನ್ನು ಕಂಡು ತಿಳಿದು ಬಂದರೂ ಸಂಘದ ಆಶ್ರಯದಲ್ಲಿ ಯಾವ ಹೊಸ ಕಾರ್ಯವೂ ಹುಟ್ಟಿಕೊಳ್ಳಲಿಲ್ಲ. ಮೊದಲಿದ್ದ ಪತ್ರಿಕೆಯೇ ಇತ್ತು, ಅದೇ ಅಚ್ಚುಕೂಟವಿತ್ತು, ಅದೇ ವಿದ್ಯಾರ್ಥಿನಿಲಯವಿತ್ತು, ಇವು ಹೊರತು ಹೊಸವು ಯಾವುವೂ ಹುಟ್ಟಿಕೊಳ್ಳಲಿಲ್ಲ ಸಂಘ ಹಿಂದೆ ಮಾಡಿದುದೆಷ್ಟೋ ಅಷ್ಟೆ. ಆ ಕೆಲಸ ಹೇಳಿಕೊಂಡೇ ಕಾಲ ಹಾಕುತ್ತಿತ್ತು. ತಂದೆಯೂ ರಾಮಯ್ಯನವರೂ ಇಟ್ಟುಕೊಂಡಿದ್ದ ಹಂಬಲಗಳೆಲ್ಲ ಹಂಬಲಾಗಿಯೇ ಉಳಿ

ದುವು· ಹೀಗಾಗಲು ಕಾರಣವೇನೊ ಅರಿಯೆ, ಸರಕಾರದ ನೌಕರರಾಗಿ ಕೆಲಸಮಾಡುತಿದ್ದರಾದ್ದರಿಂದ ಸಂಘಕ್ಕಾಗಿ ಸೇವೆಸಲ್ಲಿಸಲು ಸಾಧ್ಯವಾಗದೆ ಹೋಯಿತೊ ಏನೊ.

ತಂದೆ ತಾವಾಗಿ ಮುಂದೆ ನುಗ್ಗಿ ಕೆಲಸಮಾಡುವ ಸ್ವಭಾವದವರಾಗಿರಲಿಲ್ಲ. ಹಿಂದೆ ನಿಂತು ತೆರೆಯ ಮರೆಯಲ್ಲಿ ಕೆಲಸಮಾಡುವುದೇ ಅವರಿಗೆ ಒಪ್ಪಿಗೆಯಾಗಿತ್ತು. ರಾಮಯ್ಯನವರ ಪ್ರಕೃತಿ ಇದಕ್ಕೆ ತೀರ ವಿರುದ್ಧ. ಅವರು ಎಲ್ಲಿ ಹೋಗಲಿ ಜನರ ಮುಂದಾಳು. ನಾಯಕಸ್ಥಾನ ಹೊರತು ಅದರ ಕೆಳಮಟ್ಟದ ಸ್ಥಾನವನ್ನು ಅವರು ಅರಿಯರು. ನಾಯಕನಿಗಿರಬೇಕಾದ ಎಲ್ಲ ಲಕ್ಷಣ ಅವರಲ್ಲಿತ್ತು. ದೀರ್ಘವಾದ ದೇಹ, ತೇಜಸ್ವಿಯಾದ ಮುಖ, ಧೀರಗಂಭೀರ ಧ್ವನಿ ಇವುಗಳನ್ನ ದೈವದತ್ತವಾಗಿ ಪಡೆದುಕೊಂಡು ಬಂದಿದ್ದರು. ಉಚ್ಚ ಕಂಠದಲ್ಲಿ ತಮ್ಮ ಪ್ರೀತಿಯ ಶ್ಲೋಕವಾದ

ಕ್ಷುಕ್ಷಾಮೋಽಪಿ, ಜರಾಕೃಷೋಽಪಿ, ಶಿಥಿಲಪ್ರಾಯೋಽಪಿ ಕಷ್ಟಾಂದಶಾ
ಮಾಪನ್ನೋಽಪಿ ವಿಪನ್ನದೀಧಿತಿರಪಿ ಪ್ರಾಣೇಷು ನಶ್ಯತ್ಸ್ವಪಿ
ಮತ್ತೇಭೇಂದ್ರ ವಿಭಿನ್ನ ಕುಂಭಕವಲಗ್ರಾಸೈಕ ಬದ್ಧ ಸ್ಪೃಹಃ
ಕಿಂ ಜೀರ್ಣಂ ತೃಣಮತ್ತಿಮಾನ ಮಹತಾಂ ಅಗ್ರೇಸರಃ ಕೇಸರೀ.

ಎನ್ನುವುದನ್ನು ಸಭೆಯಲ್ಲಿ ಹಾಡಿದರೆ ಮೃಗರಾಜನ ಗರ್ಜನೆ ಅರಣ್ಯದಲ್ಲಿ ಯಾವರೀತಿ ಮೊಳಗುವುದೋ ಅದೇರೀತಿ ಅವರ ಧ್ವನಿ ಮೊಳಗಿ ಸಭಿಕರನ್ನು ರೋಮಾಂಚಗೊಳಿಸುತಿತ್ತಂತೆ.

ತಂದೆ ಇಂಗ್ಲೆಂಡಿಗೆ ಹೋದಾಗ ತಮ್ಮ ಅನುಭವವನ್ನೆಲ್ಲ ಚಿತ್ರಿಸಿ ಬರೆದ ಕಾಗದಗಳು - ಕಾಗದಗಳಲ್ಲ ಪ್ರಬಂಧಗಳು – ರಾಮಯ್ಯನವರ ಮನಸಿನಲ್ಲೂ ವಿದೇಶ ನೋಡಬೇಕು, ಅಲ್ಲಿನ ಸ್ಥಿತಿಗತಿಗಳನ್ನು ಸ್ವಂತವಾಗಿ ತಿಳಿಯಬೇಕು ಎನ್ನುವ ಇಷ್ಟ ಹುಟ್ಟಿಸಿತೆಂದು ತೋರುತ್ತದೆ. ಅವರು ಇಂಗ್ಲೆಂಡಿಗೆ ಒಮ್ಮೆ ಹೋಗಿಯೇ ಬರಬೇಕೆಂದು ಸಂಕಲ್ಪಮಾಡಿಕೊಂಡರು. ಪ್ರಜೆಗಳಿಗೆ ಬೇಕಾಗಿದ್ದು ಸರಕಾರದಲ್ಲೂ ಗಣ್ಯಸ್ಥಾನ ಪಡೆದುಕೊಂಡಿದ್ದ ರಾಮಯ್ಯನವರಿಗೆ ವಿದೇಶಕ್ಕೆ ಹೋಗಿ ಬರುವ ಅವಕಾಶವನ್ನು ದೊರಕಿಸಿ

ಕೊಳ್ಳುವುದೇನೂ ಕಷ್ಟವಾಗಲಿಲ್ಲ. ೧೯೧೩ ರಲ್ಲಿ ಸರ್. ಎಂ. ವಿಶ್ವೇಶ್ವರಯ್ಯ ನವರು ವೇತನವನ್ನು ದೊರಕಿಸಿಕೊಟ್ಟು ಇವರನ್ನು ವಿದೇಶಕ್ಕೆ ಕಳುಹಿಸಿದರು. ಮೂರು ವರ್ಷ ಕಾಲ ವ್ಯಾಸಂಗಮಾಡಿ ರಾಮಯ್ಯನವರು Bar-at-law ಆಗಿ ಸ್ವದೇಶಕ್ಕೆ ಮರಳಿ ಬಂದರು. ಸರಕಾರದ ವೇತನ ಪಡೆದು ವ್ಯಾಸಂಗ ಮಾಡಿದ್ದರಾದಕಾರಣ ಹಿಂದಕ್ಕೆ ಬಂದಮೇಲೆ ಸರಕಾರದ ನೌಕರರಾಗಿಯೇ ಉಳಿದರು. ಮೊದಲು ವ್ಯಾಪಾರ ಇಲಾಖೆಯಲ್ಲಿಯೂ ಆಮೇಲೆ ಪರಸ್ಪರ ಸಹಾಯಕ ಸಂಘಗಳ ರಿಜಿಸ್ಟ್ರಾರರಾಗಿಯೂ ಕೆಲಸಮಾಡಿದರು. ಸರಕಾರದ ಸೇವೆ ಒಪ್ಪಿಗೊಂಡುದರ ಸಲುವಾಗಿಯೊ ಏನೊ ಸಂಘದ ಸೇವೆಯ ಕಡೆ ಹೆಚ್ಚು ಗಮನ ಕೊಡಲಾಗಲಿಲ್ಲ. ನಮ್ಮ ತಂದೆಯೂ ಅಷ್ಟೆ. ರಾಮಯ್ಯ ನವರೂ ಅಷ್ಟೆ. ಸಂಘದ ಚಟುವಟಿಕೆಯೂ ಕಮ್ಮಿಯಾಯಿತು. ವಾರ್ಷಿಕ ಸಮ್ಮೇಳನಗಳು ತಮ್ಮ ಮೊದಲ ಕಳೆಯನ್ನು ಕಳೆದುಕೊಂಡವು. ಸಂಘದ ಪತ್ರಿಕೆ ಜನ ಸುಧಾರಿಸಿದಂತೆ ತಾನೂ ಬದಲಾಯಿಸದೆ ಹಿಂದಿನಂತೆಯೇ ಇದ್ದು ಜನದ ಮನ್ನಣೆಯನ್ನು ಕಳೆದುಕೊಳ್ಳುತ್ತ ಹೋಯಿತು. ವಿದ್ಯಾರ್ಥಿ ಗಳ ಸಂಘ ಮಾತ್ರ ರಾಮಯ್ಯನವರ ನೇತೃತ್ವದಲ್ಲಿ ಚೆನ್ನಾಗಿ ಕೆಲಸಮಾಡು ತಿತ್ತು.

ರಾಮಯ್ಯನವರ ಸರಳ ಮುಗ್ಧ ಸ್ವಭಾವ, ನಿಷ್ಕಪಟ ಮನಸ್ಸು, ರಾಜಮನೆತನದಲ್ಲಿದ್ದ ಭಕ್ತಿ, ಇವು ಅವರನ್ನು ಶ್ರೀಮದ್ಯುವರಾಜರ ಆಪ್ತ ರನ್ನಾಗಿ ಮಾಡಿದ್ದುವು. ಯುವರಾಜರು ೧೯೩೬ ರಲ್ಲಿ ವಿದೇಶ ಪ್ರಯಾಣ ಮಾಡಿದಾಗ ರಾಮಯ್ಯನವರನ್ನೂ ಒಂದಿಗೆ ಕರೆದುಕೊಂಡು ಹೋದರು. ಆರು ತಿಂಗಳು ದೇಶ ವಿದೇಶಗಳನ್ನು ಸುತ್ತಿ ಉತ್ಸಾಹಿಗಳಾಗಿ, ನವ ತರುಣರಾಗಿ, ಬುದ್ಧಿ ಮೊನೆಗೊಂಡು, ರಾಮಯ್ಯನವರು ಸ್ವದೇಶಕ್ಕೆ ಹಿಂತಿರುಗಿ ಬಂದರು. ಹಿಂದಿರುಗಿದ ಮೇಲೆ ಅವರು ಅಲ್ಲಲ್ಲೆ ಕೊಟ್ಟ ಉಪನ್ಯಾಸಗಳು ಇನ್ನೂ ಕೆಲವರ ಮನಸ್ಸಿನಲ್ಲಿ ಅಂಕಿತವಾಗಿರಬೇಕು. ಆದರೆ ಅವರ ಉಪ ನ್ಯಾಸಗಳನ್ನು ಬಹುಕಾಲ ಕೇಳುವ, ಅವರಿಂದ ಇನ್ನೂ ಬಹು ಬಗೆಯ ಸೇವೆಯನ್ನು ಕೈಗೊಳ್ಳುವ ಪುಣ್ಯ ದೇಶಕ್ಕಿಲ್ಲವಾಯಿತು. ತಿಳಿಯದ ಬೇನೆ ಯೊಂದು ಬಂದು ಕಣ್ಣುಮುಚ್ಚಿ ತೆರೆಯುವುದರೊಳಗಾಗಿ ಅವರ ಪ್ರಾಣ

ವನ್ನು ಹಾರಿಸಿಕೊಂಡು ಹೊರಟು ಹೋಯಿತು. ಹಿಂದಿನ ಸಂಜೆ ಮೈಸೂರಿನಲ್ಲಿ ಅವರ ಸಿಂಹ ಧ್ವನಿಯನ್ನು ಕೇಳಿದವರಿಗೆ ರಾಮಯ್ಯನವರ ನಿಧನದ ಸುದ್ದಿಯನ್ನು ನಂಬುವುದೇ ಕಷ್ಟವಾಯಿತು, ಸುದ್ದಿ ಬಂದ ರಾತ್ರಿ ಕಟ್ಟಿರುಳಿನಲ್ಲಿ ತಂದೆ ಏನೋ ನಿಧಿಯನ್ನು ಕಳೆದುಕೊಂಡವರಂತೆ ದೀನರಾಗಿ ದುಃಖಿಗಳಾಗಿ ಮೈಸೂರಿಗೆ ಓಡಿ ಹೋದರು.

ರಾಮಯ್ಯನವರಲ್ಲಿ ತೋರಿಬಂದ ಕೆಲವು ಕುಂದುಗಳನ್ನು ತಂದೆ ಹಿಂದೆ ಒಂದು ಪತ್ರದಲ್ಲಿ ಪ್ರಸ್ತಾಪ ಮಾಡಿದ್ದಾರೆ. ಕುಂದುಗಳೇನೇ ಇರಲಿ ಅವರು ಅಸಾಧಾರಣರಾದ ವ್ಯಕ್ತಿ ಎಂದು ಒಪ್ಪಲೇ ಬೇಕು. ಮಿಕ್ಕವರಿಗೆ ಉಪಕಾರ ಮಾಡುವುದರಲ್ಲಿ ಅವರ ಜೀವ ಸವೆಯಿತು. ಅವರ ಹತ್ತಿರದ ಬಳಗವೆಲ್ಲ ಅವರ ಮನೆಯನ್ನೆ ತಮ್ಮ ಮನೆಯನ್ನಾಗಿ ಮಾಡಿಕೊಂಡಿದ್ದರು. ರಾಮಯ್ಯನವರ ಮನೆ ದೊಡ್ಡ ಗೋಕುಲದಂತಿತ್ತು. ತಮ್ಮ ಆಶ್ರಯ ಬೇಡಬಂದವರಿಗೆ ಸಹಾಯವನ್ನು ನಿರಾಕರಿಸುವ ಮನಸ್ಸು ಅವರಿಗಿರಲಿಲ್ಲ. ಸಾಲವನ್ನು ಮಾಡಿಯಾದರೂ ದುಡ್ಡು ತಂದು ಕೊಡುತ್ತಿದ್ದರು. ನಾಳೆಯ ಯೋಚನೆಯನ್ನು ಅವರು ಇಟ್ಟುಕೊಂಡೇ ಇರಲಿಲ್ಲ. ಸಂಸಾರದ ಗತಿ, ಮಕ್ಕಳ ಉತ್ತರೋತ್ತರ ಏಳಿಗೆಯ ಕಡೆಗೂ ಅವರ ಮನಸ್ಸು ಹೋಗಲಿಲ್ಲ. ಸಿ. ಆರ್. ರೆಡ್ಡಿಯವರು ರಾಮಯ್ಯನವರ ಗುಣಕಥನ ಮಾಡುತ್ತಾ

He was the friend of everybody except himself. And my efforts at introducing a strain of cool discrimination into his warm blooded boundless generosity proved an utter failure. Such was the heart that will beat no more. Alas, when shall we see his like again.

In some respects he always remained a boy and never grew into a man. People with big hearts beating vigorously are often like that; and in that

lies one of their greatest attractions. Nobody could ever be angry with a mere lad, a Peter Pan that will not grow. He played with his life, while he was serious enough with other peoples lives. And has he not played it to a tragedy through his own bouyant and optimistic nature, prevented him from realizing its consequences? He lived a boy and must have died a boy. For in his case the years affected him so little, that his age has to be reckoned by his nature and not by the calendar. ಎಂಬು ಹೇಳಿದರು.

ವಿಶಾಲವಾದ ವೃಕ್ಷದಡಿಯಲ್ಲಿ ಮನೆ ಮಾಡಿಕೊಂಡು, ಉರಿ ಬಿಸಿಲಿನ ತಾಪ ತಿಳಿಯದೆ, ಬಿರುಗಾಳಿಯ ಬಿರುಸಿನಿಂದ ನೋಯದೆ, ಸುಖವಾಗಿ ಏನೊಂದು ಯೋಚನೆಯೂ ಇಲ್ಲದೆ ಬಾಳುತ್ತಿರುವ ಸಂಸಾರದ ಮೇಲೆ ಹಠಾತ್ತಾಗಿ ಅಷ್ಟು ದಿನ ಆಶ್ರಯ ಕೊಟ್ಟ ವೃಕ್ಷ ಕಡಿದು ಬಿದ್ದರೆ ಆ ಸಂಸಾರ ಯಾವರೀತಿ ಅನಾಥವಾಗುವುದೋ ಅದೇ ರೀತಿ ರಾಮಯ್ಯನವರ ಸಂಸಾರ ಮತ್ತು ಅವರ ಆಶ್ರಯವನ್ನೇ ನಂಬಿಕೊಂಡಿದ್ದ ಇನ್ನೂ ಅನೇಕ ಸಂಸಾರಗಳೂ ಒಮ್ಮೆಗೇ ಅನಾಥವಾದುವು. ರಾಮಯ್ಯನವರ ಮನೆತನಕ್ಕೆ, ಅವರ ಸಾವಿನಿಂದ ತಗಲಿದಂಥ ಪೆಟ್ಟು, ಅಂಥ ವೈಭವದ ಸ್ಥಿತಿಯಲ್ಲಿ ಬಾಳಿದ ಇನ್ನು ಯಾವ ಮನೆತನಕ್ಕೂ ತಟ್ಟಿರಲಾರದು. ಅವರ ಮರಣಾನಂತರ ಮನೆತನದ ಸ್ಥಿತಿ ತೀರ ಶೋಚನೀಯ ಸ್ಥಿತಿಗಿಳಿಯಿತು. ಚಿಕ್ಕಂದಿನಿಂದ ಆಡಿ ಬೆಳೆದ ಮನೆ ಕೂಡ ಹೆರವರ ಪಾಲಾಯಿತು. ನಿಲ್ಲಲು ನೆರಳುಕೂಡ ಇಲ್ಲದಿರುವ ಸ್ಥಿತಿ ಬಂತು. ಅಂಥ ದೆಸೆಯಿಂದ ಮೇಲೆದ್ದು, ಮತ್ತೆ ತಲೆಯೆತ್ತಿ ನಿಂತು, ಹಿಂದಿನ ವೈಭವವನ್ನು ಮರಳಿ ನೆನಪಿಗೆ ತಂದುಕೊಂಡು, ತಂದೆಯ ಪ್ರತಿ ಮೂರ್ತಿಗಳಾಗಿ, ಆ ತಂದೆಯಂತೆಯೇ ನಾಡಿನ ಜನಜೀವನದಲ್ಲಿ ಬೆರೆತ ಕೀರ್ತಿ ಅವರ ಹೆಣ್ಣು ಗಂಡು ಮಕ್ಕಳಿಗೆ ಸಲ್ಲಬೇಕಾಗಿದೆ.

ಈ ಮಕ್ಕಳು ಕೂಡ ತಂದೆಯಂತೆಯೇ ಬಾಲ ಸ್ವಭಾವದ ನಿಷ್ಕಪಟ ಮನಸ್ಸುಳ್ಳವರು. ಪರರ ಶ್ರೇಯಸ್ಸು ಕಂಡು ಸಂತೋಷ ಪಡುವವರು. ಅದು ತಮ್ಮ ಶ್ರೇಯಸ್ಸೆ ಎಂದು ಸಂತೋಷಿಸುವವರು. ಇವರು ಹೋದಲ್ಲಿ ಮನೆಯವರಿಗಿಂತ ಹೆಚ್ಚು ಆತ್ಮೀಯರಾಗುತ್ತಾರೆ. ಶುಭ ಅಥವಾ ಅಶುಭ ಕಾರ್ಯವಿದ್ದಲ್ಲಿ, ಮೊದಲಿಂದ ಕೊನೆಯವರೆಗೂ ಇದ್ದು ಕೆಲಸವನ್ನು ಆಗಮಾಡಿಕೊಟ್ಟು ಹೋಗುತ್ತಾರೆ. ಎಲ್ಲರಿಗೂ ಬೇಕಾದವರಾಗುತ್ತಾರೆ. ನಡುಮನೆಯಿಂದ ಅಡುಗೆಮನೆಯವರೆಗೂ ನುಗ್ಗಿ ಎಲ್ಲರನ್ನೂ ಮಾತನಾಡಿಸಿಕೊಂಡು ಬರುತ್ತಾರೆ. ಸಿಡುಕು ಮೋರೆಗಳ ಮೇಲೆ ನಗು ಮೂಡುವಂತೆ ಮಾಡುತ್ತಾರೆ. ನಕ್ಕು ನಗಿಸಿ ಹೋಗುತ್ತಾರೆ. ಎಂಥವರನ್ನೂ ಕೂಡ ಮೋಹಿಸಿಬಿಡುತ್ತಾರೆ. ರಾಮಯ್ಯನವರ ನೆನಪು ಈ ರೀತಿ ಅವರ ಮಕ್ಕಳ ಮೂಲಕ ಉಳಿಯುತ್ತದೆ. ರಾಮಯ್ಯನವರನ್ನು ಕಾಣದವರಿಗೂ ಆ ಮಕ್ಕಳೊಡನೆ ಒಡನಾಟ, ಅವರ ತಂದೆ ಹೇಗಿದ್ದಿರಬಹುದೆನ್ನುವ ಚಿತ್ರವನ್ನು ಮನಸಿನ ಮುಂದೆ ಕಟ್ಟುತ್ತದೆ.

ರಾಮಯ್ಯನವರು ಜೀವಿಸಿದ್ದ ಕಾಲದಲ್ಲಿ, ಯಾವ ಸಭೆಯಲ್ಲಾಗಲಿ ಅವರು ಇಲ್ಲದಿದ್ದರೆ, ಸಭೆಯಲ್ಲಿ ಒಂದೆರಡಾಗಲಿ ಮಾತನಾಡದಿದ್ದರೆ ಆ ಸಭೆ ಶೋಭಿಸುತ್ತಿರಲಿಲ್ಲವಂತೆ. ಔತಣಗಳಲ್ಲಿ, ಭೋಜನ ಸಮಾರಂಭಗಳಲ್ಲಿ ಅವರ ಗುಡುಗಿನಂತೆ ಮೊಳಗುತ್ತಿದ್ದ ನಗು, ಸುಶ್ರಾವ್ಯವಾಗಿ ಹೇಳುತ್ತಿದ್ದ ಶ್ಲೋಕಗಳನ್ನು ಕೇಳದೆ ಹೋದರೆ ಅಂಥ ಔತಣ ಸಮಾರಂಭಗಳು ಕಳೆ ಕಟ್ಟುತ್ತಿರಲಿಲ್ಲವಂತೆ. ಫಲಹಾರ ಕೂಟಗಳಲ್ಲಿ, ಎಲ್ಲಿ ಗಟ್ಟಿಗೆ ಮಾತನಾಡಿದರೆ ಅಪರಾಧವೋ, ನಕ್ಕರೆ ಏನು ಕೇಡೋ ಎಂದು ಗುಸುಗುಸು ಪಿಸು ಮಾತಿನಲ್ಲಿಯೇ ಮುಕ್ತಾಯವಾಗುತ್ತಿದ್ದ ಕಡೆ ರಾಮಯ್ಯನವರೇನಾದರೂ ಬಂದರೆ ಎದುರು ಮೇಜಿನವರೆಲ್ಲರನ್ನೂ ಏಕವಚನದಿಂದ ಸಂಭೋಧಿಸಿ, ಅವರೊಡನೆ ಸರಸವಾಡಿ, ಗಟ್ಟಿಯಾಗಿ ನಕ್ಕು ಕೇಕೆ ಹಾಕಿ, ಎಲ್ಲರನ್ನೂ ನಗಿಸಿ ನಿಮಿಷ ಮಾತ್ರದಲ್ಲಿ ಅದುವರೆಗೂ ಸುಮ್ಮನೆ ಮೂಕರಂತೆ ಕುಳಿತಿದ್ದವರನ್ನು ಜೀವಂತಗೊಳಿಸುತ್ತಿದ್ದರಂತೆ. ಅವರಿಲ್ಲದ ಕೂಟ ಬೇಸರದ ಕೂಟವಾಗುತ್ತಿದ್ದಿತಂತೆ. ಅವರ ಕಾಲದ ಜನಕ್ಕೆ ರಾಮಯ್ಯನವರು ತೀರ ಅಚ್ಚುಮೆಚ್ಚಿನವರಾಗಿದ್ದರು. ಆ ಕಾಲದ ನಾಡಿನ

ಜೀವನದಲ್ಲಿ ಜೀವಂತ ಮೂರ್ತಿಯಾಗಿ ಎಲ್ಲರ ಮನಸ್ಸಿನಲ್ಲಿ, ನೆನಪಿನಲ್ಲಿ ಉಳಿದಿದ್ದರು. ಹಿರಿಯರಾಗಿ ಬಾಳಿದ್ದರು. ಈ ಅಧ್ಯಾಯ ಮುಗಿಸುವ ಮುನ್ನ ಅವರಿಗೆ ತೀರ ಅಚ್ಚುಮೆಚ್ಚಾಗಿದ್ದ, ಬಹು ಸಭೆಗಳಲ್ಲಿ ಅವರು ರಾಗವಾಗಿ ಹಾಡುತ್ತಿದ್ದ ರತ್ನಾಕರವರ್ಣಿಯ ಪದ್ಯದಿಂದ ಮುಕ್ತಾಯ ಮಾಡುತ್ತೇನೆ —

> ಆವಾವಂಗನೆಯಲ್ಲಿ ಕೂಡಿದೊಡಮಾಪಾಡದಲ್ಲದೇಂ ಕಂಡನೆ
> ಆವಾವೂಟಗಳನುಂಡೊಡಂ ಸವಿಗಳೊಳ್ಬೇರೊಂದನೇನುಂಡನೆ
> ಆವಾವಾಭರಣಂಗಳಂ ತುಡೆ ತೊವಲ್ ಪೊನ್ನಾದುದೇ ? ಕಂಡುಮಿಾ
> ಜೀವಂಕಾಣದೋ ಉಂಡುಮೇಂ ದಣಿಯದೋ ರತ್ನಾಕರಾಧೀಶ್ವರಾ

# ಗೃಹಕೃತ್ಯ

ನಮ್ಮ ಮನೆಯ ಅನುದಿನದ ಜೀವನದ ವಿಷಯವನ್ನು, ಮನೆಯಲ್ಲಿ ತಂದೆ ಯಾವರೀತಿ ನಡೆದುಕೊಳ್ಳುತ್ತಿದ್ದರು, ಒಳ್ಳೆಯ ಮನೆತನವೊಂದನ್ನು ಕಟ್ಟಿದರು ಎನ್ನುವುದನ್ನು ಈ ಅಧ್ಯಾಯದಲ್ಲಿ ಪ್ರಸ್ತಾಪಿಸುತ್ತೇನೆ.

ತಂದೆ ತಮ್ಮ ಬಾಲ್ಯವನ್ನು ಅರಳೆಪೇಟೆಯ ಮನೆಯೊಂದರಲ್ಲಿ ಕಳೆದರೆಂದು ಹಿಂದೆಯೇ ತಿಳಿಸಿದ್ದೇನೆ. ಅಧ್ಯಯನದ ಕಾಲ ಮುಗಿದು ಸರಕಾರದ ನೌಕರರಾಗಿ ಸೇರಿದ ಮೇಲೆ ಒಂದಾದ ಮೇಲೊಂದು ಮನೆ ಬದಲಾಯಿಸುತ್ತ ಹೋದರು. ನಾನು ಈ ಲೋಕದಲ್ಲಿ ಕಣ್ಣು ತೆರೆಯುವ ವೇಳೆಗೆ ಚಾಮರಾಜಪೇಟೆ ನಾಲ್ಕನೆಯ ಬೀದಿಯಲ್ಲಿರುವ ಮನೆ ನಮ್ಮದಾಗಿದ್ದಿತು. ಈ ಮನೆಯನ್ನೆ ತಂದೆ ಆಮೇಲೆ ಕೊಂಡುಕೊಂಡರು. ತಂದೆ ತಮ್ಮ ಸೇವಾವಧಿಯ ಬಹು ಭಾಗವನ್ನು ನಾಲ್ಕನೆಯ ಬೀದಿಯ ಮನೆಯಲ್ಲೇ ಕಳೆದರು. ಈ ಮನೆ ಆಗ ಹೇಗಿತ್ತೊ ಈಗಲೂ ಹಾಗೆಯೇ ಇದೆ. ಮನೆ ಹೊರಗಡೆ ಸಣ್ಣದಾಗಿ ಕಂಡರೂ ಒಳಗೆ ವಿಶಾಲವಾಗಿತ್ತು. ವಿಶಾಲವಾದ ನಡುಮನೆಯೊಂದಿತ್ತು. ಸುತ್ತಲೂ ಅನೇಕ ಕೊಠಡಿಗಳಿದ್ದವು. ಮಹಡಿಯಿತ್ತು. ಅಲ್ಲಿಯೂ ರೂಮುಗಳಿದ್ದುವು. ಮನೆಯ ಸುತ್ತ ಯಾವ ಕಡೆಯೂ ಬಯಲಿರಲಿಲ್ಲ. ತಲೆಬಾಗಿಲಿಂದ ಹೊರಬಿದ್ದರೆ ರಸ್ತೆಯಲ್ಲೆ ಕಾಲಿಡಬೇಕಾಗಿತ್ತು. ಮನೆಯ ಹೊರಬಾಗಿಲು ದೇವಸ್ಥಾನದ ಬಾಗಿಲಿನಂತೆ ದೊಡ್ಡದಾಗಿತ್ತು. ಮನೆಗೆ ಯಾರು ಬರಲಿ ಹೋಗಲಿ ಈ ಮುಂಬಾಗಿಲೊಂದರಿಂದಲೇ ಬಂದು ಹೋಗಬೇಕಾಗಿತ್ತು. ಒಂದು ಸಾಲಿನಲ್ಲಿದ್ದ ಮೂರು ಕೊಠಡಿಗಳನ್ನು ತಂದೆ ತಮ್ಮ ಉಪಯೋಗಕ್ಕಾಗಿ ಇಟ್ಟುಕೊಂಡಿದ್ದರು. ಒಂದರಲ್ಲಿ ತಮ್ಮನ್ನು ನೋಡ ಬಂದವರನ್ನು ಕಾಣುತ್ತಿದ್ದರು. ಇನ್ನೊಂದನ್ನು ಮಲಗುವ ಮನೆಯಾಗಿ ಮಾಡಿಕೊಂಡಿದ್ದರು. ಮಲಗುವ ಮನೆಯ ಮೂಲೆಯಲ್ಲೆ ಪುಸ್ತಕದ ಅಲಮಾರುಗಳೂ ಅವರ ಕೆಲಸದ ಮೇಜೂ ಇತ್ತು. ಮೂರನೆಯ ರೂಮಿನಲ್ಲಿ ಅವರ ಬಟ್ಟೆ ಬರೆ ತುಂಬಿದ್ದವು. ಈ ಮೂರು ರೂಮುಗಳು, ಸ್ನಾನ ಮತ್ತು ಅಡುಗೆಯ ಮನೆ ಇವುಗಳ ಹೊರತು ತಂದೆ ಬೇರೆ ಕಡೆ ಎಲ್ಲಿಯೂ ಓಡಾಡುತ್ತಿರಲಿಲ್ಲ

ಚಿಕ್ಕಂದಿನಲ್ಲಿ ನಾವು ತಂದೆಯನ್ನು ಬಹುವಾಗಿ ನೋಡುತ್ತಿರಲಿಲ್ಲ. ಮಾತನಾಡುವುದಂತೂ ದೂರವಾಗಿಯೇ ಉಳಿಯಿತು. ಅವರನ್ನು ಕಂಡರೆ ದಿಗಿಲು ಭಯವಿತ್ತು. ಮನೆಯಲ್ಲಿರುವಾಗ ತಂದೆ ಸದಾ ಮೌನಿಯಾಗಿಯೇ ಇರುತ್ತಿದ್ದರು. ಮನೆಯವರು ಯಾರೊಡನೆಯೂ ಸೇರಿ ಸ್ವಚ್ಛಂದವಾಗಿ ಮಾತನಾಡುತ್ತಿದ್ದ ಒಂದು ದಿನವನ್ನೂ ನಾನು ಸ್ಮರಿಸಿಕೊಳ್ಳಲಾರೆ. ಚಿಕ್ಕ ಮಕ್ಕಳನ್ನು ಕಂಡರೆ ಅವರಿಗೆ ವಿಶೇಷವಾದ ಅಕ್ಕರೆ ಇತ್ತು. ಬೆಳಗಿನ ಹೊತ್ತು ಮಕ್ಕಳನ್ನೆತ್ತಿಕೊಂಡು ಆಟವಾಡುತ್ತಿದ್ದರು. ರಾತ್ರಿಯ ಹೊತ್ತು ಹೆಗಲಮೇಲೆ ಹಾಕಿಕೊಂಡು ಪದ ಹೇಳುತ್ತಾ ತಟ್ಟಿ ಮಲಗಿಸುತ್ತಿದ್ದರು ತಂದೆ ತೀರ ಸಣ್ಣ ಸ್ವರದಲ್ಲಿ ರಾಮನಾಮವನ್ನು ಶ್ರೀ ವಧೂವಿನಂಬಕ ಚಕೋರಕಂ ಪೊರೆಯೆ, ಚದುರಂ ನೀತಿ ವಿಶಾರದಂ, ಮುಂತಾದ ಪದ ಗಳನ್ನು ಬಹು ಮಧುರವಾಗಿ ಹೇಳುತ್ತಿದ್ದರು. ಆ ಪದಗಳ ಇಂಪು ಈಗಲೂ ನನಗೆ ನೆನಪಾಗುತ್ತದೆ.

ತಂದೆ ಬಹು ಕೋಪಿ. ಆ ಕೋಪದ ಮುಂದೆ ಎದುರು ನಿಲ್ಲುವುದು ಯಾರಿಗಾಗಲಿ ಕಷ್ಟವಾಗುತ್ತಿತ್ತು. ನಮ್ಮ ಮನೆಯಲ್ಲಿ ಅದೃಷ್ಟಶಾಲಿಗಳಾದ ಒಂದಿಬ್ಬರನ್ನು ಬಿಟ್ಟು ಮಿಕ್ಕವರೆಲ್ಲರೂ ಆ ಕೋಪದ ಆವೇಶಕ್ಕೆ ತುತ್ತಾ ಗಿದ್ದಾರೆ. ವಯಸ್ಸಾದಂತೆ ಆ ಕೋಪ ಕಡಿಮೆಯಾಗುತ್ತಾ ಹೋಯಿತು. ಕೊನೆಯ ಹತ್ತು ವರ್ಷಗಳಲ್ಲಿ ಅವರು ಅಷ್ಟಾಗಿ ಯಾರ ಮೇಲೆಯೂ ಕೋಪಗೊಂಡುದನ್ನು ನಾ ಕಾಣೆ. ಮನಸ್ಸನ್ನು ಶಾಂತವಾಗಿಟ್ಟುಕೊ ಳ್ಳಲು ಪ್ರಯತ್ನಿಸುತ್ತಿದ್ದರು.

ಚಿಕ್ಕಂದಿನಲ್ಲಿ ನಮ್ಮ ಜೀವನವೆಲ್ಲ ನಮ್ಮ ಅಜ್ಜಿಯ ಸುತ್ತ ತಿರು ಗುತ್ತಿತ್ತು. ಅವರೇ ನಮಗೆ ಎಲ್ಲ ವಿಷಯದಲ್ಲೂ ಗುರುವಾಗಿದ್ದರು. ಸಾಹಿತ್ಯದಲ್ಲಿ ಅಭಿರುಚಿ ಹುಟ್ಟಿಸಿದವರು ಅವರು. ಶುಚಿಯಾದ ನಡತೆ ತೋರಿಸಿಕೊಟ್ಟವರು ಅವರು. ನಮ್ಮ ಮನಸ್ಸು ಎಲ್ಲಿ ನೋಯಲಿ, ಎಲ್ಲಿ ಏನು ಏಟು ತಗುಲಲಿ ನಾವು ಅಜ್ಜಿಯ ಮರೆ ಹೊಗುತ್ತಿದ್ದೆವು.

ಮೊದಲು ನಾಲ್ಕನೆಯ ಬೀದಿಯಲ್ಲಿದ್ದ ಮನೆಯೂ, ಆಮೇಲೆ ಐದ ನೆಯ ಬೀದಿಗೆ ಬಂದ ಮನೆಯೂ ಎರಡೂ ವಿಶಾಲವಾಗಿದ್ದುವು. ವಿಶಾಲ

ವಾದ ಈ ಮನೆಗಳ ಮೂಲೆ ಮೂಲೆಗಳಲ್ಲಿ ಮನೆಮಕ್ಕಳಾದ ನಾವುಗಳು ತಳ ಊರಿದ್ದೆವು ನಾವು ಒಬ್ಬರೊಡನೊಬ್ಬರು ಅಷ್ಟಾಗಿ ಬೆರೆಯುತ್ತಿರಲಿಲ್ಲ. ಊಟದ ಹೊತ್ತಿನಲ್ಲಿ ಸೇರಿದರೆ ಸೇರುತ್ತಿದ್ದೆವು ಇಲ್ಲದಿದ್ದರೆ ಇಲ್ಲ. ಪರಕೀಯರಂತೆಯೇ ನಾವು ಬೆಳೆದೆವೆಂದು ಹೇಳಬೇಕಾಗಿದೆ. ಈ ರೀತಿಯ ನಮ್ಮ ಬೆಳವಣಿಗೆಯಿಂದಾಗಿ ಒಬ್ಬೊಬ್ಬರ ಅಭಿರುಚಿಯೇ ಬೇರೆ, ಸ್ನೇಹಿತ ವರ್ಗವೇ ಬೇರೆ, ಮನೋಧರ್ಮವೇ ಬೇರೆ ಬಗೆಯದಾಯಿತು. ಇಂಥ ಬಾಳುವೆಯಿಂದ ಒಳ್ಳೆಯದಾಯಿತೋ ಕೆಟ್ಟದಾಯಿತೋ ಹೇಳಲಾರೆ. ಒಟ್ಟು ಮನೆತನದ ಹಿತದ ದೃಷ್ಟಿಯಿಂದ ಈ ಬಗೆಯ ಬೆಳವಣಿಗೆಯಿಂದ ನಷ್ಟವಾಯಿತೆಂದೇ ನನಗನಿಸುತ್ತದೆ. ಒಬ್ಬರ ಕಲಿಕೆ ಜ್ಞಾನ ಇನ್ನೊಬ್ಬರಿಗೆ ದೊರಕದೆ ಹೋಯಿತು. ತಂದೆ ಯಾವ ರೀತಿ ಮನೆ ಮಕ್ಕಳೊಂದಿಗೆ ಬೆರೆಯದೆ ತಾವೇ ತಮ್ಮದೊಂದು ಜಗತ್ತನ್ನು ಸೃಷ್ಟಿಸಿಕೊಂಡಿದ್ದರೋ ಅದೇ ರೀತಿ ನಾವು ಒಬ್ಬೊಬ್ಬರೂ ಒಂದೊಂದು ಕೋಟೆಯನ್ನು ಕಟ್ಟಿಕೊಂಡಿದ್ದೆವು. ಕೆಲವು ಮನೆತನಗಳಲ್ಲಿ ತಂದೆ ಮಕ್ಕಳು. ಅಣ್ಣ ತಮ್ಮಂದಿರು, ಅಕ್ಕ ತಂಗಿಯರು, ನೆಂಟರಿಷ್ಟರು ತೀರ ಆಪ್ತರಂತೆ ನೀನು ತಾನೆನ್ನುತ್ತ ಅನ್ಯೋನ್ಯವಾಗಿರುವುದನ್ನು ನೋಡಿದಾಗ ನನಗಂತೂ ಏನೋ ತೀರ ಹೊಸ ದೃಶ್ಯವನ್ನು ಕಂಡಂತೆ ಅನುಭವವಾಗುತ್ತದೆ. ಇಂಥ ದೃಶ್ಯ ಕಂಡಾಗ ಈ ರೀತಿ ನಾವಿಲ್ಲವಲ್ಲಾ ಎಂದು ಅಳುಕಿದ್ದೇನೆ ಆದರೆ ಈ ರೀತಿಯ ಮನೋಭಾವ ನಮ್ಮಲ್ಲಿ ಯಾರಲ್ಲಿಯೂ ಬೆಳೆದುಕೊಂಡು ಬರಲಿಲ್ಲವೆಂದು ಒಪ್ಪಿಕೊಳ್ಳಬೇಕಾಗಿದೆ ನಮ್ಮ ಮನಸ್ಸಿಗೆ ಹಿತವಾಗಿ ತೋರುವ ದಾರಿಯಲ್ಲಿ ಹೋಗುವುದೇ ಸಂಪ್ರದಾಯವಾಗಿದೆ. ಇನ್ನೊಬ್ಬರ, ಅವರೆಷ್ಟೇ ಹತ್ತಿರದವರಾಗಿರಲಿ, ಇಷ್ಟಕ್ಕೆ ಸರಿದೂಗಿಸಿಕೊಂಡು ಬಾಳುವುದು ಸಾಧ್ಯವಾಗಿಲ್ಲ.

ತಂದೆಯ ಯಾವುದೊಂದು ಕಾರ್ಯವಾಗಲಿ, ಚಟುವಟಿಕೆಯಾಗಲಿ, ವ್ಯವಹಾರವಾಗಲಿ ಮನೆಯಲ್ಲಿ ನಮಗೆ ಯಾರೊಬ್ಬರಿಗೂ ತಿಳಿಯುತ್ತಿರಲಿಲ್ಲ. ನಮ್ಮೊಡನೆ ಅವರು ಪ್ರಸ್ತಾಪ ಮಾಡುತ್ತಲೂ ಇರಲಿಲ್ಲ. ನಾವೂ ಕೇಳಬೇಕೆನ್ನುವ ಉತ್ಸಾಹ ತೋರಿಸುತ್ತಿರಲಿಲ್ಲ. ನಾನು ಮದುವೆಯಾದ ಸಂದರ್ಭವೇ ಜ್ಞಾಪಕಕ್ಕೆ ಬರುತ್ತದೆ. ಮದುವೆಯಾಗುವುದಕ್ಕೆ ಹದಿನೈದು

ದಿನಗಳ ಹಿಂದಿನವರೆಗೆ ನಾನು ಮದುವೆಯಾದೇನೆನ್ನುವ ಸಮಾಚಾರ ಕೂಡ ನನಗೆ ಗೊತ್ತಿರಲಿಲ್ಲ. ಲಗ್ನಪತ್ರಿಕೆ ಅಚ್ಚಾಗಿ ಅದರ ಪ್ರತಿಯೊಂದನ್ನು ನೋಡುವವರೆಗೂ ನನ್ನ ಕೈ ಹಿಡಿಯುವವಳ ಹೆಸರೇನೆನ್ನುವುದಾಗಲಿ, ಆಕೆಯ ತಂದೆ ತಾಯಿ, ಬಂಧು ಬಳಗ ಯಾರೆನ್ನುವುದಾಗಲಿ ತಿಳಿದಿರಲಿಲ್ಲ. ಮುಂದೆ ಹಿಡಿದಿದ್ದ ಅಂತಃಪಟ ಜಾರಿ ಕೆಳಗೆ ಸರಿಯುವವರೆಗೂ ಆಕೆ ಹೇಗಿದ್ದಾಳೆನ್ನುವ ಅರಿವು ಕೂಡ ಇರಲಿಲ್ಲ. ಹೆಣ್ಣು ಯಾರು, ಎಲ್ಲಿಯವಳು, ಯಾರ ಮಗಳು, ಹೇಗಿದ್ದಾಳೆ, ಎನ್ನುವ ವಿಷಯವನ್ನು ನನಗೆ ತಿಳಿಸಬೇಕೆನ್ನುವ ಆವಶ್ಯಕತೆ ತಂದೆತಾಯಿಗಳಿಗೆ ತೋರಲಿಲ್ಲ. ತಿಳಿಯಬೇಕೆನ್ನುವ ಆತುರ ಎಷ್ಟಿದ್ದರೂ ಮೇಲೆ ಬಿದ್ದು ಕೇಳ ಹೋಗುವ ಹವ್ಯಾಸಕ್ಕೆ ನಾನೂ ಹೋಗಲಿಲ್ಲ. ನಮ್ಮ ಮನೆಯ ಮನೋಧರ್ಮ ಈ ಸನ್ನಿವೇಶದಲ್ಲಿ ನಾವು ನಡೆದುಕೊಂಡ ರೀತಿಯಿಂದಲೇ ತಿಳಿಯುತ್ತದೆಂದು ನಂಬಿದ್ದೇನೆ. ಮೇಲೆ ನೋಡುವವರಿಗೆ ನಮ್ಮ ಮನೆಯ ನಡತೆ ತೀರ ವಿಚಿತ್ರವಾಗಿ ಕಾಣುತ್ತದೆ ನಿಜ. ಆದರೆ ನಮ್ಮ ಮನೆಯವರಲ್ಲಿ ಕಾಣ ಬರುವ ಮೌನದಿಂದ ಒಬ್ಬರಲ್ಲೊಬ್ಬರಿಗೆ ಪ್ರೀತಿ ವಿಶ್ವಾಸವಿಲ್ಲವೆಂದು ತಿಳಿಯಕೂಡದು. ವರ್ಷ ಕಳೆದರೂ ಒಂದು ಮಾತನ್ನೂ ಆಡದಿದ್ದ ತಂದೆ ನಾನು ಖಾಯಿಲೆಯಿಂದ ಒಂದು ಬಾರಿ ಮಲಗಿದ್ದಾಗ ರಾತ್ರಿಯೆಲ್ಲ ಮಗ್ಗುಲಲ್ಲಿ ಕುಳಿತಿದ್ದು ಹಣೆಯ ಮೇಲೆ ಕೈಯಿಟ್ಟು ಶುಶ್ರೂಷೆ ಮಾಡಿದ್ದರು. ಮಾತಿಗೆ ನಿಲುಕದ ಒಂದು ಬಗೆಯ ಮೂಕಪ್ರೇಮ ನಮ್ಮ ಮನೆಯದು. ಅಂಥ ಪ್ರೇಮಕ್ಕೆ ಪಾತ್ರರಾಗಲು ಪುಣ್ಯಮಾಡಿರಬೇಕು ಎಂದು ನನಗೆ ಒಮ್ಮೊಮ್ಮೆ ಅನ್ನಿಸಿದೆ. ಮಾತನಾಡದೆ ಒಂದು ಬಗೆಯ ನಿಷ್ಠುರ ಭಾವದಿಂದ ಮನ ನೊಂದಿರುವುದು ನಿಜ. ಆದರೆ ಅದಕ್ಕೂ ಹೆಚ್ಚಾಗಿ ಎಷ್ಟೋ ಸಂದರ್ಭಗಳಲ್ಲಿ ತಂದೆ ತಾಯಿಯರ, ಅಣ್ಣಂದಿರ ಪ್ರೇಮದ ಆಳವನ್ನು ಕಂಡು ಬೆರಗುಗೊಂಡಿದ್ದೇನೆ.

ತಂದೆ ಕೆಲಸದಿಂದ ನಿವೃತ್ತಿಯಾಗುವುದಕ್ಕೆ ಸ್ವಲ್ಪ ಮುಂಚಿತವಾಗಿ ಐದನೆಯ ಬೀದಿಯಲ್ಲಿ ಒಂದು ಮನೆಯನ್ನು ಹೊಸದಾಗಿ ಕೊಂಡುಕೊಂಡರು. ಮನೆಯೇನೊ ಹೊಸದಲ್ಲ. ತೀರ ಹಳೆಯದು. ಸೂರಿನ ಮರ

ವೆಲ್ಲ ಹುಳು ಹಿಡಿದು ಹೋಗಿತ್ತು. ಮನೆಯ ಸುತ್ತಲೂ ವಿಶಾಲವಾದ ಬಯಲಿತ್ತು. ಹಳೆ ಮನೆಯನ್ನೆ ಕೆಲವು ಕಡೆ ಕೆಡವಿ, ಮತ್ತೆ ಕಟ್ಟಿ ರಿಪೇರಿ ಮಾಡಿ ವಾಸಕ್ಕೆ ಅನುಕೂಲ ಮಾಡಿಕೊಂಡು ನಾವೆಲ್ಲ ಒಂದು ದಿನ ಬಂದು ಸೇರಿಕೊಂಡೆವು. ಹಳೆಯಮನೆಯ ಮುಂಬದಿಯಲ್ಲಿ ಹೊಸ ಕಟ್ಟಡ ಎದ್ದಿತು. ತಂದೆ ಸರಕಾರದ ಕೆಲಸದಿಂದ ನಿವೃತ್ತಿ ಹೊಂದಿ ಅವರ ಕಾರ್ಯಕ್ಷೇತ್ರ ವಿಶಾಲವಾದಂತೆ, ಇಕ್ಕಟ್ಟಿನಲ್ಲಿ ಮನೆಗಳ ನಡುವೆ ಸಿಕ್ಕಿ ಸರಿಯಾದ ಗಾಳಿ ಬೆಳಕು ಆಡದಿದ್ದ ಕತ್ತಲ ಮನೆ ಹೋಗಿ, ಅವರು ಮುಂದೆ ಬಾಳುವ ಮನೆ ನಾಲ್ಕೂಕಡೆ ಬಾಗಿಲು ಹೊಂದಿ ವಿಶಾಲವಾಯಿತು. ಮನೆ ಕಟ್ಟಿಸಲು ತಂದೆ ವಿಶೇಷ ಮುತುವರ್ಜಿ ವಹಿಸಿದರು. ಕಟ್ಟಕಟ್ಟುತ್ತಾ ಎಷ್ಟೋ ಮಾರ್ಪಾಡುಗಳಾದುವು. ಖರ್ಚೂ ಸಹ ಮಿತಿ ಮೀರುತ್ತಾ ಹೋಯಿತು. ಮನೆಯನ್ನು ಕಟ್ಟಿದವರು ಅದಕ್ಕೆ ಸರಿಯಾದ ಸಾಮಾನು ಸರಂಜಾಮುಗಳನ್ನೂ ಹೊಂಚಿದರು. ದಂಡಿನಲ್ಲಿರುವ ಇಂಗ್ಲೀಷಿನವರ ಮನೆತನ ಒಂದು ಸ್ವದೇಶಕ್ಕೆ ಹಿಂದಿರುಗಿದಾಗ, ಅವರು ಬಿಟ್ಟುಹೋದ ಸಾಮಾನೆಲ್ಲವನ್ನೂ ಕೊಂಡು ಕೊಂಡರು. ಈ ಸಾಮಾನುಗಳು ವಿಚಿತ್ರವಾಗಿ ನಮ್ಮ ಮನೆಯ ಮೂಲೆ ಮೂಲೆಯಲ್ಲಿ ವಿರಾಜಿಸುತ್ತಿದ್ದುವು. ಅವುಗಳಲ್ಲಿ ಚಂದವಾಗಲಿ, ಲಕ್ಷಣವಾಗಲಿ ಇತ್ತೆಂದು ಹೇಳಲಾರೆ. ನಮ್ಮ ಮನೆಯಲ್ಲಿ ಕಾಣದಿದ್ದ ಸೊಫಾಗಳು, ಕುರ್ಚಿಗಳು, ಸಣ್ಣ ಪುಟ್ಟ ಮೇಜುಗಳು, ಸ್ಕ್ರೀನುಗಳು ಈಗ ಕಂಗೊಳಿಸಿದುವು. ಅದುವರೆಗೂ ಈ ಬಗೆಯ ಸಾಮಾನು ನಮ್ಮ ಮನೆಯಲ್ಲಿ ಸುಳಿದಿರಲಿಲ್ಲ. ತೀರ ಅಗತ್ಯವಾದ ಕುರ್ಚಿ ಮೇಜು ಒಂದೆರಡು ಪುಸ್ತಕದ ಅಲಮಾರುಗಳು ಇವುಗಳ ವಿನಃ ಇನ್ನು ಯಾವ ಬಗೆಯ ಸಾಮಾನೂ ಇರಲಿಲ್ಲ. ನಮ್ಮ ಮನೆಯ ಈಗಿನ ನಡುಮನೆಯಲ್ಲಿ ಚಿತ್ರ ವಿಚಿತ್ರವಾದ ರೀತಿಯಲ್ಲಿ ಜೋಡಿಸಲ್ಪಟ್ಟಿದ ಮರದ ಸಾಮಾನುಗಳ ವೈಖರಿಯನ್ನು ನೋಡಿ ಇಂಗ್ಲೀಷು ನಾಗರಿಕ ನಿಜವಾಗಿ ಗಾಬರಿಗೊಂಡಾನು. ಆ ಸಂದೇಹ ನನಗೆ ಇದ್ದೇ ಇದೆ. ನಮ್ಮ ನಾಗರಿಕತೆಗೆ ತಕ್ಕಂತೆ ನಮ್ಮದೇ ಆದ ರೀತಿಯಲ್ಲಿ ವೈಶಿಷ್ಟ್ಯವನ್ನು ಕಾಪಾಡಿಕೊಂಡು ಮನೆ ಕಟ್ಟುವುದು, ಮನೆಯನ್ನು ಅಲಂಕರಿಸುವುದು, ಇವುಗಳನ್ನು ನಾವಿನ್ನೂ ಸಾಧಿಸಬೇಕಾಗಿದೆ.

ಸಂತೋಷ ಕೂಟಗಳನ್ನು ಸೇರಿಸುವುದು ತಂದೆಗೆ ತೀರ ಹಿತವಾದ ಕಾರ್ಯವಾಗಿತ್ತು. ಮಿತ್ರರನ್ನು ಬರಮಾಡಿಕೊಳ್ಳುವುದು, ಸುಖಭೋಜನ ಮಾಡಿ ಅವರೊಡನೆ ಸಲ್ಲಾಪಮಾಡುವುದು 'sweet civilities of life' ಎಂದು ತಿಳಿದಿದ್ದರು. ಈ ಔತಣ ಸಮಾರಂಭಗಳು ತಿಂಗಳಿಗೊಂದು ಬಾರಿಯಾದರೂ ನೆರೆಯುತ್ತಲೇ ಇದ್ದುವು. ಮೊದಲಿಗೆ ಈ ಊಟಗಳು ಸಾಹೇಬಿತರದಲ್ಲಿರುತ್ತಿದ್ದುವು. ಬರುವ ಅತಿಥಿಗಳೆಲ್ಲ ಸೂಟು ಬೂಟುಧಾರಿಗಳಾಗಿ ಬರುತ್ತಿದ್ದರು. ಮೇಜಿನ ಮೇಲೆಯೇ ಊಟ ಸಾಗುತ್ತಿತ್ತು. ಅಂದು ಮನೆಯಲ್ಲೆಲ್ಲ ವಾಸನೆ ಘಮಘಮಿಸುತ್ತಿತ್ತು. ಮದಿರಾದೇವಿಯು ಒಮ್ಮೊಮ್ಮೆ ಊಟದ ಕೊನೆಯಲ್ಲಿ ಪ್ರತ್ಯಕ್ಷಳಾಗುತ್ತಿದ್ದಳು. ಊಟಕ್ಕೆ ಬರುವವರು ರಾತ್ರಿ ಹನ್ನೆರಡರವರೆಗೂ ಲಲ್ಲೆಹೊಡೆದು ತೆರಳುತ್ತಿದ್ದರು. ಅಂದು ಮನೆ ಮಕ್ಕಳಾದ ನಮಗೆ ನಿದ್ರಾಸ್ಥಾನಗಳಿಂದ ಉಚ್ಚಾಟನೆಯಾಗಿ ನಾವೆಲ್ಲೆಲ್ಲೋ ಮಲಗಬೇಕಾಗುತ್ತಿತ್ತು. ಈ ಸಮಾರಂಭಗಳಿಗೆ ತಂದೆ ಹೊರತು ಮಿಕ್ಕವರು ಯಾರೂ ಮನೆಯುವರು ಪ್ರವೇಶ ಮಾಡುತ್ತಿರಲಿಲ್ಲ. ಬರಬರುತ್ತಾ ಈ ಬಗೆಯ ಸಾಹೇಬಿ ಊಟಗಳು ಕಡಿಮೆಯಾಗುತ್ತಾ ಬಂದು ಕೊನೆಗೆ ನಿಂತೇ ಹೋದುವು. ಅಲ್ಲಿಂದೀಚೆಗೆ ಮೊದಲಾದ ಸಮಾರಂಭಗಳಲ್ಲಿ ಆಹೂತರಾದ ಅತಿಥಿಗಳ ಸಂಖ್ಯೆ ಹೆಚ್ಚಿತು. ಮೇಜಿನ ಮೇಲೆ ಈಗ ಊಟ ಸಾಗುತ್ತಿರಲಿಲ್ಲ. ಪದ್ಮಾಸನ ಹಾಕಿ ಸರಬರ ಘೋರ ಕಾರ್ಯವನ್ನು ನಡೆಸುವುದೇ ಪದ್ಧತಿಯಾಯಿತು. ಈ ಔತಣ ಸಮಾರಂಭದ ಎಲ್ಲ ಜವಾಬ್ದಾರಿಯನ್ನೂ ತಂದೆಯೇ ಸ್ವತಃ ನಿರ್ವಹಿಸಬೇಕಾಗಿತ್ತು. ಅಡಿಗೆಯ ಮನೆಯ ಕಾರ್ಯವೆಲ್ಲ ತಾಯಿಯ ಪಾಲಿನದಾಗಿತ್ತು. ಬಂದ ಅತಿಥಿಗಳೊಡನೆ ಮೊದಲನೆಯ ಪಂಕ್ತಿಯಲ್ಲಿ ಊಟ ಮಾಡುವುದುಹೊರತಾಗಿ ಈ ಔತಣಗಳಲ್ಲಿ ಬೇರೆ ಯಾವ ರೀತಿಯಲ್ಲೂ ಮನೆ ಮಕ್ಕಳಾದ ನಾವು ಸೇರುತ್ತಿರಲಿಲ್ಲ. ಇಂಥ ಬಗೆಯ ಸಾಮೂಹಿಕ ಊಟಗಳಿಂದ ಏನು ಪ್ರಯೋಜನ ಏತ್ತೋ ಹೇಳಲಾರೆ. ನನಗಂತೂ ಮನೆಯುವರು ಈ ಸಮಾರಂಭಗಳಿಗಾಗಿ ಪಡುತ್ತಿದ್ದ ಶ್ರಮ ತೀರ ವ್ಯರ್ಥವಾಗಿ ತೋರುತ್ತಿತ್ತು.

ತಂದೆ ತಮ್ಮ ಕಷ್ಟವೇನೇ ಇರಲಿ. ತೊಂದರೆ ಏನೇ ಇರಲಿ ಅದನ್ನು ಮನೆಯುವರು ಯಾರಿಗೂ ತಿಳಿಸುತ್ತಿರಲಿಲ್ಲವೆಂದು ಹಿಂದೆಯೇ ಹೇಳಿದ್ದೇನೆ.

ನಮ್ಮ ಪಾಲಿಗೆ ದಿನದಿನದ ಜೀವನ ಸುಸೂತ್ರವಾಗಿ ಸಾಗಿ ಹೋಗುತ್ತಿತ್ತು. ತಂದೆ ತಮ್ಮ ಬಾಲ್ಯದಲ್ಲಿ ಯುವಾವಸ್ಥೆಯಲ್ಲಿ ಪಟ್ಟ ಕಷ್ಟದಲ್ಲಿ ಸಾವಿರದ ಒಂದು ಪಾಲು ಕೂಡ ನಮ್ಮಲ್ಲಿ ಯಾರೂ ಪಡಲಿಲ್ಲ. ಇಂಥ ಜೀವನದಲ್ಲಿ ಬಿದ್ದ ಮೊದಲ ಪೆಟ್ಟು ನನ್ನ ತಂಗಿಯ ಸಾವು. ಅದುವರೆಗೂ ಸಾವೆಂದ ರೇನೆನ್ನುವುದನ್ನು ನಾನು ಮನೆಯಲ್ಲಿ ಕಂಡಿರಲಿಲ್ಲ. ನನ್ನ ತಂಗಿಯ ಹೆಸರು ಕೃಷ್ಣಾಕುಮಾರಿ. ನನಗೆ ಎರಡು ವರ್ಷ ಚಿಕ್ಕವಳು. ಸುಂದರ ಳಾಗಿದ್ದಳು, ಬುದ್ಧಿವಂತೆಯೂಗಿದ್ದಳು, ಸೊಗಸಾಗಿ ಹಾಡು ಹೇಳುತ್ತಿದ್ದಳು. ನಮ್ಮ ಅಜ್ಜಿಗೂ ಸೋದರತ್ತೆಗೂ ತೀರ ಅಚ್ಚುಮೆಚ್ಚಿನವಳಾಗಿದ್ದಳು. ಏಳು ವರ್ಷ ವಯಸ್ಸಿನವಳಿರುವಾಗ ಏನೋ ತಿಳಿಯದ ರೋಗ ಬಂದು ತೀರಿಕೊಂ ಡಳು. ಮನೆಯವರೆಲ್ಲ ಬಹು ದುಃಖಪಟ್ಟರು. ತಂದೆ ಬಿಕ್ಕಿ ಬಿಕ್ಕಿ ಅತ್ತು ದನ್ನು ನಾನು ಕಂಡುದು ಅಂದು. ನಾವು ಕಿರಿಯವರಾದುದರಿಂದ ದುಃಖ ಅಷ್ಟಾಗಿ ನಮ್ಮನ್ನು ತಟ್ಟಲಿಲ್ಲ. ಅಜ್ಜಿ ಮಾತ್ರ ಮೇಲಿಂದ ಮೇಲೆ ತಮ್ಮ ಮೊಮ್ಮಗಳು ಹೇಳುತ್ತಿದ್ದ ಹಾಡುಗಳನ್ನು ಜ್ಞಾಪಿಸಿಕೊಂಡು ದುಃಖಿಸುತ್ತಿ ದ್ದರು. ತಂಗಿ ಇಂಪಾಗಿ ಹಾಡುತ್ತಿದ್ದ ಹಾಡುಗಳಲ್ಲಿ " ನಿನ್ನನು ನಂಬಿರ್ಪೆನೊ ನೀನೆ ಹರಿಯೈ " ಎಂಬುದು ಒಂದು. ಅದರ ಮೊದಲ ನುಡಿ ' ಬಾಲಸು ಪ್ರಹ್ಲಾದನು ಗೋಳಾಡಲು ನಾನಾಪರಿ ಲೀಲಾಕೃತಿ ತೋರುತಲೆ ಪಾಲಿ ಸಿದೆ ಶೈಲೋಲಜ ' ಎಂದು. ಈ ನುಡಿ ಹೇಳಹೇಳುತ್ತಾ ದುಃಖ ಒತ್ತರಿಸಿ ಬಂದು, ಕಂಠ ಬಿಗಿದು, ಅಜ್ಜಿಯ ಕಣ್ಣುಗಳಿಂದ ನೀರು ಸುಮ್ಮನೆ ಸುರಿದು ಹೋಗುತ್ತಿತ್ತು. ಅವರ ಸುತ್ತ ಕುಳಿತ ನಾವು ಅಜ್ಜಿಯ ಸಂಕಟ ಕಂಡು ಮರುಗುತ್ತಿದ್ದೆವು.

ಕೆಲವು ವರ್ಷಗಳಾದನಂತರ ನಮ್ಮ ಅಜ್ಜಿ ಕೂಡ ಕಣ್ಮರೆ ಯಾದರು. ಅವರ ಇಂಪಾದ ಕಂಠದಿಂದ ದೇವರ ನಾಮಗಳು ಮತ್ತೆ ಕೇಳ ದಾದುವು. ತಿಂಗಳು ಕಾಲ ನರಳಿ ತಮ್ಮ ಎಪ್ಪತ್ತನೆಯ ವಯಸ್ಸಿನಲ್ಲಿ ಅಜ್ಜಿ ಚಿರಕಾಲ ನಮ್ಮನ್ನು ಅಗಲಿ ಹೊರಟು ಹೋದರು. ನಮ್ಮ ಮನೆ ತನವನ್ನು ಕಟ್ಟಿ, ಅದು ಇಲ್ಲಿನವರೆಗೂ ನಡೆದುಕೊಂಡು ಬರುವಂತೆ ಮಾಡಿದ ನಮ್ಮ ' ಅಮ್ಮ 'ನ ಚಿತ್ರ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿದೆ.

ಅವರು ಹಳೆಯ ಕಾಲದವರಾದರೂ, ವಯಸ್ಸಾಗಿ ಹೋಗಿದ್ದರೂ, ಎಳೆಯ ರೊಡನೆ ಎಳೆಯರಾಗಿ ಬೆರೆಯುತ್ತಿದ್ದರು. ಹರಿಭಕ್ತಿಸುಧಾರಸ, ಪುರಂದರ ದಾಸರ ದೇವರ ನಾಮಗಳನ್ನು ಎಷ್ಟು ಆದರದಿಂದ ಹೇಳುವರೋ ಅಷ್ಟೇ ಆದರದಿಂದ ಹೆಂಡ್ಸ್ಕಡುಕ ರತ್ನನ ಪದಗಳನ್ನೂ ಕೇಳುವರು. ಮತ್ತೆ ಮತ್ತೆ ಓದಿಸಿ ಅವುಗಳ ಸವಿಯನ್ನು ಹೀರುತ್ತಿದ್ದರು, ಆನಂದಿಸುತ್ತಿದ್ದರು. ಅವರ ರುಚಿ ವಿಶಾಲವಾಗಿತ್ತು. ಅದಕ್ಕೆ ಹೊಸತು ಹಳತೆಂಬ ಭೇದವಿರಲಿಲ್ಲ ಬ್ರಹ್ಮಸಮಾಜದ ಕೀರ್ತನೆಗಳಿಗೆ ಅವರು ಮಾರು ಹೋಗಿದ್ದರು. ಸುಶ್ರಾವ್ಯವಾಗಿ ಭಜನೆಯ ಕೀರ್ತನೆಗಳನ್ನು ಕೇಳುತ್ತಿದ್ದರು. ದಿನ ಸಂಜೆ ಏಳು ಘಂಟೆಯ ಮೇಲೆ ಕೈ ಕಾಲು ತೊಳೆದುಕೊಂಡು ಬಂದು ನಾವು ಅಮ್ಮನ ಸುತ್ತ ಕುಳಿತು ಕೊಳ್ಳುತ್ತಿದ್ದೆವು. ಪ್ರಾರ್ಥನೆ ಮೊದಲಾಗುತ್ತಿತ್ತು.

ನಮಸ್ತೇ ಸತೇತೇ ಜಗತ್ಕಾರಣಾಯ
ನಮಸ್ತೇ ಚಿತೇ ಸರ್ವಲೋಕಾಶ್ರಯಾಯ
ನಮೋದ್ವೈತ ತತ್ವಾಯ ಮುಕ್ತಿಪ್ರದಾಯ
ನಮೋ ಬ್ರಹ್ಮಣೇ ವ್ಯಾಪಿನೇ ಶಾಶ್ವತಾಯ ||

ತ್ವಮೇಕಂ ಶರಣ್ಯಂ ತ್ವಮೇಕಂ ವರೇಣ್ಯಂ
ತ್ವಮೇಕಂ ಜಗತ್ಪಾಲಕಂ ಸ್ವಪ್ರಕಾಶಂ
ತ್ವಮೇಕಂ ಜಗತ್ಕರ್ತೃ ಪಾತೃ ಪ್ರಹರ್ತೃ
ತ್ವಮೇಕಂ ಪರಂ ನಿಶ್ಚಲಂ ನಿರ್ವಿಕಲ್ಪಂ ||

ಭಯಾನಾಂ ಭಯಂ ಭೀಷಣಂ ಭೀಷಣಾನಾಂ
ಗತಿಃ ಪ್ರಾಣಿನಾಂ ಪಾವನಂ ಪಾವನಾನಾಂ
ಮಹೋಚ್ಚೈ ಪದಾನಾಂ ನಿಯಂತೃ ತ್ವಮೇಕಂ
ಪರೇಷಾಂ ಪರಂ ರಕ್ಷಣಂ ರಕ್ಷಣಾನಾಂ ||

ವಯಂತ್ವಾಂ ಸ್ಮರಾಮೊ ವಯಂತ್ವಾಂ ಭಜಾಮೊ
ವಯಂತ್ವಾಂ ಜಗತ್ಸಾಕ್ಷಿರೂಪಂ ನಮಾಮಃ
ಸದೇಕಂ ನಿಧಾನಂ ನಿರಾಲಂಬಮೀಶಂ
ಭವಾಂಭೋಧಿ ಪೋತಂ ಶರಣ್ಯಂ ವ್ರಜಾಮಃ ||

ಅಸತೋಮಾ ಸದ್ಗಮಯ ತಮಸೋಮಾ ಜ್ಯೋತಿರ್ಗಮಯ
ಮೃತ್ಯೋರ್ಮಾ ಅಮೃತಂಗಮಯ
ಆವಿರಾವೀರ್ಮ ಏಧಿ, ರುದ್ರ
ಯತ್ತೇ ದಕ್ಷಿಣಂ ಮುಖಂ ತೇನಮಾಂ ಪಾಹಿನಿತ್ಯಂ ||

ಶ್ಲೋಕಗಳ ಪಠನೆಯಾದಮೇಲೆ ಆ ಶ್ಲೋಕದ ತಾತ್ಪರ್ಯವನ್ನು ಒಬ್ಬರು ಓದುವುದು ಮುಸ್ಲಿಮರು ಅದನ್ನೇ ಕ್ರಿಶ್ಚಿಯನರು ತಮ್ಮ ಪ್ರಾರ್ಥನಾಮಂದಿರ ಗಳಲ್ಲಿ ಪಠಿಸುವಂತೆ ಹೇಳುವುದು. ಹೀಗೆ ಪ್ರಾರ್ಥನೆ ಮುಂದುವರಿಯುತ್ತಿತ್ತು.

" ಸತ್ಯಸ್ವರೂಪನು, ಜಗತ್ತಿಗೆ ಕಾರಣನು, ಜ್ಞಾನ ಸ್ವರೂಪನು, ಸಕಲ ಲೋಕಗಳಿಗೆ ಆಶ್ರಯನು ಆದ ನಿನಗೆ ನಮಸ್ಕಾರವು — ಸಮಾನಾಧಿಕಾ ದ್ವಿತೀಯನು. ಮುಕ್ತಿಯನ್ನು ಪ್ರಸಾದಿಸುವವನು, ಸರ್ವವ್ಯಾಪಿಯು, ನಿತ್ಯನು ಬ್ರಹ್ಮವು ಆದ ನಿನಗೆ ನಮಸ್ಕಾರವು—

ನೀನು ಒಬ್ಬನೇ ಶರಣ್ಯನು, ನೀನು ಒಬ್ಬನೇ ವರೇಣ್ಯನು, ನೀನು ಒಬ್ಬನೇ ಲೋಕವನ್ನು ಕಾಪಾಡುವವನು – ಸ್ವಪ್ರಕಾಶನು, ನೀನು ಒಬ್ಬನೇ ಜಗತ್ತನ್ನು ಸೃಷ್ಟಿಸಿ' ರಕ್ಷಿಸಿ ಇಚ್ಛೆಬಂದುದನ್ನು ವಿನಾಶಮಾಡುವುದಕ್ಕೆ ಶಕ್ತಿಯುಳ್ಳವನು, ನೀನು ಒಬ್ಬನೇ ಸಕಲಕ್ಕಿಂತ ಶ್ರೇಷ್ಠನು. ನಿಶ್ಚಲನು, ವಿಕಲ್ಪವಿಲ್ಲದವನು."

ನೀನು ಸಕಲ ಭಯಂಕರ ವಸ್ತುಗಳಿಗೆ ಭಯಂಕರನು, ಸರ್ವ ಭಯಾನಕಗಳಿಗೆ ಭಯಾನಕನು, ಜೀವಿಗಳಿಗೆ ಗತಿ, ಪರಮಪಾವನನು. ನೀನು ಒಬ್ಬನೇ ಮಹೋತ್ಕೃಷ್ಟ ಪದವಿಗಳಿಗೆ ಕರ್ತನು, ಸರ್ವ ಶ್ರೇಷ್ಠನು ಮಹಾರಕ್ಷಕನು.

ನಾವು ನಿನ್ನನ್ನು ಸ್ಮರಿಸುವೆವು, ನಾವು ನಿನ್ನನ್ನು ಭಜಿಸುವೆವು, ಜಗತ್ತಿಗೆ ಸಾಕ್ಷಿ ರೂಪನಾದ ನಿನ್ನನ್ನು ನಮಸ್ಕರಿಸುವೆವು. ನೀನು ಸತ್ಯ ಸ್ವರೂಪನು, ನೀನು ಒಬ್ಬನೇ ಆದಿ ಕಾರಣನು, ಅವಲಂಬ ರಹಿತನು, ಶ್ರೇಷ್ಠನು. ಪಾಪ ಸಮುದ್ರಕ್ಕೆ ತರಣಿಯಾದಂಥ ನಿನ್ನೊಬ್ಬನನ್ನೇ ಶರಣು ಹೊಂದುವೆವು.

ಅಸತ್ಯಮಾರ್ಗದಿಂದ ನಮ್ಮನ್ನು ತೊಲಗಿಸಿ ಸತ್ಯಮಾರ್ಗಕ್ಕೆ ಕೊಂಡು ಹೋಗು. ಅಜ್ಞಾನಾಂಧಕಾರದಿಂದ ನಮ್ಮನ್ನು ಬಿಡಿಸಿ ಜ್ಞಾನಜ್ಯೋತಿಯಂ ಹೊಂದುವ ಹಾಗೆ ಮಾಡು. ಅನಿತ್ಯ ಸ್ಥಿತಿಯಂ ಬಿಡಿಸಿ ನಮ್ಮನ್ನು ಶಾಶ್ವತ ಪದವಿಯಂ ಹೊಂದಿಸು. ಹೇ ಸ್ವಪ್ರಕಾಶನೇ! ನಮ್ಮ ಸಮೀಪದಲ್ಲಿ ಪ್ರಕಾಶಿಸು. ದುಃಖವನ್ನು ಹೋಗಲಾಡಿಸುವವನೇ ನಿನ್ನ ಕರುಣಾವೆಂಬ ಮುಖದಿಂದ ನಮ್ಮನ್ನು ಸರ್ವದಾ ಸಂರಕ್ಷಿಸು."

ಈ ರೀತಿ ನಮ್ಮ ಅನುದಿನದ ಪ್ರಾರ್ಥನೆ ಕೊನೆಯಾಗುತ್ತಿತ್ತು. ಚಿಕ್ಕಂ ದಿನಲ್ಲಿ ಈ ಶ್ಲೋಕಗಳ ಅರ್ಥವಾಗುತ್ತಿರಲಿಲ್ಲ. ಆದರೆ ಅಲ್ಲಿನ ಧ್ವನಿಶಕ್ತಿಗೆ ನಾವು ಸಂಪೂರ್ಣವಾಗಿ ಮರುಳಾಗಿದ್ದೆವು. ಹೇಳಹೇಳುತ್ತ ಭಕ್ತಿಯ ಆವರಣ ನಮ್ಮನ್ನು ಆವರಿಸುತ್ತಿತ್ತು. ಮಂತ್ರಿಸಿದವರಂತೆ ನಾವು ನಿಶ್ಚಲ ರಾಗಿ ಕುಳಿತುಬಿಡುತ್ತಿದ್ದೆವು. ಅಜ್ಜಿಯ ಸ್ಮರಣೆ ಬಂದಾಗಲೆಲ್ಲ ನಾವು ಪ್ರಾರ್ಥನೆಮಾಡುತ್ತಿದ್ದ ಆ ಕಾಲದ ನೆನಪು ಬರುತ್ತದೆ. ಬಹುಕಾಲ ನಮ್ಮ ಮನೆಯಲ್ಲಿನ ಜೀವನ ಈ ತರದ ಪ್ರಶಾಂತ ವಾತಾವರಣದಲ್ಲಿ ಕಳೆಯಿತು.

# ಕಷ್ಟದ ದಿನಗಳು

ದಿನದಿನದ ಜೀವನ ನಮ್ಮ ಪಾಲಿಗೆ ಸುಸೂತ್ರವಾಗಿ ಸಾಗಿಹೋಗುತ್ತಿತ್ತು. ಆದರೆ ತಂದೆ ಮಾತ್ರ ೧೯೩೬-೩೭-೩೮ ರ ಕಾಲವನ್ನು ಕಷ್ಟದಿಂದ ಕಳೆದರು. ಬಹುತರದ ಕಷ್ಟಗಳು ಒಂದಾಗುತ್ತಲೊಂದು ಕವಿದು ಬಂದು ಅವರ ಮನಸ್ಸಿನ ನೆಮ್ಮದಿಯನ್ನು ಹಾಳುಮಾಡಿದುವು. ಆಗತಾನೆ ನಾನು ಕಾಲೇಜುವ್ಯಾಸಂಗ ಮುಗಿಸಿ ಹೊಸದಾಗಿ ನೌಕರಿಗೆ ಸೇರಿ ಊರೂರು ತಿರುಗುತ್ತಿದ್ದೆ. ತಂದೆಗೆ ಆ ಕಾಲದಲ್ಲಿ ತೋರಿದ್ದ ಕಷ್ಟವಾಗಲಿ ಮನಸ್ಸಿನ ನೆಮ್ಮದಿ ಹಾಳಾಗಿ ಅವರು ಚಿಂತೆಯಿಂದ ಕಳೆಗುಂದಿದುದಾಗಲಿ ನನಗೆ ಆಗ ತಿಳಿಯದು. ಆ ಕಾಲದಲ್ಲಿ ತಂದೆಯು ಬರೆದ ಪತ್ರಗಳನ್ನು ನೋಡಿದ ಮೇಲೆ, ದಿನಚರಿಯ ಹಾಳೆಗಳನ್ನು ತಿರುವಿ ಹಾಕಿದಮೇಲೆ ಅವರಿಗೆ ಒದಗಿ ಬಂದ ಕಷ್ಟ ಏನೆನ್ನುವುದರ ಅರಿವಾಯಿತು. ಅಂಥ ಹಿರಿದಾದ ಕಷ್ಟವೇನೂ ಪ್ರಾಪ್ತವಾಗಿರಲಿಲ್ಲ ಆದರೆ ತಂದೆಯ ಮನಸ್ಸಿನಲ್ಲಿ ಅವ್ಯಕ್ತವಾದ ಭಯವೊಂದು ಮನೆ ಮಾಡಿಕೊಂಡಿತ್ತು. ಏನು ಸಣ್ಣ ಸಂಗತಿ ನಡೆದರೂ ಆಗಿದ್ದ ಅವರ ಮನಸ್ಸಿನ ಸ್ಥಿತಿಯಲ್ಲಿ ಕೆಟ್ಟುದನ್ನೆ ಕಾಣುತ್ತಿದ್ದರು. ಏತರಿಂದ ಈ ಕೆಡಕುಗಳು ಒಂದರ ಹಿಂದೊಂದು ಒದಗಿ ಬರುತ್ತದೋ ಅದರ ಕಾರಣ ಅರಿಯದೆ ಗ್ರಹಗತಿಯಿಂದಲೇ ಈ ರೀತಿ ಆಗುತ್ತಿರಬೇಕು ಎನ್ನುವ ನಿರ್ಧಾರಕ್ಕೆ ಬಂದರು. ಜ್ಯೋತಿಷ್ಯದಲ್ಲಿದ್ದ ನಂಬಿಕೆ ಈ ಕಾಲದಲ್ಲಿ ದೃಢವಾಯಿತು.

ತಂದೆ ಕೆಲವು ದಿನಗಳ ಹಿಂದೆ ಮಿತ್ರರು ಹಲವರ ಪ್ರೇರಣೆಯಂತೆ Indian Merchants Bank ಎನ್ನುವ ಬ್ಯಾಂಕಿನ ಡೈರೆಕ್ಟರುಗಳಲ್ಲೊಬ್ಬರಾದರು. ಬ್ಯಾಂಕಿನ ಮಿಕ್ಕ ಡೈರೆಕ್ಟರುಗಳ ಓಡಾಟ ನಮ್ಮ ಮನೆಯಲ್ಲಿ ಆಗ ಹೆಚ್ಚಾಗಿತ್ತು. ದಿನ ಕಳೆದಂತೆ ತಂದೆ ಈ ಬ್ಯಾಂಕಿನ ವ್ಯವಹಾರದಲ್ಲಿ ಹೆಚ್ಚುಹೆಚ್ಚು ಮುಳುಗಿಹೋದರು. ವ್ಯವಹಾರದಲ್ಲಿ ಅದೇನು ಹೆಚ್ಚುಕಮ್ಮಿಯಾಯಿತೋ ನಾನರಿಯೆ. ಅದೊಂದು ದೊಡ್ಡ ಕತೆಯೆಂದೇ ಕಾಣುತ್ತದೆ. ಒಮ್ಮೆಗೇ ಬ್ಯಾಂಕಿನ ಮ್ಯಾನೇಜಿಂಗ್ ಡೈರೆಕ್ಟರಾದ ಶ್ರೀ ಥಕ್ಕರ್ ಅವರು ರಂಗೂನಿನಲ್ಲಿ ದಸ್ತಗಿರಿಯಾದರು. ಸಮಾಚಾರ ಕೇಳಿ

ತಂದೆಯ ಮನಸ್ಸಿನ ನೆಮ್ಮದಿಯೆಲ್ಲ ಹಾಳಾಗಿ ಹೋಯಿತು. ಮನಸ್ಸಿನಲ್ಲಿ ಏನೊ ಒಂದು ಬಗೆಯ ದಿಗಿಲು ಹುಟ್ಟಿಕೊಂಡಿತು. ಯಾಕಾಗಿ ಈ ಕೆಲಸಕ್ಕೆ ಕೈ ಹಾಕಿದೆನೋ ಎಂದೆನಿಸಿತು. ದಿನಚರಿಯ ಹಾಳೆಗಳೆಲ್ಲದರಲ್ಲಿ ಬ್ಯಾಂಕಿನ ವಿಷಯವೇ ಆಯಿತು " ಖಿನ್ನನಾಗಿದ್ದೇನೆ, ಧೈರ್ಯವೆಲ್ಲ ಹೋಗಿಬಿಟ್ಟಿದೆ. ಆದರೂ ಎದುರಿಸಲು ಪ್ರಯತ್ನಿಸುತ್ತಿದ್ದೇನೆ. ಆರೋಗ್ಯವಿಲ್ಲದ ಭಯ, ಬ್ಯಾಂಕಿನ ವ್ಯವಹಾರದಲ್ಲಿ ನನ್ನ ಆಸ್ತಿಯೆಲ್ಲ ಹಾಳಾಗುವುದೆನ್ನುವ ಭಯ, ನನ್ನ ಮಕ್ಕಳಿಗೆ ಒಳ್ಳೆಯದಾಗಲಿಲ್ಲವಲ್ಲ ಎಂಬ ಚಿಂತೆ, ಇವೆಲ್ಲ ನಿಧಾನವಾಗಿ ನನ್ನನ್ನು ಕಿತ್ತು ತಿನ್ನುತ್ತಿವೆ. ಸರಿಯಾಗಿ ಊಟ ಮಾಡುವುದು ಬಿಟ್ಟೆ. ಓದುವುದು ಬರೆಯುವುದು ಬಿಟ್ಟೆ. ಏನು ಮಾಡಲೂ ಮನಸ್ಸಿಲ್ಲದೆ ಹೋಗಿದೆ. ಯಾವುದರಲ್ಲೂ ಉತ್ಸಾಹವಿಲ್ಲ. ಇಷ್ಟು ದಿನ ಕಷ್ಟದಿಂದ ದುಡಿದು ನ್ಯಾಯವಾಗಿ ಸಂಪಾದಿಸಿದ ನನ್ನ ಆಸ್ತಿಯೆಲ್ಲ ಹಾಳಾಗಿಹೋಗುವುದೇನೊ, ನನ್ನ ಮರಣದಲ್ಲಿ ಕೊನೆಯಾಗುವುದೇನೊ ಎನ್ನುವ ಹೆದರಿಕೆ ತಲೆದೋರಿದೆ. ದೇವರ ಆಗ್ರಹ ನನ್ನಮೇಲೆ ಬಹಳವಾಗಿದೆ ಇಷ್ಟು ಕೋಪಕ್ಕೆ ಗುರಿಯಾಗಲು ನಾನೇನು ಮಾಡಿದೆನೋ. ಎಲ್ಲ ಚಟುವಟಿಕೆಯನ್ನೂ ಬಿಟ್ಟು ಸಾವನ್ನೆ ಎದುರುನೋಡುತ್ತ ಸುಮ್ಮನೆ ಕುಳಿತುಕೊಳ್ಳುವಂತೆ ಮನಸ್ಸಾಗುತ್ತದೆ. ಸಂತೋಷವಿಲ್ಲ, ಲವಲವಿಕೆಯಿಲ್ಲ, ಜೀವನದಲ್ಲಿ ರುಚಿಯಿಲ್ಲ. ಸುತ್ತ ಎಲ್ಲಿ ನೋಡಲಿ ಕತ್ತಲು, ನಿರಾಶೆ. ಈಗ ಕೆಲವು ದಿನಗಳಿಂದ ಅದರಲ್ಲೂ ಈ ಹೊತ್ತು ನನ್ನ ಮನಸ್ಸು ಈ ರೀತಿ ಓಡುತ್ತಿದೆ. ದೇವರು ನನಗೆ ದಾರಿ ತೋರಬೇಕು. "

ತಂದೆ ಇಷ್ಟು ಖಿನ್ನರಾಗಿದ್ದರೂ ಮನೆಯವರಿಗೆ ಯಾರಿಗೂ ಇದನ್ನು ತೋರ್ಪಡಿಸಿರಲಿಲ್ಲ. ನಮ್ಮಲ್ಲಿ ಯಾರಿಗೂ ತಂದೆಯ ಮನಸ್ಸಿನಲ್ಲಿ ನಡೆಯುತ್ತಿದ್ದ ಹೋರಾಟದ ಬಿಸಿ ತಗುಲಿರಲಿಲ್ಲ. ಬ್ಯಾಂಕಿನ ವ್ಯವಹಾರವೇ ಅವರನ್ನು ಕಿತ್ತು ತಿನ್ನುತ್ತಿತ್ತು. ಸುಮಾರು ಎರಡು ವರ್ಷಕಾಲ ಅದರಲ್ಲಿಯೇ ಹೆಣಗಿದರು. ಈ ಕಾಲದಲ್ಲಿ ಬಹು ದುಡ್ಡು ಅವರ ಕೈ ತಪ್ಪಿ ಹೋದಂತೆ ಕಾಣುತ್ತದೆ. ಮನಸ್ಸಿಗೆ ನೆಮ್ಮದಿ ದೊರೆಯಿತೋ ಇಲ್ಲವೋ ಹೇಳಲಾರೆ.

ಕಷ್ಟ ಬಂದಾಗ ಒಟ್ಟೊಟ್ಟಿಗೆ ಬರುತ್ತದೆ. ಎಲ್ಲೆಲ್ಲೂ ಅಪಶಕುನಗಳೇ ತಲೆದೋರುತ್ತವೆ. ಈ ಕಾಲದಲ್ಲೆ ಒಂದು ದಿನ ಹದ್ದು ಸತ್ತ ಪಾರಿವಾಳ ಒಂದನ್ನು ಎತ್ತಿಕೊಂಡು ಮನೆಯೊಳಗೆ ನುಗ್ಗಿ ಬಂತಂತೆ. ಮೊದಲೇ ಖಿನ್ನವಾದ ಮನಸ್ಸಿನಮೇಲೆ ಬರೆ ಎಳೆದಂತಾಯಿತು. ಅವ್ಯಕ್ತವಾದ ಭಯ ತಂದೆಯನ್ನು ಕಾಡುತ್ತಿತ್ತು.

ಅದೇ ಕಾಲದಲ್ಲಿ ನಮ್ಮ ಮನೆಯಲ್ಲಿ ಬಹು ದಿನದಿಂದ ಬಾಳಿದ ಹಸು ಮೇಯುವುದಕ್ಕೆ ಹೋಗಿದ್ದು ಮನೆಗೆ ಬರದೆ ಬಯಲಲ್ಲೆ ಸತ್ತುಹೋಯಿತು. ಮೇಯಲು ಅದು ಎಂದೂ ಮನೆಯಿಂದ ಹೊರಗೆ ಹೋಗಿರಲಿಲ್ಲ. ಅಂದೇ ಹೋಗಿತ್ತು. ಮತ್ತೆ ಹಿಂದಕ್ಕೆ ಬರಲಿಲ್ಲ. ಹಸುವನ್ನು ಕಂಡರೆ ತಂದೆ ತಾಯಿಯರಿಬ್ಬರಿಗೂ ಪ್ರಾಣ. ಹಸು ಕಳೆದುಕೊಂಡು, ತೀರ ಆಪ್ತ ಬಂಧುವನ್ನು ಕಳೆದುಕೊಂಡಂತೆ ಅತ್ತರು. ತಂದೆ ತಮ್ಮ ದಿನಚರಿಯಲ್ಲಿ "ಕಳೆದ ಹದಿನೈದು ವರ್ಷಗಳಿಂದ ನಮ್ಮ ಅಚ್ಚುಮೆಚ್ಚಾಗಿ ಬೆಳೆದು, ನನ್ನೆಲ್ಲ ಮಕ್ಕಳಿಗೂ ಹಾಲು ಕೊಟ್ಟು ದೊಡ್ಡವರನ್ನಾಗಿ ಮಾಡಿದ ಹಸು ಇಂದು ಗವೀಪುರದ ಕಾಡಿನಲ್ಲಿ ಸತ್ತುಹೋಯಿತು. ನಮಗೆ ಅದು ನೀಡಿದ ಉಪಕಾರವನ್ನು ಸ್ಮರಿಸಿ ಕೃತಜ್ಞತೆಯಿಂದ ಆಕೆಯ ಶರೀರವನ್ನು ಒಂದು ಕಡೆ ಮಣ್ಣುಮಾಡಿದೆವು" ಎಂದು ಬರೆದರು.

ಮನೆಯಲ್ಲಿ, ಹೊರಗೆ, ಏನು ನಡೆದರೂ ಆ ಕಾಲದಲ್ಲಿ ಅದು ವಿಪರೀತವಾಗಿಯೇ ಕಾಣುತ್ತಿತ್ತು. ತಾಯಿ ಕಾಲು ಜಾರಿ ಬಚ್ಚಲುಮನೆಯಲ್ಲಿ ಬಿದ್ದರು. ದೀಪಾವಳಿಯ ದಿನ ಪಟಾಕಿ ಹಾರಿಸುವುದನ್ನು ಹುಡುಗರಿಗೆ ತೋರಿಸಹೋಗಿ, ಪಟಾಕಿ ಕೈಮೇಲೆ ಬಲವಾಗಿ ಸಿಡಿದು ತಂದೆಯ ಕೈಯೇ ಹೋಗುವಂತೆ ಆಯಿತು. ಮನೆಗೆ ಕಳ್ಳರು ಬೀಳಲು ಪ್ರಯತ್ನಿಸಿದರು. ಒಂದು ರಾತ್ರಿ ಬಚ್ಚಲುಮನೆಯ ಹೆಂಚಿನಿಂದ ಕಳ್ಳ ಇಳಿದು ಬರುತ್ತಿರುವುದನ್ನು ಆಗತಾನೆ ಆ ಕಡೆ ಹೋಗಿ ನೋಡಿದ ತಾಯಿ ದಿಗಿಲು ಬಿದ್ದು ಕಿರಿಚಿಕೊಂಡರು. ಕಳ್ಳನೇನೋ ಓಡಿಹೋದ. ಆದರೆ ಮನಸ್ಸಿನ ಮೇಲೆ ಪರಿಣಾಮ ಬಹಳವಾಯಿತು. ಈ ಕಾಲಕ್ಕೆ ಮಕ್ಕಳ ನಡವಳಿಕೆಯೂ ತಂದೆಯ

ಕಣ್ಣಿಗೆ ವಿಪರೀತವಾಗಿ ತೋರಿತು. ಹದ್ದಿಲ್ಲದೆ ಅಂಕೆಯಿಲ್ಲದೆ ಮಕ್ಕಳು ಬೆಳೆಯುತ್ತಿದ್ದಾರೆ ಎನಿಸಿತು.

ಮೊದಲಿಂದಲೂ ತಂದೆಗೆ ಜ್ಯೋತಿಷ್ಯದಲ್ಲಿ, ಗ್ರಹಗತಿಯಲ್ಲಿ, ಭವಿಷ್ಯ ಹೇಳುವವರಲ್ಲಿ, ಅತಿಯಾದ ನಂಬಿಕೆಯಿತ್ತು. ಇಂಥ ಕಷ್ಟದ ಸಂದರ್ಭಗಳಲ್ಲಿ ಆ ನಂಬಿಕೆ ದೃಢವಾಯಿತು. ಕೈ ನೋಡಿ ಕಣಿ ಹೇಳುವವರಿಗೆಲ್ಲ ನಮ್ಮ ಮನೆಯಲ್ಲಿ ಸಂಭ್ರಮದ ಸ್ವಾಗತ ದೊರೆಯಿತು. ಮನೆಮಕ್ಕಳ ಕೈಯನ್ನೆಲ್ಲ ಇಂಥವರಿಗೆ ತೋರಿಸುವುದು ಮಾಮೂಲಾಯಿತು. ಭವಿಷ್ಯ ನುಡಿಯುವವರಲ್ಲಿ ಬಲವಾದ ನಂಬಿಕೆ ಹುಟ್ಟಿತು.

" ಗ್ರಹನಕ್ಷತ್ರಗಳಿಂದ ನಮ್ಮ ಜೀವನದಮೇಲೆ ಪರಿಣಾಮವಿದೆ ಎನ್ನುವುದರಲ್ಲಿ ನನಗೆ ಈಗೀಗ ನಂಬಿಕೆ ಹುಟ್ಟುತ್ತಿದೆ. ಇಲ್ಲದಿದ್ದರೆ, ನಾವೇನು ಮಾಡದೇ ಇದ್ದರೂ ಏತಕ್ಕೆ ಇದ್ದಕ್ಕಿದ್ದ ಹಾಗೇ ಎಲ್ಲ ಕೆಟ್ಟುಹೋಗಬೇಕು. ಇನ್ನು ಕೆಲವು ವೇಳೆ ಒಂದಾಗುತ್ತಲೊಂದು ಒಳ್ಳೆಯದಾಗುತ್ತ ಒಂದು ಆಶ್ಚರ್ಯ ಹುಟ್ಟಿಸುತ್ತದೆ. ಎಲ್ಲಿ ತಿರುಗಲಿ ಅದೃಷ್ಟ ನಗುಮುಖ ತೋರಿಸುತ್ತದೆ. ಯಾವುದಕ್ಕೆ ಕೈ ಹಾಕಿದರೂ ಸರಿಹೋಗುತ್ತದೆ. ಶುಭವಾಗುತ್ತದೆ. ಎಲ್ಲ ಸುಖವಾಗಿ ಸಾಗುತ್ತದೆ. ಇನ್ನು ಕೆಲವು ವೇಳೆ ಈಗಿನಂತೆ ಎಲ್ಲ ಕೆಟ್ಟು ಹೋಗುತ್ತದೆ. ಹೀಗಾಗುವುದು ಗ್ರಹಗತಿಯಿಂದಲ್ಲದೆ ಬೇರೆಯಲ್ಲ ಎಂದು ದೂರಲೇಬೇಕಾಗುತ್ತದೆ."

ತಂದೆಗೆ ಈ ರೀತಿ ತಮ್ಮ ಒಳ ಜೀವನದಲ್ಲಿ ನೆಮ್ಮದಿ ದೊರೆಯದೆ ಹೋದರೂ ಹೊರಪ್ರಪಂಚದಲ್ಲಿ ಕೆಲವೊಂದು ಸಂಗತಿಗಳು ನಡೆದು ಹಾರಿ ಹೋಗಿದ್ದ ನೆಮ್ಮದಿಯನ್ನು ಸ್ವಲ್ಪಮಟ್ಟಿಗಾದರೂ ಹಿಂದೆ ತಂದು ಮನಸ್ಸನ್ನು ಸುಖಶಾಂತಿಯ ವಾತಾವರಣದಲ್ಲಿ ಓಲಾಡಿಸುತ್ತಿದ್ದುವು. ಅವ್ಯಕ್ತವಾದ ಭಯದಿಂದ, ಏನೋ ಒಂದು ವಿಧವಾದ ದುಗುಡದಿಂದ ಮನಸ್ಸೆಲ್ಲ ಅಂಧಕಾರ ಕವಿದು ಮುಂದೇನು ಮಾಡಲಿ ಎಂದು ಚಿಂತಿಸುತ್ತ ಕುಳಿತಿರುವ ಕಾಲದಲ್ಲಿ ಶ್ರೀ ರಾಜರತ್ನಂ ಅವರು ತಮ್ಮ ಬುದ್ಧವಚನಾಮೃತವನ್ನು ಮನೆಯ ಬಾಗಿಲವರೆಗೆ ತಂದು ಎರೆದು ಹೋದರು. ಬುದ್ಧನ ವಚನಗಳನ್ನು

ಓದುತ್ತ ತಂದೆಯ ಮನಸ್ಸಿಗೆ ಶಾಂತಿ ಬಂತು. ರಾಜರತ್ನಂ ಅವರ ಪುಸ್ತಕಗಳು ಮನಸ್ಸಿಗೆ ಶಾಂತಿ ಕೊಟ್ಟುದನ್ನು ತಮ್ಮ ದಿನಚರಿಯ ಹಾಳೆಗಳಲ್ಲಿ ಉದ್ವೇಕ್ಯಾ ನೆನೆಸಿಕೊಂಡಿದ್ದಾರೆ.

ಅಷ್ಟು ದಿನ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹೋರಾಟ ನಡೆಸಿದ್ದ ಅಖಿಲಭಾರತ ಕಾಂಗ್ರೆಸ್ ಆ ಹೊತ್ತಿಗಾದರೂ ಹೋರಾಟ ನಿಲ್ಲಿಸಿ ಆಡಳಿತ ಸೂತ್ರವನ್ನು ವಹಿಸಿಕೊಂಡಿತ್ತು. ಎಲ್ಲರೊಂದಿಗೆ ತಂದೆ ಕೂಡ ಕೃತಕೃತ್ಯರಾದಂತೆ ಸಂತೋಷಪಟ್ಟರು. ದೇಶ ಬೇಗನೆ ಏಳಿಗೆ ಹೊಂದೀತು, ಹಿಂದುಳಿದವರ ಉದ್ಧಾರ ಇನ್ನು ಮುಂದೆಯಾದರೂ ತ್ವರೆಯಿಂದ ಸಾಗೀತು ಎಂದು ಆಶಿಸಿದರು.

ಈ ಸಮಯಕ್ಕೆ ಮೈಸೂರಿನಲ್ಲಿ ಮಹಾರಾಜರು ಅರಮನೆಯೊಳಕ್ಕೆ ಹರಿಜನರು ಪ್ರವೇಶಿಸಲು ಅನುಮತಿ ಕೊಟ್ಟರು. ಈ ಅನುಮತಿ ದೊರೆತುದರಿಂದ ಉಂಟಾದ ಆನಂದ ಇನ್ನೂ ಅನುಭವಿಸುತ್ತಿರುವಾಗಲೇ ತಿರುವಾಂಕೂರು ಮಹಾರಾಜರು ತಮ್ಮ ನಾಡಿನ ದೇವಾಲಯಗಳೆಲ್ಲವನ್ನೂ ಹರಿಜನರಿಗಾಗಿ ತೆರೆಯಬೇಕೆಂದು ಕೊಟ್ಟ ಸಂದೇಶ ದೇಶಾದ್ಯಂತವನ್ನೂ ರೋಮಾಂಚಗೊಳಿಸಿತು. ಹರಿಜನರ ಸ್ಥಾನಮಾನಗಳಿಗಾಗಿ ಹೊಡೆದಾಡುತ್ತಿದ್ದ ಎಲ್ಲ ಕೆಲಸಗಾರರಿಗೂ ಕಾರ್ಯ ಸಾಧಿಸಿದುದರ ಹಿಗ್ಗುಂಟಾಯಿತು. ತಂದೆ ಸಮಾಚಾರ ಕೇಳಿ ಹಿರಿದಾಗಿ ಸಂತೋಷಪಟ್ಟರು.

ಅಂಧಕಾರ ಹಬ್ಬಿದ ತಂದೆಯ ಮನಸ್ಸಿನೊಳಗೆ ಆಗೊಮ್ಮೆ ಈಗೊಮ್ಮೆ ಸುಖ ಎನ್ನುವುದು ಮಿಂಚಿನಂತೆ ಮಿಂಚಿ ಮಾಯವಾಗುತ್ತಿತ್ತು. ಇದೇ ಸುಮಾರಿಗೆ (ಜುಲೈ ೨೩, ೧೯೩೮) ಹಿತೈಷಿಗಳೂ, ಹಿರಿಯರೂ, ಪರಮ ಮಿತ್ರರೂ, ತಮ್ಮ ನೆರೆಯವರೂ ಆದ ಸರ್ ಪುಟ್ಟಣ್ಣಶೆಟ್ಟರು ದೈವಾಧೀನರಾದರು.

# ಸರ್ ಪುಟ್ಟಣ್ಣಶೆಟ್ಟರು

ಪುಟ್ಟಣ್ಣಶೆಟ್ಟರ ಹೆಸರನ್ನು ಕೇಳದ ಬೆಂಗಳೂರಿನ ನಾಗರಿಕ ಯಾವನೂ ಇರಲಾರ. ಶೆಟ್ಟರವರು ಬೆಂಗಳೂರು ನಗರದ ಒಂದು ಅಂಗವಾಗಿಯೇ ಬೆಳೆದರು. ಆ ನಗರದಲ್ಲಿ ಒಳ್ಳೆಯವು ಏನೇನಿದೆಯೋ ಅವು ಹುಟ್ಟಿಕೊಳ್ಳುವುದಕ್ಕೆ ಸ್ವಯಂ ಕಾರಣರಾಗಿದ್ದರು. ಅರವತ್ತೈದು ವರ್ಷಕಾಲ ಆ ಸುಂದರ ನಗರ ಬೆಳೆಯುತ್ತ ಬಂದುದನ್ನು ನೋಡಿದರು. ಕೆಂಪೇಗೌಡ ನುಡಿದ ಭವಿಷ್ಯ ಕಾರ್ಯರೂಪಕ್ಕೆ ಬಂದುದನ್ನು ಕಣ್ಣಾರೆ ಕಂಡರು. ಆ ಕಾರ್ಯದಲ್ಲಿ ತಾವೂ ಮುಖ್ಯಪಾತ್ರ ವಹಿಸಿದ್ದರು.

ನಾಡನ್ನು ನಕ್ಕು ನಗಿಸುವ ನದಿ ಅಜ್ಞಾತವಾಗಿ ಎಲ್ಲೋ ಹುಟ್ಟಿ ಬರಬರುತ್ತಾ ದೊಡ್ಡದಾಗುತ್ತ ವಿಶಾಲವಾಗುತ್ತ ಬಂದು ತಾನು ಸೋಕಿದ ನೆಲವನ್ನು ಪಾವನಗೊಳಿಸುತ್ತ ಸುಖಸಂಪತ್ತಿನಿಂದ ತುಂಬುವಂತೆ, ಪುಟ್ಟಣ್ಣಶೆಟ್ಟರೂ ಅಜ್ಞಾತವಾದ ಸಂಸಾರವೊಂದರಲ್ಲಿ ಜನ್ಮವೆತ್ತಿ ಅಂಥ ವಿದ್ಯೆ ಸಂಸ್ಕಾರಗಳನ್ನು ಪಡೆಯದಿದ್ದರೂ ಸ್ವಂತ ದುಡಿಮೆಯಿಂದ ಮೇಧಾಶಕ್ತಿಯಿಂದ ಹಿರಿಯಪದವಿಯನ್ನು ಗಳಿಸಿಕೊಂಡು, ವಿಶಾಲವಾದ ತುಂಬುಜೀವನವನ್ನು ಬಾಳುತ್ತ, ತಾವು ಬೆಳೆದ ನಾಡನ್ನು ಬೆಳಗುತ್ತ, ನಗರವನ್ನು ಅಂದಗೊಳಿಸುತ್ತ, ಎಲ್ಲರಿಗೂ ಬೇಕಾದವರಾಗಿ, ಎಲ್ಲ ಸಂಸ್ಥೆಗಳ ಹಿರಿಯರಾಗಿ, ರಾಜರಿಂದ ಗೌರವಿತರಾಗಿ, ಹಿರಿಯಬಾಳು ಬಾಳಿದರು. ಸರ್ಕಾರಕ್ಕೆ ಸಲಹೆ ಕೊಡುವ ಹಿರಿಯರಾದರು. ಜನರ ವಿಶ್ವಾಸ ಮನ್ನಣೆಗಳನ್ನು ಗಳಿಸಿ ಅವರ ಮುಖಂಡರಾದರು ವಿಶ್ವವಿದ್ಯಾನಿಲಯದಂಥ ವಿದ್ವತ್‌ಸಂಸ್ಥೆ ಕೊಡಬಹುದಾದ ಹಿರಿಯ ಗೌರವಕ್ಕೆ ಪಾತ್ರರಾದರು. ೮೨ ವರ್ಷಕಾಲ ಬಾಳಿ ಕೀರ್ತಿಕಾಯರಾದರು. ಅವರಂತೆ ನಾಡಿನ ಜೀವನದಲ್ಲಿ ಇಂಥ ಹಿರಿಯ ಪದವಿಯನ್ನು ಗಳಿಸಿಕೊಂಡು ಬಾಳಿದವರು ಹಿಂದೆ ಇರಲಿಲ್ಲ. ಈಗಲೂ ಯಾರೂ ಇಲ್ಲ.

ಮೈಸೂರು ರಾಜ್ಯ ಇನ್ನೂ ಕಮಿಷನರ ಆಳ್ವಿಕೆಯಲ್ಲಿರುವಾಗಲೇ ಪುಟ್ಟಣ್ಣಶೆಟ್ಟರು ಆ ರಾಜ್ಯಭಾರದ ಅಂಗವಾಗಿದ್ದರು. ರಾಜ್ಯ ಮಹಾರಾಜರ

ಕೈವಶವಾದ ಮೇಲೆ ಆಡಳಿತಕ್ರಮ ಸುಸೂತ್ರವಾಗಿ ನಡೆಯುವಂತೆ ನೋಡಿಕೊಂಡು, ಹೊಸ ರಾಜ್ಯಭಾರದ ಅಸ್ತಿಭಾರ ಹಾಕಿದವರಲ್ಲೊಬ್ಬರಾದರು. ಶೇಷಾದ್ರಿ ಅಯ್ಯರ್‌ರವರ ಅಭಿವೃದ್ಧಿಯ ಕಾರ್ಯಕ್ರಮಗಳಲ್ಲಿ ನೆರವಾಗಿ ನಿಂತು ಮೈಸೂರು ಮಾದರಿ ಸಂಸ್ಥಾನ ಎಂದು ಕೀರ್ತಿ ಗಳಿಸುವಂತೆ ಮಾಡಿದರು. ಬೆಂಗಳೂರು ನಗರವಂತೂ ಅವರ ಶ್ರಮದ ಫಲವಾಗಿ ಅವರ ಕಣ್ಣು ಮುಂದೆಯೇ ಬೆಳೆಯಿತು. ಗುಡಿಗೋಪುರಗಳು, ಶಾಲಾಕಾಲೇಜುಗಳು, ಆಸ್ಪತ್ರೆಗಳು, ಸರಕಾರದ, ಮುನಿಸಿಪಾಲಿಟಿಯ, ಜಿಲ್ಲಾಬೋರ್ಡಿನ ಕಟ್ಟಡಗಳು, ಬ್ಯಾಂಕುಗಳು, ವಿಮಾ ಕಂಪೆನಿಗಳು, ವ್ಯಾಪಾರ ಕೇಂದ್ರಗಳು ಹುಟ್ಟಿ ಬೆಳೆದುವು. ಸಂದಿಗೊಂದಿಗಳು ಮಾಯವಾಗಿ ವಿಶಾಲ ಬೀದಿಗಳಾದುವು. ಬೀದಿಗಳು ಸುಂದರವಾದ ದೀಪಗಳಿಂದ ಬೆಳಗಿದುವು. ರಮ್ಯವಾದ ತೋಟಗಳು ವಿಶಾಲ ಮೈದಾನಗಳು ಹುಟ್ಟಿಕೊಂಡುವು. ಶೆಟ್ಟರು ಇದನ್ನೆಲ್ಲ ನೋಡಿದರು ಈ ಸೊಗಸಿನ ಕಾರ್ಯದಲ್ಲಿ ತಾವೂ ಮುಖ್ಯಪಾತ್ರ ವಹಿಸಿದ್ದರು. ಒಂಭತ್ತು ವರ್ಷಗಳ ಕಾಲ ನಗರಸಭೆಯ ಅಧ್ಯಕ್ಷರಾಗಿ ಕೆಲಸ ಮಾಡಿದರು. ೧೯೦೭ ರಲ್ಲಿ ನ್ಯಾಯವಿಧಾಯಕ ಸಭೆ ಮೊದಲಾದಾಗಿನಿಂದ ೨೫ ವರ್ಷಗಳಿಗೂ ಹೆಚ್ಚುಕಾಲ ಆ ಸಭೆಯ ಸದಸ್ಯರಾಗಿದ್ದರು. ಆಳಿದ ಮಹಾರಾಜರ ಆಳ್ವಿಕೆಯ ರಜತಮಹೋತ್ಸವದ ಸಂದರ್ಭದಲ್ಲಿ ಮೈಸೂರು ನಾಡಿನ ಎಲ್ಲ ಜನತೆಯ ಪ್ರತಿನಿಧಿಯಾಗಿ ಬಿನ್ನವತ್ತಳೆಯನ್ನು ಅರ್ಪಿಸುವ ಹಿರಿಯ ಗೌರವ ಅವರಿಗೆ ಲಭಿಸಿತ್ತು. ಬೆಂಗಳೂರು ನಗರವನ್ನು ಅನೇಕ ರೀತಿಯಲ್ಲಿ ಉತ್ತಮಗೊಳಿಸಿದ ಶೆಟ್ಟರವರ ಉಪಕಾರವನ್ನು ಸ್ಮರಿಸುವುದಕ್ಕೋಸ್ಕರ ಬೆಂಗಳೂರು ನಗರದ ನಾಗರಿಕರೆಲ್ಲ ಶ್ರೀ ವಿಶ್ವೇಶ್ವರಯ್ಯನವರ ಅಧ್ಯಕ್ಷತೆಯಲ್ಲಿ ಸೇರಿ ಬಿನ್ನವತ್ತಳೆ ಅರ್ಪಿಸಿದರು. ಹೀಗೆ ಉಚ್ಚ ನೀಚ, ಹಿರಿಯ ಕಿರಿಯ, ಎಂಬ ಭೇದವಿಲ್ಲದೆ ಎಲ್ಲರಿಂದಲೂ ಮರ್ಯಾದೆಯನ್ನು ಗಳಿಸಿಕೊಂಡು ಶೆಟ್ಟರು ಬಾಳಿದರು.

ಪುಟ್ಟಣ್ಣಶೆಟ್ಟರಿಗೆ ದೇವರು ಒಳ್ಳೆಯ ಆರೋಗ್ಯವನ್ನು ದಯಪಾಲಿಸಿದ್ದ. ತಲೆನೋವೆಂದರೇನು ಅವರು ಕಂಡಿರಲಿಲ್ಲವಂತೆ. ಇಂಥ ಆರೋಗ್ಯ ಅವರ ಬಹುಮುಖವಾದ ಸೇವೆಯಲ್ಲಿ ನೆರವಾಗಿ ನಿಂತಿತು. ಆ ಆರೋಗ್ಯ

ವನ್ನು ಕಾಪಾಡಿಕೊಳ್ಳಲು ತಮ್ಮ ಜೀವನವನ್ನು ಕೂಡ ಕ್ರಮವಾದ ರೀತಿಯಲ್ಲಿ ನಡೆಸಿಕೊಂಡು ಹೋಗುತ್ತಿದ್ದರು. ಎಲ್ಲ ಕೆಲಸಕ್ಕೂ ಕಾಲ ನಿಷ್ಕರ್ಷೆಯಾಗಿ ಅದಕ್ಕೇ ಮೀಸಲಾಗಿರುತ್ತಿತ್ತು. ನೋಡಲು, ಸಲಹೆ ಪಡೆಯಲು ದಿನವೂ ಅವರ ಮನೆಗೆ ಅನೇಕರು ಬಂದು ಹೋಗುತ್ತಿದ್ದರು. ಅವರ ಮಾತಿನಲ್ಲಿ ನಲವಿತ್ತು. ಯಾರನ್ನೂ ಎದುರು ಹಾಕಿಕೊಳ್ಳದೆ ಸರಿತೂಗಿಸಿಕೊಂಡು ಹೋಗುವ ಜಾಣತನವಿತ್ತು. ಅಂತೆಯೇ ಅವರ ಸ್ನೇಹಿತವರ್ಗ ಹಿತೈಷಿಗಳ ಬಳಗ ಅಸಂಖ್ಯಾತವಾಗಿ ಬೆಳೆಯುತ್ತ ಹೋಯಿತು.

ಹಳೆಯ ಕಾಲದವರಾದರೂ, ಅವರು ಹೊಸದರಲ್ಲಿ ಆಸಕ್ತಿಯಿಲ್ಲದೆ ಹಳತನ್ನೇ ನೆನಸುತ್ತಾ ಕುಳಿತವರಲ್ಲ. ಕಾಲ ಬದಲಾಯಿಸಿದಂತೆ ಅದಕ್ಕೆ ಸರಿಯಾಗಿ ಹೊಂದಿಕೊಂಡರು. ಜನರ ಸಾಮಾಜಿಕ ಏಳಿಗೆಗಾಗಿ ಹುಟ್ಟಿಕೊಂಡ ಸಿವಿಕ್‌ಸಂಘದ ಅಧ್ಯಕ್ಷರಾಗಿ ಕೊನೆಯ ತನಕ ಉಳಿದಿದ್ದರು. ಈ ಸಂಘದ ಆಶ್ರಯದಲ್ಲಿ ಪಂಚಮರ ಉದ್ಧಾರ, ಹೆಂಗಸರ ವಿದ್ಯಾಭ್ಯಾಸ, ಸಮಾಜ ಸುಧಾರಣೆ ಈ ಕಾರ್ಯಗಳಲ್ಲಿ ಯಾವ ಯುವಕನಿಗೂ ಇಲ್ಲದ ಉತ್ಸಾಹದಿಂದ ಕೆಲಸ ಮಾಡುತ್ತಿದ್ದರು. "ಜೀವನ ಆಶಾದಾಯಕವಾಗಿದೆ; ಜೀವನದಲ್ಲಿ ಸುಖವಿದೆ; ಆನಂದವಿದೆ, ಮತ್ತೆ ಜೀವಿಸಬೇಕು, ಜೀವನವನ್ನು ಮೊದಲಿಂದ ಪ್ರಾರಂಭಿಸಬೇಕು" ಎಂದು ತಮ್ಮ ಕೊನೆಯ ದಿನಗಳಲ್ಲಿ ಹೇಳುತ್ತಿದ್ದರಂತೆ.

ತಮ್ಮ ಕೊನೆಯ ದಿನಗಳಲ್ಲಿ ಶೆಟ್ಟರು ಅಷ್ಟು ಕಾಲವೂ ತಾವು ಗಳಿಸಿದ್ದ ವಿಪುಲವಾದ ಸಂಪತ್ತನ್ನು ಯುಕ್ತ ರೀತಿಯಲ್ಲಿ ವಿನಿಯೋಗ ಮಾಡಲು ತೊಡಗಿದರು. ತಮ್ಮ ಹೆಮ್ಮೆಯ ನಗರವಾದ ಬೆಂಗಳೂರಿಗೆ ಪುರಭವನವನ್ನು ಕಟ್ಟಿಸಿಕೊಟ್ಟರು. ರೋಗಿಗಳನ್ನು ನೋಡಿಕೊಳ್ಳಲು ಆಸ್ಪತ್ರೆಯನ್ನು ಕಟ್ಟಿಸಿಕೊಟ್ಟರು. ಕನ್ನಡಿಗರು ಹೊಸ ತಿಳುವಳಿಕೆ ಪಡೆಯಲಿ, ಜನ ಏಳಿಗೆ ಹೊಂದಲು ಅನುಕೂಲಿಸುವಂಥ ಸಾಹಿತ್ಯ ಹುಟ್ಟಲಿ, ಎಂದು ಬಯಸಿ ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಒಂದು ಪುದುವಟ್ಟಿನ ಗ್ರಂಥಮಾಲೆಯನ್ನು ಹೊರಡಿಸಲು ಅನುಕೂಲಿಸುವಂತೆ ನಿಧಿ ಅರ್ಪಿಸಿದರು. ಅವರು ಕಣ್ಣುಮರೆಯಾಗುವುದಕ್ಕೆ ಕೆಲದಿನಗಳ ಹಿಂದೆ ಲಿಂಗಾಯತ ವಿದ್ಯಾರ್ಥಿ

ಗಳಿಗೆಂದು ಉಚಿತ ವಿದ್ಯಾರ್ಥಿನಿಲಯವನ್ನು ಪ್ರಾರಂಭಗೊಳಿಸಿದರು. ಬಹು ದಿನದ ಆಶೆ ಅಂದು ನೆರವೇರಿತೆಂದು ಆನಂದಪಟ್ಟರು. ಪುಟ್ಟಣ್ಣಶೆಟ್ಟರನ್ನು ದೂರದಿಂದಲೇ ಕಂಡು ಗೌರವಿಸಿದ ನನ್ನಂಥ ಕಿರಿಯರು ಕೆಲವರಿಗೆ ತಮ್ಮ ಒಂದು ಕೋಮಿನ ಶ್ರೇಯಸ್ಸಿಗಾಗಿ ಅವರು ವಿದ್ಯಾರ್ಥಿನಿಲಯ ಕಟ್ಟಿ ಕೊಟ್ಟದ್ದು ಸರಿಯಾಗಿ ತೋರಲಿಲ್ಲ. ಶೆಟ್ಟರು ಜೀವಿಸಿರುವವರೆಗೂ ತಮ್ಮ ಒಂದು ಕೋಮಿನ ಪ್ರತಿನಿಧಿಯಾಗಿ ದುಡಿಯಲಿಲ್ಲ. ಅವರನ್ನು ಯಾರೂ ಲಿಂಗಾಯತ ಕೋಮಿನ ಮುಖಂಡರು ಎಂದು ಹೇಳಲಿಲ್ಲ. ಯಾರೊಬ್ಬರ ಮನಸ್ಸೂ ಆ ರೀತಿ ಓಡಲಿಲ್ಲ. ಅವರು ಎಲ್ಲ ಕೋಮಿನ ಹಿತಚಿಂತಕರಾಗಿ ದ್ದರು. ಎಲ್ಲರ ಶ್ರೇಯಸ್ಸಿಗಾಗಿಯೇ ದುಡಿದಿದ್ದರು. ಜಾತಿಮತದ ಭೇದ ವನ್ನು ತಂದೊಡ್ಡದೆ ಎಲ್ಲ ವಿದ್ಯಾರ್ಥಿಗಳಿಗೂ ಸಮಾನಾವಕಾಶವನ್ನು ಕಲ್ಪಿಸು ವಂಥ ನಿಲಯವೊಂದನ್ನು ಅವರು ಕಟ್ಟದೆ ಹೋದರೇಕೊ? ಬ್ರಾಹ್ಮಣ, ಲಿಂಗಾಯತ, ಒಕ್ಕಲಿಗ, ಹರಿಜನ, ಈ ಎಲ್ಲ ಜಾತಿಯ ಜನ ಒಟ್ಟು ಸೇರಿ ತಮ್ಮಲ್ಲಿನ ಭೇದಭಾವವನ್ನು ಮರೆತು ಅಂಥ ನಿಲಯವೊಂದರಲ್ಲಿ ಬೆಳೆದು, ಒಂದು ಹಿರಿಯ ಆದರ್ಶವನ್ನು ಇತರರಿಗೆ ತೋರಿಕೊಟ್ಟಿದ್ದರೆ ಶೆಟ್ಟರವರ ಉದಾರ ಸಹಾಯ ಸಫಲವಾಗುತ್ತಿತ್ತು, ಶುಚಿಯಾದ ಫಲ ಕೊಡುತ್ತಿತ್ತು ಎಂದು ನನಗನಿಸುತ್ತದೆ.

ವಿದ್ಯಾರ್ಥಿ ನಿಲಯವನ್ನು ತೆರೆದು, ಅಲ್ಲಿನ ಸಮಾರಂಭವನ್ನು ಮುಗಿ ಸಿಕೊಂಡು ಬಂದವರೇ ಶೆಟ್ಟರು ಅಸ್ವಸ್ಥರಾಗಿ ಮಲಗಿದರು. ಮಲಗಿದವರು ಮೇಲೇಳಲಿಲ್ಲ. ಮೂರು ದಿನಗಳ ನಂತರ ಅವರ ಪ್ರಾಣಪಕ್ಷಿ ಹಾರಿ ಹೋಯಿತು ಪ್ರಾಣ ಹೋದುದು ಸಂಜೆ ಐದು ಘಂಟೆಯ ಸುಮಾರಿಗೆ. ಸುದ್ದಿ ಕೇಳಿದ ಬೆಂಗಳೂರು ಜನ ತಂಡತಂಡವಾಗಿ ಬಂದು ಹೋದರು. ನಮ್ಮ ಮನೆ ಶೆಟ್ಟರ ಪಕ್ಕದ ಮನೆಯಾದುದರಿಂದ ಅಲ್ಲಿನ ನಡವಳಿಕೆಯೆಲ್ಲ ತಿಳಿಯುತ್ತಿತ್ತು. ರಾತ್ರಿಯೆಲ್ಲ ಜನದ ಓಡಾಟ ನಿಲ್ಲಲೇ ಇಲ್ಲ. ಬೆಳಗಿನ ಜಾವದ ಹೊತ್ತಿಗೆ ಅಸಾಧ್ಯ ಜನಸಂದಣಿ ನಮ್ಮ ಚೌಕವೆಲ್ಲವನ್ನೂ ತುಂಬಿ ಬಿಟ್ಟಿತ್ತು. ಪುಟ್ಟಣ್ಣಶೆಟ್ಟರು ಜನಕ್ಕೆ ಎಷ್ಟೊಂದು ಬೇಕಾದವರಾಗಿದ್ದರೆನ್ನು ವುದು ನನಗೆ ಅಂದು ತಿಳಿಯಿತು.

ನಮ್ಮ ತಂದೆಗೂ ಪುಟ್ಟಣ್ಣಶೆಟ್ಟರಿಗೂ ಇದ್ದ ಸಂಬಂಧ ಮೂವತ್ತು ವರ್ಷಗಳಿಗೂ ಹಳೆಯದು. ಅವರು ಕೌನ್ಸಿಲರಾಗಿದ್ದ ಕಾಲದಲ್ಲಿ ತಂದೆ ಸರಕಾರದ ವೇತನ ಪಡೆದು ಇಂಗ್ಲೆಂಡಿಗೆ ವಿದ್ಯಾರ್ಜನೆಗಾಗಿ ಹೋಗಿದ್ದರು. ಇಂಗ್ಲೆಂಡಿನಲ್ಲಿ ತಂದೆ ಪಡೆದುಕೊಂಡು ಬಂದ ಪ್ರಶಸ್ತಿ, ಏಟ್ಸ್‌ರವರು ಅವರ ವಿಷಯವಾಗಿ ಸರಕಾರಕ್ಕೆ ಕೊಡುತ್ತಿದ್ದ ವರದಿ, ಇವು ಶೆಟ್ಟರ ಮನಸ್ಸಿನ ಮೇಲೆ ಒಳ್ಳೆಯ ಪರಿಣಾಮವನ್ನು ಉಂಟುಮಾಡಿದ್ದುವು. ಸ್ವದೇಶಕ್ಕೆ ಹಿಂದಿರುಗಿದ ಮೇಲೆ ತಂದೆ ಸಮಾಜಸೇವಾ ಕಾರ್ಯದಲ್ಲಿ ತೊಡಗಿದರಷ್ಟೆ. ಆಗತಾನೆ ಪ್ರಾರಂಭವಾಗಿದ್ದ ಸಿವಿಕ್ ಸಂಘಕ್ಕೆ ಶೆಟ್ಟರು ಅಧ್ಯಕ್ಷರಾಗಿದ್ದರು. ಸಂಘಕ್ಕೆ ಕಾರ್ಯದರ್ಶಿ ಒಬ್ಬ ಬೇಕಾಗಿತ್ತು. ಶೆಟ್ಟರಿಗೆ ನಮ್ಮ ತಂದೆಯೇ ಆ ಕಾರ್ಯಕ್ಕೆ ಅರ್ಹರಾದವರಾಗಿ ತೋರಿತು. ತಂದೆ ಸಂಘದ ಕಾರ್ಯದರ್ಶಿಯಾಗಿ ಕೆಲಸಮಾಡಲು ಸರಕಾರ ಮೊದಲಿಗೆ ಒಪ್ಪಲಿಲ್ಲ. ಪುಟ್ಟಣ್ಣಶೆಟ್ಟರು ಮತ್ತೆಮತ್ತೆ ಕೇಳಿದ ಮೇಲೆ ಅನುಮತಿ ದೊರೆಯಿತು. ಆ ಕಾಲದಿಂದ ಇಬ್ಬರೂ ಜೊತೆಯಾದರು. ಒಬ್ಬರು ಸಂಘದ ಅಧ್ಯಕ್ಷರಾಗಿ, ಇನ್ನೊಬ್ಬರು ಕಾರ್ಯದರ್ಶಿಯಾಗಿ ಹೀಗೆ ಜೋಡಿಯಾಗಿ ನಿಂತು ಕೆಲಸ ಮಾಡಿದರು. ಸಿವಿಕ್ ಸಂಘವೊಂದರಲ್ಲೇ ಅಲ್ಲ, ಇನ್ನೂ ಎಷ್ಟೋ ಸಂಸ್ಥೆಗಳಲ್ಲಿ ಜೊತೆಯಾಗಿ ಕೆಲಸ ಮಾಡಬೇಕಾಗಿತ್ತು. ಹೀಗೆ ಮೂವತ್ತು ವರ್ಷಗಳಿಗೂ ಹೆಚ್ಚಿನಕಾಲ ಬೆಳೆದು ಬಂದ ಈ ಸಹವಾಸ, ಸಮಾಜಸೇವೆಯಲ್ಲಿ ಇಬ್ಬರಿಗೂ ಇದ್ದ ಆಸಕ್ತಿ, ಒಬ್ಬರಲ್ಲೊಬ್ಬರಿಗಿದ್ದ ಪರಸ್ಪರ ಗೌರವ, ಪ್ರೀತಿ, ಸ್ನೇಹ, ಅವರನ್ನು ಬೆಸೆದು ಒಂದಾಗಿಮಾಡಿದ್ದುವು.

೧೯೩೮ನೆಯ ಇಸವಿಯ ಬಹುಭಾಗ ತಂದೆಯ ಮನಸಿಗೆ ನೆಮ್ಮದಿ ಇರಲಿಲ್ಲ. ಪುಟ್ಟಣ್ಣಶೆಟ್ಟರ ಸಾವು ನೊಂದ ಮನಸಿನಮೇಲೆ ಬರೆಕೊಟ್ಟಂತಾಯಿತು. ಅವರ ಮನಸಿನ ನೆಮ್ಮದಿ ಮತ್ತೂ ಹಾಳಾಯಿತು ಆ ವರ್ಷದ ಕೊನೆಯ ದಿನ ತಮ್ಮ ದಿನಚರಿಯಲ್ಲಿ—"ಯೋಚನೆ, ದುಃಖ, ನಿರಾಸೆ ಆತಂಕಗಳನ್ನು ತುಂಬಿಕೊಂಡು ಹಳೆಯ ವರ್ಷ ಹೋಗುತ್ತಿದೆ. ನನ್ನ ಆರೋಗ್ಯ, ನನ್ನ ಮಕ್ಕಳ ಮುಂದು, ನನ್ನ ವ್ಯವಹಾರದ ಸ್ಥಿತಿ ಒಂದೂ ಚೆನ್ನಾಗಿಲ್ಲ" ಎಂದು ಬರೆದರು.

## ಬೆಂಗಳೂರು ಇಂಟರ್‌ನ್ಯಾಷನಲ್ ಫೆಲೋಷಿಪ್
### The Bangalore International Fellowship

ಜಗತ್ತು ಒಂದು ಕುಟುಂಬ, ವ್ಯೋಮದಡಿ ನಾವೆಲ್ಲ ಒಂದು ಮನೆಯವರು ("Under Heaven one Family") ಎಂಬುದನ್ನು ಧ್ಯೇಯವಾಗಿಟ್ಟುಕೊಂಡು ಇರುವ "International fellowship" ಎಂಬ ಒಂದು ಸಂಘ ಇದೆ. ಪ್ರಪಂಚದ ಪ್ರಮುಖ ನಗರಗಳಲ್ಲೆಲ್ಲ ಈ ಸಂಘದ ಶಾಖೆಗಳಿವೆ. ನಮ್ಮ ದೇಶದಲ್ಲಿಯೂ ದೊಡ್ಡ ದೊಡ್ಡ ನಗರಗಳಲ್ಲೆಲ್ಲ ಈ ಸಂಘ ಇದೆ. ನಾಡಿನ ಜೀವನದಲ್ಲಿ ಮಾನ್ಯರಾದ ಮಹನೀಯರನೇಕರು ಈ ಸಂಘದ ಸದಸ್ಯರಾಗಿದ್ದಾರೆ ಈ ಸಂಘ ರಾಜಕೀಯ ತತ್ವವನ್ನು ಪ್ರತಿಪಾದಿಸುವ ಸಂಘ ಅಲ್ಲ. ಸಮಾಜ ಸೇವೆಯೂ ಅದರ ಕಾರ್ಯವಲ್ಲ. ಸಂಘ ದೇಶದ ರಾಜಕೀಯ ಪರಿಸ್ಥಿತಿಯನ್ನು ಚರ್ಚಿಸಬಹುದು, ಸಮಾಜ ಸೇವಾಕಾರ್ಯದಲ್ಲಿ ತನ್ನ ಉತ್ಸುಕತೆಯನ್ನು ತೋರಿಸಬಹುದು, ಆದರೆ ಈ ಕಾರ್ಯಗಳಿಗಾಗಿಯೇ ಸಂಘ ಹುಟ್ಟಲಿಲ್ಲ. ಸಂಘದ ಮುಖ್ಯ ಗುರಿ ಎಲ್ಲರಲ್ಲಿಯೂ ಒಂದು ಬಗೆಯ ಸ್ನೇಹಭಾವವನ್ನು ಬೆಳಸುವುದು; ಬೇರೆಬೇರೆ ಜನಾಂಗದ ಜನ, ಬೇರೆಬೇರೆ ಜಾತಿಯ ಜನ, ಬೇರೆಬೇರೆ ರಾಜಕೀಯ, ಮತೀಯ ತತ್ವಗಳಲ್ಲಿ ನಂಬಿಕೆಯಿಟ್ಟಿರುವ ಜನ, ಈ ಎಲ್ಲ ಜನ ಒಂದೆಡೆ ಸೇರುವಂತೆ ಮಾಡಿ ಅವರಲ್ಲಿ ಪರಸ್ಪರ ಸೌಹಾರ್ದ ಮೈತ್ರಿಯನ್ನು ಬೆಳೆಸುವುದೇ ಸಂಘದ ಮುಖ್ಯ ಗುರಿಯಾಗಿತ್ತು.

ಬೆಂಗಳೂರಿನಲ್ಲಿ ಈ ತರದ ಸಂಘ ೧೯೩೧-೩೨ರ ಸುಮಾರಿನಲ್ಲಿ ಪ್ರಾರಂಭವಾಯಿತು. ಎಲ್ಲರೊಡನೆಯೂ ಮೈತ್ರಿಯನ್ನು ಬೆಳೆಸುವ ಈ ಸಂಘದ ತತ್ವ ನನ್ನ ತಂದೆಗೆ ತೀರ ಹಿತವಾಗಿ ಕಂಡಿತಾದ್ದರಿಂದ ಸಂಘ ಹುಟ್ಟಿಕೊಂಡ ತರುಣದಲ್ಲೆ ಅದರ ಸದಸ್ಯರಾದರು. ಕೆಲವೇ ದಿವಸಗಳಲ್ಲಿ ಸಂಘದ ಮುಖ್ಯ ಕಾರ್ಯದರ್ಶಿಯಾದರು. ತಂದೆಯ ಸ್ನೇಹಿತವರ್ಗ ವಿಶಾಲವಾಗಿ ಬೆಳೆಯುವುದಕ್ಕೆ ಈ ಸಂಘದಲ್ಲಿನ ಕೆಲಸ ಕೂಡ ಕಾರಣವಾಯಿತು.

ಸಂಘ ತನ್ನ ಮುಖ್ಯ ಗುರಿಯನ್ನು ಸಾಧಿಸಲು ಪ್ರಯತ್ನಿಸುತ್ತಿದ್ದುದು ಈರೀತಿ: ಪ್ರತಿ ತಿಂಗಳೂ ಕೊನೆಯ ಶನಿವಾರದ ದಿನ ಸದಸ್ಯರೆಲ್ಲರೂ,

ಯಾರಾದರೂ ಒಬ್ಬ ಹಿಂದೆಯೇ ಗೊತ್ತಾದ ಸದಸ್ಯನ ಮನೆಯಲ್ಲಿ ಸೇರು
ತಿದ್ದರು. ಬಂದೆಲ್ಲ ಅತಿಥಿಗಳಿಗೂ ಮನೆಯ ಯಜಮಾನ ಯಜಮಾನಿತಿ
ಯರು ಉಪಹಾರ ಹಂಚುತಿದ್ದರು ಉಪಹಾರದ ನಡುವೆ ಹಿತಕರವಾದ
ಮೃದು ಸಂಭಾಷಣೆಯಲ್ಲಿ ಸ್ವಲ್ಪಕಾಲ ಕಳೆದುಹೋಗುತಿತ್ತು. ಸಭೆ ಸೇರೆ
ಯುವ ಮುಂಚೆ ಸದಸ್ಯರಲ್ಲೊಬ್ಬರು ಐದು ನಿಮಿಷ ಪ್ರಾರ್ಥನಾ ಗೀತಗಳನ್ನು
ಹೇಳುತಿದ್ದರು. ಪ್ರಾರ್ಥನೆಯಾದಮೇಲೆ ಅಂದಿನ ಮುಖ್ಯ ಅತಿಥಿಗಳಾದ
ಉಪನ್ಯಾಸಕರು, ಹಿಂದೆಯೇ ತಿಳಿಸಿದ್ದ ವಿಷಯ ಒಂದರಮೇಲೆ ಅರ್ಧಗಂಟೆ
ಕಾಲ ಮಾತನಾಡುತಿದ್ದರು. ಆಮೇಲೆ ಉಪನ್ಯಾಸದ ವಿಷಯವಾಗಿ ಚರ್ಚೆ
ಆರಂಭವಾಗುತಿತ್ತು. ಪ್ರತಿ ಸದಸ್ಯರೂ ತಮ್ಮ ಮನಸಿನಲ್ಲಿರುವುದನ್ನು
ಮುಚ್ಚದೆ ಬಿಚ್ಚಿ ಮಾತನಾಡಬೇಕೆನ್ನುವುದು ಸಂಘದ ನಿಯಮಗಳಲ್ಲೊಂದು.
ಆ ಕಾರಣವಾಗಿ ಎಲ್ಲರೂ ತಮ್ಮ ತಮ್ಮಲ್ಲಿ ತೋರಿದ ಭಾವನೆಯನ್ನು ಮಂಡಿ
ಸುತಿದ್ದರು. ಸಮಾಧಾನ ಹೇಳುವುದೇನಾದರೂ ಇದ್ದರೆ ಉಪನ್ಯಾಸಕರು
ಕೊನೆಯಲ್ಲಿ ಹೇಳುತಿದ್ದರು. ಚರ್ಚೆಯಾದ ನಂತರ ಮತ್ತೊಮ್ಮೆ ಪ್ರಾರ್ಥನೆ
ಯಾಗಿ ಸಭೆ ಮುಕ್ತಾಯವಾಗುತಿತ್ತು. ಸಭೆಗೆ ಐವತ್ತು ಅರವತ್ತು ಜನ
ಬಂದು ಸೇರುತಿದ್ದರು. ಸದಸ್ಯರೇ ಅಲ್ಲದೆ ಅವರ ಮಿತ್ರರೂ ಬರುತಿದ್ದರು.

ಸಂಘದ ಕಾರ್ಯದಲ್ಲಿ ತಂದೆಗೆ ಅತಿಶಯವಾದ ಉತ್ಸಾಹವಿತ್ತು. ಪ್ರತಿ
ತಿಂಗಳ ಸಭೆಗೂ ಹೆಸರುವಾಸಿಯಾದ ಉಪನ್ಯಾಸಕರನ್ನು ಹುಡುಕಬೇಕಾ
ಗಿತ್ತು. ಸಭೆ ಯಾರ ಮನೆಯಲ್ಲಿ ಸೇರಬೇಕೆನ್ನುವುದು ಇತ್ಯರ್ಥವಾಗ
ಬೇಕಾಗಿತ್ತು. ಅಲ್ಲದೆ ವರ್ಷಕ್ಕೊಂದೆರಡು ಬಾರಿಯಾದರೂ ಬೆಂಗಳೂರಿಂದ
ಹೊರಗೆ ಕೂಟ ಒಂದು ಏರ್ಪಾಡುಮಾಡಬೇಕಾಗುತಿತ್ತು. ಈ ಕೂಟಗಳಲ್ಲಿ,
ಎರಡು ದಿನಗಳ ಮಟ್ಟಿಗೆ ಸಂಘದ ಸದಸ್ಯರೆಲ್ಲ ಒಟ್ಟು ಸೇರಿ ಒಂದೇ ಮನೆ
ಯವರಂತೆ ಉಂಡು ಉಟ್ಟು ಆನಂದದಿಂದ ಕಾಲ ಕಳೆದು ಮನಸ್ಸಿನ ಬೇಸರ
ವನ್ನು ನೀಗಿಕೊಂಡು ಬರುತಿದ್ದರು. ಸದಸ್ಯವರ್ಗದಲ್ಲಿ ಅನೇಕ ಮಂದಿ
ಮಹಿಳೆಯರಿದ್ದರು. ಗಂಡಹೆಂಡಿರಿಬ್ಬರೂ ಸಂಘದ ಸದಸ್ಯರಾಗಿರುತಿದ್ದರು.
ಇಂಥ ಸಂತೋಷ ಕೂಟಗಳಲ್ಲಿ ಮಹಿಳೆಯರು ಮುಂದಾಳುಗಳಾಗುತಿದ್ದರು.
ಬಂದೆಲ್ಲ ಅತಿಥಿಗಳ ಊಟ ಉಪಚಾರಗಳನ್ನು ನೋಡಿಕೊಳ್ಳುತಿದ್ದರು. ನಕ್ಕು
ನಗಿಸುತಿದ್ದರು. ಸದಸ್ಯರಲ್ಲಿ ಮುಕ್ಕಾಲು ಮಂದಿಯೆಲ್ಲ ವಯಸ್ಸಾದ ಗುಂಪಿಗೆ

ಸೇರಿದವರು. ಈ ಕೂಟಗಳಲ್ಲಿ ತಮ್ಮ ಎಳೆಯ ದಿನಗಳನ್ನು ನೆನಪಿಗೆ ತಂದು ಕೊಂಡು ಮತ್ತೆ ಹುಡುಗರಾಗಿ ಆನಂದದಿಂದ ಓಲಾಡಿ ಬರುತಿದ್ದರು. ಇಂಗ್ಲಿಷು ಪಾದ್ರಿಗಳು, ಅಮೆರಿಕನರು, ಹರಿಜನರು, ಬ್ರಂಹೊಗಳು, ಮುಸಲಿಮರು, ಕ್ರಿಶ್ಚಿಯನರು, ಬ್ರಾಹ್ಮಣರು, ಸರಕಾರದ ನೌಕರರು, ಕಾಂಗ್ರೆಸಿನವರು, ವ್ಯಾಪಾರಗಾರರು, ವೈದ್ಯರು, ಸಮಾಜಸೇವಕರು ಈ ಬಗೆಯ ಜನವೆಲ್ಲ ಸೇರಿ ಒಟ್ಟಾಗಿ ಕಲೆತು ಮರಳುತಿದ್ದರು. ಸಂಘ ಆಶ್ರಯ ಕೊಡದಿದ್ದರೆ ಈ ಬಹುಬಗೆಯ ಜನ ಒಂದೆಡೆ ಸೇರಿ ಒಬ್ಬರೊಡನೊಬ್ಬರು ಸಲ್ಲಾಪಮಾಡುವ ಅವಕಾಶವೇ ಇರುತ್ತಿರಲಿಲ್ಲ. ಇಂಥ ಕೂಟಗಳನ್ನು ಮುಗಿಸಿಕೊಂಡು ಗೆಲುಮನಸಿನಿಂದ ತಂದೆ ಮನೆಗೆ ಹಿಂತಿರುಗುತ್ತಿದ್ದು ದನ್ನು ನೋಡಿದ್ದೇನೆ. ನೋಡಿ ಇಂಥ ಕೂಟಗಳಿಂದ ಪ್ರಯೋಜನವಿದೆ ಎಂದು ಮನಗಂಡಿದ್ದೇನೆ. ಈ ಬಗೆಯ ವಿಚಾರ ವಿನಿಮಯದಿಂದ, ಒಂದು ರೀತಿಯ ಸಹೋದರಭಾವದಿಂದ ಸದಸ್ಯರ ಜೀವನ ಪೂರ್ಣತೆಯನ್ನು ಪಡೆಯುತಿತ್ತು.

ವರ್ಷಕ್ಕೊಮ್ಮೆ ಸಂಘದ ವಾರ್ಷಿಕ ಸಭೆ ನಮ್ಮ ಮನೆಯಲ್ಲಿ ನಡೆಯು ತಿತ್ತು ಊಟದ ಸಮಾರಂಭ ಏರ್ಪಾಡಾಗಿರುತಿತ್ತು. ಸಂಘದ ಸದಸ್ಯ ರೆಲ್ಲ ಆಹ್ವಾನಿತರಾಗುತಿದ್ದರು. ಅಂದು ಮನೆಯೆಲ್ಲ ದೀಪಗಳಿಂದ ಬೆಳಗು ತಿತ್ತು. ಎಲ್ಲರ ಮಾತುಕತೆಗಳಿಂದ ಕಳಕಳಿಸುತಿತ್ತು. ರಾತ್ರಿ ವಿಜೃಂ ಭಣೆಯಿಂದ ಊಟ ಸಾಗುತಿತ್ತು. ನಮ್ಮ ಮನೆಯಲ್ಲಿಯೇ ನಡೆದ ಸಂಘದ ಒಂದು ಸಭೆಯನ್ನು ನೋಡುವ ಅವಕಾಶ ನನಗಿತ್ತು. ಅಂದಿನ ಉಪ ನ್ಯಾಸಕರು ದೀನಬಂಧು ಆಂಡ್ರೂಸರು. ಆಂಡ್ರೂಸರು ಮೈಸೂರು ವಿಶ್ವ ವಿದ್ಯಾನಿಲಯದಲ್ಲಿ ಪದವಿಯನ್ನು ಪಡೆದ ಯುವಕರನ್ನುದ್ದೇಶಿಸಿ ಮಾತ ನಾಡುವ ಸಂದರ್ಭದಲ್ಲಿ ಬೆಂಗಳೂರಿಗೆ ಬಂದಿದ್ದರು. ಆ ಕಾಲದಲ್ಲೆ ಸಂಘ ಅವರನ್ನು ಬರಮಾಡಿಕೊಂಡಿತ್ತು. ದೀನಬಂಧುಗಳನ್ನು ನೋಡಿದ್ದು ನಾನು ಆಗಲೇ. ಅವರಿಗೆ ಜನಕೊಟ್ಟ ಬಿರುದು ತೀರ ಅನ್ವರ್ಥವಾಗಿತ್ತು. ಅವ ರನ್ನು ನೋಡಿದರೆ ನಿಜವಾಗಿಯೂ ಅವರು ಎಲ್ಲರ ಬಂಧುಗಳಾಗಿಯೇ ತೋರುತಿದ್ದರು. ಎಳೆಮಕ್ಕಳ ಮುಖದಂತೆ ಅವರ ನಗುಮುಖ ಮುದ್ದನ್ನು

ಹೊರಸೂಸುತಿತ್ತು. ನೀಲಿಯ ಮಣಿಗಳಂತೆ ಪ್ರಕಾಶವಾದ ಅವರ ಕಣ್ಣು ಗಳು ತಾವೂ ನಗುತಿದ್ದುವು. ಶುಭ್ರವಾದ ಬಿಳಿ ಕೂದಲಿಂದ ಆವೃತವಾದ ಅವರ ಮುಖ ತೇಜಸ್ವಿಯಾಗಿತ್ತು. ಆಂಡ್ರ್ಯೂಸರಂಥ ಮಹನೀಯರನ್ನು ನೋಡುವ ಭಾಗ್ಯವನ್ನು ನನಗೆ International Fellowship ಸಂಘ ಒದಗಿಸಿತು.

ಮೇಲೆ ನೋಡಲು ಈ ಸಂಘ ಬರಿಯ ಟೀಪಾರ್ಟಿ ಸಂಘದಂತೆ ತೋರುತಿದ್ದುದು ನಿಜ. ಆದರೆ ವಿವಿಧ ಸಂಪ್ರದಾಯದ ಜನಗಳನ್ನು ಒಂದುಗೂಡಿಸಿ ಅವರಲ್ಲಿ ಪರಸ್ಪರ ಸೌಹಾರ್ದ, ಮೈತ್ರಿ, ಬೆಳೆಯುವುದಕ್ಕೆ ಈ ಸಂಘ ಅವಶ್ಯವಾಗಿ ಅನುಕೂಲ ಕಲ್ಪಿಸಿತು. ಭಿನ್ನಮತೀಯರಲ್ಲಿದ್ದ ಭೇದಭಾವ ಈ ಸಭೆಗಳಲ್ಲಿ ಮಾಯುವಾಗುತಿತ್ತು. ಸಂಘದ ಕಾರ್ಯದರ್ಶಿ ಯಾಗಿದ್ದುದರ ಸಲುವಾಗಿಯೋ ಏನೊ ಒಮ್ಮೆ ಮದರಾಸಿನ ತಾಂಬರಂನಲ್ಲಿ ನಡೆದ ಪ್ರಪಂಚ ಕ್ರಿಶ್ಚಿಯನರ ಸಮ್ಮೇಳನದಲ್ಲಿ ಭಾಗವಹಿಸಲು ಬಂದಿದ್ದ ಅಮೆರಿಕನ್ ಕ್ರಿಶ್ಚಿಯನ್ ಕಾಲೇಜು ಅಧ್ಯಕ್ಷ ಪ್ರೆಸಿಡೆಂಟ್ ಕಾಲಿನ್ಸ್ ಅವರು ನಮ್ಮ ಮನೆಯಲ್ಲಿ ಉಳಿದುಕೊಳ್ಳುವಂತೆ ಏರ್ಪಾಡಾಯಿತು. ಇಂಡಿಯಾ ದೇಶದಲ್ಲಿ ಅವರಿದ್ದ ಮೂರು ತಿಂಗಳ ಅವಧಿಯಲ್ಲಿ ಹಿಂದೂ ಮನೆಯೊಂದ ರಲ್ಲಿ ದೊರೆತ ಆತಿಥ್ಯವೆಂದರೆ ನಮ್ಮ ಮನೆಯಲ್ಲಿ ಕಳೆದ ಎರಡು ದಿನಗಳ ಆತಿಥ್ಯ ಮಾತ್ರವೇ ಅಂತೆ. ಇದು ತೀರ ಹೊಸ ರೀತಿಯ ಅನುಭವ ವಾಗಿರಬೇಕು ಅವರಿಗೆ. ತಮ್ಮ ದೇಶಕ್ಕೆ ಹಿಂದಿರುಗಿದಮೇಲೆ ಇದನ್ನು ಪ್ರಸ್ತಾಪಮಾಡಿ ಅವಕಾಶಕೊಟ್ಟುದಕ್ಕಾಗಿ ತಂದೆಯನ್ನು ವಂದಿಸಿ ಕಾಗದ ಬರೆದಿದ್ದರು.

ಮೇಲಿನದು ಸಣ್ಣ ವಿಷಯವೇ ಆದರೂ ಅದರಿಂದ ಸಂಘ ಕಲ್ಪಿಸಿ ಕೊಡುವ ಅವಕಾಶ ಎಂಥದು ಎನ್ನುವುದು ಗೋಚರವಾಗುತ್ತದೆ. ಈ ಬಗೆಯ ಸೌಹಾರ್ದ ಬೆಳೆಯಬೇಕಾದರೆ ಇಂಥ ಸಂಘಗಳು ಇನ್ನೂ ಹೆಚ್ಚಿಗೆ ಹುಟ್ಟಬೇಕು. ಮುಸಲಿಮನಿಗೆ ಹಿಂದೂ ಮನೆಯಲ್ಲಿ, ಹಿಂದೂವಿಗೆ ಮುಸ ಲಿಮನ ಮನೆಯಲ್ಲಿ ಆದರ ಆತಿಥ್ಯ ದೊರೆಯುವಂತಾಗಬೇಕು. ಜಾತಿ ಮತಗಳ ಸಂಕೋಲೆ ಕಳಚಬೇಕು. ಎಂತಿಗಿಂತಲೂ ಈಗ, ಮತಪ

ಹೆಸರಿನಲ್ಲಿ ತಲೆಯನ್ನು ಕಡಿಯುವುದಕ್ಕೂ ಹೇಸದ ಪಾಶವಿಕ ಮನೋಭಾವ ನಾಗರಿಕರೆನಿಸಿಕೊಂಡವರಲ್ಲಿಯೂ ಬೆಳೆಯುತ್ತಿರುವಾಗ, ಇಂಥ ಸಂಘಗಳ ಆವಶ್ಯಕತೆ ತೀರ ಹೆಚ್ಚಿನದೆಂದೇ ತೋರುತ್ತದೆ. ಮಿತ್ರರು ನೂರು ತರದವರು ಒಂದು ದಿನದ ಮಟ್ಟಿಗೇ ಆದರೂ ಒಟ್ಟುಸೇರಿ, ಒಂದೇ ಸಂಸಾರ ದವರಂತೆ ಅನ್ಯೋನ್ಯವಾಗಿ ನಡೆದುಕೊಳ್ಳುವುದರಲ್ಲಿ ಎಷ್ಟೋ ಉಪಯುಕ್ತತೆ ಇದೆ. ತಮ್ಮ ಬಾಳು ಪೂರ್ಣವಾಗಬೇಕಾದರೆ ಇಂಥ ಕಾರ್ಯ ಅಗತ್ಯ ಎಂದು ತಂದೆ ಮನಗಂಡಿದ್ದರು.

## ಮುದ್ರಣ ವೃತ್ತಿಯ ಪ್ರಚಾರ

ಸರಕಾರಿ ಮುದ್ರಣಶಾಲೆಯ ಅಧ್ಯಕ್ಷ ಪದವಿಯಿಂದ ನಿವೃತ್ತರಾದ ಮೇಲೂ ಆ ಕಲೆಯ ಸಂಪರ್ಕವನ್ನು ತಂದೆ ಬಿಡಲಿಲ್ಲ. ನಿವೃತ್ತಿಹೊಂದಿದ ಮೊದಲನೆಯ ವರ್ಷದಲ್ಲಿಯೇ ಅವರಿಗೆ ಮುದ್ರಣ ಕಲೆಯ ವಿಷಯವಾಗಿ ಉಪನ್ಯಾಸ ಮಾಡುವ ಯೋಗ ಒದಗಿತು. ಶ್ರೀ ಮೋಕ್ಷಗುಂಡಂ ರಾಮ ಚಂದ್ರರಾಯರು ನಿರುದ್ಯೋಗಿಗಳಾದ ಪದವೀಧರರಿಗೆ ಉಪಯೋಗವಾಗ ಲೆಂದು ಅನೇಕ ವೃತ್ತಿಗಳ ವಿಷಯವಾಗಿ ಭಾಷಣಗಳನ್ನೇರ್ಪಡಿಸಿದ್ದರು. ಈ ಉಪನ್ಯಾಸಗಳು ಶಂಕರಪುರದ ಒಂದು ಮನೆಯ ವಿಶಾಲವಾದ ಆವರಣದಲ್ಲಿ ನಡೆಯುತ್ತಿದ್ದುವು. ಪ್ರತಿ ಸಂಜೆ ಅನೇಕ ಯುವಕರು ಉಪನ್ಯಾಸ ಕೇಳಲು ಸೇರುತ್ತಿದ್ದರು. ಮುದ್ರಣ ವೃತ್ತಿ (Printing as a career) ಯ ಮೇಲಿನ ಉಪನ್ಯಾಸವನ್ನು ತಂದೆ ಕೊಡುವುದೆಂದು ನಿಶ್ಚಯವಾಗಿತ್ತು. ಉಪನ್ಯಾಸ ನಡೆಯುವುದಕ್ಕೆ ತಿಂಗಳು ಹಿಂದಿನಿಂದ ಉಪನ್ಯಾಸ ಬರೆಯಲು ತಂದೆ ತೊಡಗಿದ್ದರು. ಬರವಣಿಗೆಯ ಹುಚ್ಚು ಹತ್ತಿತೆಂದರೆ ತಂದೆಗೆ ಬೇರೆ ಯಾವುದರಲ್ಲೂ ಮನಸ್ಸು ಇರುತ್ತಿರಲಿಲ್ಲ. ಬಹು ಹೊತ್ತು ದಿನವೂ ಕುಳಿತು ಬರೆದರು, ಬೇಕಾದಹಾಗೆ ಬರೆದರು, ತಡೆಯಿಲ್ಲದೆ ಬರೆದರು. ಎಲ್ಲ ಬರೆ ದಾದ ಮೇಲೆ ತಿದ್ದಲು ತೊಡಗಿದರು. ಬರೆದುದರಲ್ಲಿ ಅರ್ಧಕ್ಕೂ ಹೆಚ್ಚಿನ ಭಾಗ ತಿರಸ್ಕೃತವಾಯಿತು. ಉಪನ್ಯಾಸವನ್ನು ಟೈಪುಮಾಡಿಕೊಡುವ ಕೆಲಸ ನನ್ನದಾಗಿತ್ತು. ಮೂರು ಸಲ ಟೈಪು ಮಾಡಿಕೊಟ್ಟೆ. ಆದರೂ ತಿದ್ದು ವುದು ನಿಲ್ಲಲಿಲ್ಲ. ಕೊನೆಗಾದರೂ ಅವರ ಮನಸಿಗೆ ಸಮಾಧಾನವಿತ್ತೊ ಇಲ್ಲವೊ ಹೇಳಲಾರೆ. ಈ ಉಪನ್ಯಾಸ ಬರೆಯುವುದರಲ್ಲಿ ತಂದೆ ವಿಶೇಷವಾದ ಆಸಕ್ತಿ ವಹಿಸಿದ್ದರು.

ಉಪನ್ಯಾಸದ ಮೊದಲ ಭಾಗದಲ್ಲಿ ಮುದ್ರಣ ವೃತ್ತಿಯ ವಿವಿಧ ಶಾಖೆ ಗಳ ಸೂಕ್ಷ್ಮವಾದ ಪರಿಚಯದ ವಿವರ ಅಡಗಿತ್ತು. ಈ ವೃತ್ತಿಯಲ್ಲಿ ಯಾವುದೇ ಒಂದು ಭಾಗವನ್ನಾದರೂ ತೆಗೆದುಕೊಂಡು, ಸ್ವಲ್ಪವೇ ಬಂಡ ವಾಳವಿಟ್ಟುಕೊಂಡು, ವಿದ್ಯಾವಂತರಾದ ಯುವಕರು ವೃತ್ತಿಯನ್ನು ಕಲ್ಪಿಸಿ ಕೊಳ್ಳಬಹುದೆಂದು ತೋರಿಸಿತ್ತು. ಮುದ್ರಿಸುವುದು ಒಂದು ಬಗೆಯ

ವೃತ್ತಿಯೇ ಆದರೂ ಅದೂ ಒಂದು ಬಗೆಯ ಕಲೆ ಎಂದು ಪ್ರತಿಪಾದಿಸಿತ್ತು. " A well printed book is an artistic production, perfect in details, symmetrical in designs and appealing to the sense of aesthetic taste. Who does not open a new book just published by a well-known printing house and admire the beauty of its binding, the neatness of the title page, the high quality of the paper used, the richness and evenness of colour of its pages, the beauty and appropriateness of the types used, the firmness and legibility of its printing and the aroma of paper and ink surrounding it all that makes a new well-printed book a thing of beauty and a joy for ever."

ಮುದ್ರಣ ವೃತ್ತಿಯನ್ನು ಅಲ್ಲಗಳೆದು ಮಾತನಾಡುವುದು ತಪ್ಪುಭಾವನೆ ಎಂದು ತೋರಿಸಿತ್ತು. " ಮುದ್ರಣವೃತ್ತಿ - ಆದರಲ್ಲೇನಿದೆ ಮಹಾ " ಎಂದು ಹೇಳುವುದು ವಾಡಿಕೆಯಾಗಿದೆ. ಎಂಟು ವರ್ಷಕಾಲ ನಾನು ಹೈಸ್ಕೂಲು ವಿದ್ಯಾರ್ಥಿಗಳಿಗೆ ಮುದ್ರಣದ ವಿಷಯವಾಗಿ ಪಾಠ ಹೇಳಿದೆ. ಅಷ್ಟು ಜನ ವಿದ್ಯಾರ್ಥಿಗಳಲ್ಲಿ ಒಬ್ಬನೂ ಸಹ ಮುತುವರ್ಜಿ ವಹಿಸಿ ಪಾಠ ಕಲಿಯಲಿಲ್ಲ. ಆ ವೃತ್ತಿಯಲ್ಲಿ ತೊಡಗಲಿಲ್ಲ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಲು ಏನು ಮಾಡಬೇಕೊ ಅಷ್ಟುಮಾಡಿ ಹೋದವರೆ ಎಲ್ಲರೂ. ವಿದ್ಯಾವಂತರಾದ ವರಿಗೆ ಈ ಉದ್ಯೋಗದಲ್ಲಿರುವ ಅವಕಾಶ ಬೇರೆ ಎಲ್ಲಿದೆ? ಹಣ ಸಂಪಾದನೆಗೇ ಅಲ್ಲದೆ ಜ್ಞಾನವನ್ನು ಹರಡುವುದಕ್ಕೂ ಬಲವಾದ ಶಕ್ತಿಯನ್ನಾಗಿ ಈ ವೃತ್ತಿಯನ್ನು ಅಳವಡಿಸಿಕೊಳ್ಳಬಹುದು. "

ನಿರುದ್ಯೋಗ ಸಮಸ್ಯೆಯನ್ನು ಧೈರ್ಯವಾಗಿ ಎದುರಿಸಿ ನಿಲ್ಲಬೇಕಾದರೆ ನಮ್ಮ ಯುವಕರು ಯಾವರೀತಿಯ ಮನೋಭಾವವನ್ನು ಬೆಳಸಿಕೊಳ್ಳಬೇಕು ಎನ್ನುವುದು ಕೊನೆಯ ಭಾಗದಲ್ಲಿ ಚರ್ಚಿತವಾಗಿತ್ತು :

" Without personality and a daring and enterprising mind our young men cannot make much headway with their education alone......... ...It should therefore be the aim of every young man to carve a successful career for himself to secure individual efficiency, to possess dynamic personality, and to acquire that calibre of mind that is not detirred by difficulties.

A right attitude of mind is the ***sin-qua-non*** not only to a successful career but also for spiritual and material happiness, as much for glorifying in success as for finding solace in failure. I therefore conclude by quoting the following verses with a fervent appeal to put the sentiments therein expressed into practice with a view to your embarking upon any career of your choice with hope and cheer.

If you think you are beaten, you are
If you think you dare not, you dont
If you would like to win but think you
can't
It is almost a cinch you won't
If you think you will lose you are lost
For out in the world you find
Success depends upon a fellows will
It is all in the state of mind

For many a race is lost
Ere ever a step is run
And many a coward despairs
Ere ever his work began
Think big and your deeds will grow
Think small and you'll fall behind
Think that you can and you will
It is all in the state of mind.

If you think you are outclassed you are
You have got to think high to rise
You have got to be sure of yourself before
You ever can win a prize.
Life's battles dont always go
To the stronger or faster man
But sooner or later, the man who
Wins is the fellow who thinks he can.

ತಂದೆ ಒಳ್ಳೆಯ ಉಪನ್ಯಾಸಕರಾಗಿರಲಿಲ್ಲ. ಉಪನ್ಯಾಸಕನಿಗಿರಬೇಕಾದ ಧ್ವನಿಯಿರಲಿಲ್ಲ. ಮಾತು ಒಂದಾಗುತಲೊಂದು ಉರುಳಿ ಬರುತಿರಲಿಲ್ಲ. ಆಡಿದ ಮಾತು ಸಭಿಕರಮೇಲೆ ಪರಿಣಾಮ ಉಂಟುಮಾಡುತಿರಲಿಲ್ಲ. ಬರೆದುಕೊಂಡು ಬಂದು ಸಭೆಯಲ್ಲಿ ಓದುವ ಉಪನ್ಯಾಸ ವಿದ್ಯಾರ್ಥಿಗಳಾದವರಿಗೆ ಹಿಡಿಸುತ್ತದೋ ಇಲ್ಲವೋ ಹಿಡಿಸಲಾರದು. ಉಪನ್ಯಾಸ ಬರೆಯುವಾಗ ತಂದೆ ತಮ್ಮ ಅನುಭವದ ಸಾರವನ್ನೆಲ್ಲ ಬಟ್ಟಿ ಇಳಿಸಿ ಬರೆದರು. ಸೊಗಸಾಗಿಯೇ ಬರೆದರು. ಉಪಸ್ಯಾಸವನ್ನು ಮೊದಲು ಓದಿದ ನನಗಂತೂ ಮುದ್ರಣ ಕಲೆಯ ಮರ್ಮ ತಿಳಿಯಬೇಕೆನ್ನುವ ಗೀಳು ಓದಿದಾಗಲೇ ಹಿಡಿಯಿತು. ಪ್ರೂಫುಗಳನ್ನು ಓದುವುದು ಹೇಗೆ ಎನ್ನುವುದನ್ನು ಅಂದ

ನಿಂದಲೇ ಕಲಿಯತೊಡಗಿದೆ. ಆಗ ಕಲಿತ ಕೆಲವು ಪಾಠ, ಕೆಲವು ಚಿಹ್ನೆಗಳ ಉಪಯೋಗ ಮುಂದೆ ನನ್ನ ಕೆಲಸದಲ್ಲಿ ನೆರವಾಗಿ ನಿಂತಿತು.

ನಾನು ಅಂದಿನ ಸಭೆಗೆ ಬೇಕೆಂತಲೇ ಹೋಗಲಿಲ್ಲ. ತಂದೆಯು ಓದುಗಾರಿಕೆ ಸಭಿಕರಿಗೆ ಸರಿತೋರದೆ, ಅಷ್ಟೊಂದು ಮುತುವರ್ಜಿ ವಹಿಸಿ ಬರೆದ ಲೇಖನಕ್ಕೆ ಸರಿಯಾದ ಮನ್ನಣೆ ಎಲ್ಲಿ ದೊರೆಯದೆ ಹೋಗುವುದೋ ಎನ್ನುವ ಶಂಕೆ ನನ್ನನ್ನು ಹೋಗದೆ ತಡೆದುಬಿಟ್ಟಿತು. ಆದರೆ ಅಂದಿನ ಉಪನ್ಯಾಸ ಬಹಳ ಸ್ವಾರಸ್ಯವಾಗಿಯೇ ಇತ್ತೆನ್ನುವುದು ತಂದೆಗೆ ಮಾರನೆಯ ದಿನ ಅವರ ಮಿತ್ರರಿಂದ ಬಂದ ಕಾಗದದಿಂದ ತಿಳಿಯಿತು ;—

Dear Mr. Puttaiya

Early in the morning just a few lines to offer you my heartiest congratulations on your splendid achievement of yesterday. The ideas, the language, the style and the delivery were all brilliant and it goes without saying that yours is the best of the series yet delivered........................ Indeed you deserve to be warmly congratulated by your friends and admirers.

ಉಪನ್ಯಾಸ ಚೆನ್ನಾಗಿಯೇ ಇತ್ತೆಂದು ತೋರುತ್ತದೆ. ಅಂದಿನ ದಿನದ ಸಭೆಯ ಅಧ್ಯಕ್ಷರಾದ ಸರ್ ಪುಟ್ಟಣ್ಣಶೆಟ್ಟರು ಉಪನ್ಯಾಸವನ್ನು ಉಪನ್ಯಾಸಕರನ್ನು ಬಾಯಿತುಂಬ ಹೊಗಳಿದರು.

ಹೊರಗಿನ ಪತ್ರಿಕೆಗಳಲ್ಲೂ ಉಪನ್ಯಾಸದ ವಿಮರ್ಶೆ ಬಂತು. ಮುದ್ರಣ ವಿಷಯಿಕ ಪತ್ರಿಕೆಗಳಲ್ಲಿ ಮುಖ್ಯಸ್ಥಾನವನ್ನು ಗಳಿಸಿರುವ "British Printer" ಎಂಬ ಪತ್ರಿಕೆ ಉಪನ್ಯಾಸವನ್ನು ವಿಮರ್ಶಿಸುತ್ತ ಹೀಗೆಂದು ಬರೆಯಿತು :

A lecture delivered at Bangalore by Mr. B. Puttaiya B. A., Retired Superintendent, Government Press, Bangalore, dealt with Printing as a career so thoroughly as to form ***one of the best descriptions of what Printing is that we have read for some time.***

Mr. Puttaiya's own experience enabled him to cover the ground in practical fashion. He is proud of being a member of the great industry, its value and utility being constantly emphasised. At the same time the graduates to whom the information was addressed must have realised that to be successful in print, demands education, practice, vision and never failing enthusiasm of the highest order. ***It is good to offer advice from such a lofty standard.***

ಇಷ್ಟೆಲ್ಲ ಒಳ್ಳೆಯ ಅಭಿಪ್ರಾಯ ಬಂದರೂ ಸಹ ಉಪನ್ಯಾಸದ ಮುಖ್ಯ ಉದ್ದೇಶ — ವಿದ್ಯಾವಂತರಾದ ಯುವಕರು ಮುದ್ರಣ ವೃತ್ತಿಯನ್ನು ಕೈಗೊಳ್ಳುವಂತೆ ಪ್ರೇರಿಸುವ ಉದ್ದೇಶ ಮಾತ್ರ ಫಲಿಸಲಿಲ್ಲ. ತಂದೆ ಕೊಟ್ಟ ಉಪನ್ಯಾಸದ ಫಲವಾಗಿಯೇ ಯಾರೊಬ್ಬರೂ ಮುದ್ರಣವೃತ್ತಿಯನ್ನು ತಮ್ಮ ಕಸುಬಾಗಿಟ್ಟುಕೊಂಡುದನ್ನು ನಾನು ಕಾಣೆ. ತಂದೆ ಮನೆಮಕ್ಕಳಾದ ನಮ್ಮಲ್ಲಿ ಯಾರೊಬ್ಬರಿಗಾದರೂ ಮುದ್ರಣಕಲೆಯಲ್ಲಿ ಉಚ್ಚರೀತಿಯ ಶಿಕ್ಷಣವನ್ನು ದೊರಕಿಸಿಕೊಡಬಹುದಾಗಿತ್ತು. ನಿವೃತ್ತರಾದಮೇಲೆ ತಮ್ಮದೇ ಒಂದು ಮುದ್ರಾಲಯವನ್ನು ತೆಗೆದು ತಮ್ಮ ಅನುಭವವನ್ನು ಅದಕ್ಕೆ ದೊರಕಿಸಿ ಕೊಡಬಹುದಾಗಿತ್ತು. ಮಿಕ್ಕ ಯುವಕರಿಗೆ ಉಪದೇಶ ಮಾಡಿದುದನ್ನು ತಮ್ಮ ಮನೆಯಲ್ಲಿಯೇ ಆಚರಣೆಗೆ ತರಬಹುದಾಗಿತ್ತು. ಅಂಥ ಕಾರ್ಯವನ್ನು

ಅವರೇಕೊ ಮಾಡಲಿಲ್ಲ. ಸರಕಾರದ ಕೆಲಸದತ್ತ ನಮ್ಮೆಲ್ಲರನ್ನು ತಳ್ಳಿದರು. ಅವರು ನಮ್ಮನ್ನು ಸರಕಾರದ ಬಾಯ ತಂಬುಲಕ್ಕಾಗಿ ಕಾಯುವಂತೆ ಮಾಡಿ ಹೋದುದು ನನಗಂತೂ ಸರಿತೋರುವುದಿಲ್ಲ. ಮುದ್ರಣಕಲೆಯನ್ನು ಅಭ್ಯಾಸ ಮಾಡಬೇಕು, ಮುದ್ರಾಲಯ ಒಂದರಲ್ಲಿ ಕೆಲಸಮಾಡಬೇಕೆನ್ನುವ ಆಸೆ ನನ್ನಲ್ಲಿ ಬಹುದಿನದಿಂದ ಬೇರೂರಿದೆ. ಅದು ಎಂದಾದರೂ ಫಲಿಸೀತೊ ಇಲ್ಲವೊ ನೋಡಬೇಕು.

ಬೇರೆ ಇನ್ನು ಯಾರೂ ಮುದ್ರಣಾಲಯಗಳನ್ನು ತೆಗೆಯದೇ ಹೋದರೂ ತಂದೆ ತಾವಾಗಿ ಬೆಂಗಳೂರು ನಗರದಲ್ಲಿ ಎರಡು ಹೊಸ ಮುದ್ರಣಾಲಯಗಳನ್ನು ಸ್ಥಾಪಿಸುವ ಅವಕಾಶ ಒದಗಿಬಂತು. ಈ ಎರಡರಲ್ಲಿ ಒಂದು 'ದೇಶಬಂಧು'ವಿನ ಮುದ್ರಾಲಯ. ಇನ್ನೊಂದು ಸಾಹಿತ್ಯ ಪರಿಷತ್ತಿನ ಅಚ್ಚುಕೂಟ.

ಮೈಸೂರು ನ್ಯೂಸ್‌ಪೇಪರ್ ಕಂಪನಿ ಎಂಬ ಹೆಸರಿನಿಂದ ೧೯೩೯ ರ ಮೊದಲಲ್ಲಿ ಒಂದು ಪತ್ರಿಕಾ ಸಂಘ ಬೆಂಗಳೂರಿನಲ್ಲಿ ಹುಟ್ಟಿಕೊಂಡಿತು. ಶ್ರೀಯುತ ಗರುಡಾಚಾರ್ಯರು ಸಂಘದ ಅಧ್ಯಕ್ಷರಾಗಿದ್ದರು. ಕನ್ನಡ ಇಂಗ್ಲೀಷು ಎರಡು ಭಾಷೆಗಳಲ್ಲಿ ಪತ್ರಿಕೆ ಹೊರಡಿಸಬೇಕೆಂದೂ, ಕನ್ನಡ ಪತ್ರಿಕೆಯ ಹೆಸರು 'ದೇಶಬಂಧು' ಎಂದಿರಬೇಕೆಂದೂ ನಿರ್ಧರಿಸಿತ್ತು. ಈ ಪತ್ರಿಕೆಯ ಕಾರ್ಯಕರ್ತರ ಗುಂಪಿಗೆ ತಂದೆ ಯಾವರೀತಿ ಸೇರಿದರೋ ನಾನು ತಿಳಿಯೆ. ಈ ಪತ್ರಿಕೆಯ ಕೆಲಸ ಅವರ ಮನಸಿಗೆ ಹಿತಕರವಾಗಿರಲಿಲ್ಲವೆನ್ನುವುದು ಮಾತ್ರ ಅವರ ದಿನಚರಿಯಿಂದ ತಿಳಿಯುತ್ತದೆ. ಪ್ರಾಯಶಃ ಮುದ್ರಣ ಕಲೆಯಲ್ಲಿ ಅವರಿಗಿದ್ದ ಅನುಭವವನ್ನು ಪಡೆಯುವುದಕ್ಕಾಗಿ ಮಿತ್ರರು ಅವರನ್ನು ಸೇರಿಸಿಕೊಂಡಂತೆ ಕಾಣುತ್ತದೆ. ಮುದ್ರಾಲಯಕ್ಕೆ ಯಂತ್ರಗಳನ್ನು ಕೊಳ್ಳುವ, ಅವುಗಳನ್ನು ತಂದು ಜೋಡಿಸುವ ಕಾರ್ಯ ತಂದೆಯ ಪಾಲಿನದಾಗಿತ್ತು. ಈ ಎಲ್ಲ ಕಾರ್ಯವನ್ನು ಅವರು ನಡೆಸಿಕೊಟ್ಟು, "ನಾನು ಮಾಡಿದ ಕೆಲಸವೆಲ್ಲ ಮುಗಿಯಿತು. ಪತ್ರಿಕೆಯನ್ನು ಮುದ್ರಿಸುವುದಕ್ಕೆ ಯಂತ್ರವೆಲ್ಲ ಸಿದ್ಧವಾಗಿದೆ. "ಹಿಂದು" ಪತ್ರಿಕೆಯ ಆಕಾರ ಬರಬೇಕಾದರೆ ಇನ್ನು ಒಂದು ಯಂತ್ರ ಜೋಡಿಸಬೇಕಾಗುತ್ತದೆ. ನನ್ನ ಕೈಲಿ ಏನು ಸಾಧ್ಯವೋ

ಎಲ್ಲವಮಾಡಿ ಅಚ್ಚುಕೂಟ ಸುಸೂತ್ರವಾಗಿ ಕೆಲಸಮಾಡುವಂತೆ ಏರ್ಪಡಿಸಿದ್ದೇನೆ. ಈಗ ಜವಾಬುದಾರಿಯುಳ್ಳ ಒಬ್ಬರನ್ನು ಪತ್ರಿಕೆಯ ಸಂಪಾದನೆಗೆ ಮತ್ತು ಅಚ್ಚುಕೂಟದ ವ್ಯವಸ್ಥೆಗೆ ನೇಮಿಸಬೇಕಾದ ಕೆಲಸ ಒಂದುಳಿದಿದೆ. ಎರಡು ಕೆಲಸವನ್ನು ಒಬ್ಬರೇ ನೋಡಿಕೊಳ್ಳುವಂತೆ ಯಾರಾದರೂ ಒಬ್ಬರನ್ನು ನೇಮಿಸಿದರೆ ಒಳ್ಳೆಯದು. ನನಗೆ ಇನ್ನು ಬಿಡುಗಡೆ ಮಾಡಬೇಕು, ಕೇಳಿಕೊಳ್ಳುತ್ತೇನೆ" ಎಂದು ಬರೆದು ಬಿಡುಗಡೆ ಕೋರಿದರು. ಆದರೆ ಅವರು ಬಯಸಿದ ಬಿಡುಗಡೆ ದೊರೆಯಲಿಲ್ಲ. ಒಲ್ಲದ ಮನಸಿನಿಂದ ಅವರು ಪತ್ರಿಕೆಯ ಕಛೇರಿಯಲ್ಲಿ 'General Superintendent' ಆಗಿ ಕೆಲಸ ಮಾಡಬೇಕಾಯಿತು. ಶ್ರೀ ಸಿ. ಹಯವದನರಾಯರು ಪತ್ರಿಕೆಯ ಮುಖ್ಯ ಸಂಪಾದಕರಾಗಿ ನೇಮಿತರಾಗಿದ್ದರು. ತಂದೆಗೆ ಈ ಕಾರ್ಯದಲ್ಲಿ ಮೊದಲೇ ಉತ್ಸಾಹವಿರಲಿಲ್ಲವೆಂದು ಹೇಳಿದ್ದೇನೆ. ಎರಡು ತಿಂಗಳು ಕೆಲಸಮಾಡುವ ಹೊತ್ತಿಗೆ ಅವರಿಗೆ ತೀರ ಬೇಸರವಾಗಿ ಹೋಯಿತು. ಇಷ್ಟು ಬೇಸರ ಬೀಳಲು ಅವರ ಮನ ಚುಚ್ಚುವಂಥ ಸಂಗತಿ ಏನೋ ನಡೆದಂತೆ ಕಾಣುತ್ತದೆ. ಅದೇನೆನ್ನುವುದು ಅವರು ಉಳಿಸಿಹೋಗಿರುವ ಪತ್ರಗಳಿಂದಾಗಲಿ ದಿನ ಚರಿಯಿಂದಾಗಲಿ ತಿಳಿಯುವುದಿಲ್ಲ. ಕಂಪನಿಯ ಅಧ್ಯಕ್ಷರು ಎಷ್ಟು ಕೇಳಿದರೂ ಒಪ್ಪದೆ, ೮-೭-೩೯ ರಲ್ಲಿ, I am really unable to continue and I therefore most humbly and respectfully beg of you to accept my resignation and leave me alone and oblige ಎಂದು ಕಾಗದ ಬರೆದು ಇಷ್ಟವಿಲ್ಲದ ಕೆಲಸದಿಂದ ನಿವೃತ್ತಿ ಹೊಂದಿದರು.

"ದೇಶಬಂಧು"ವನ್ನು ಬಿಟ್ಟ ಕಾಲಕ್ಕೆ ಪರಿಷತ್ತಿನ ಆಶ್ರಯದಲ್ಲಿ ಅಚ್ಚುಕೂಟ ಒಂದನ್ನು ಸ್ಥಾಪಿಸುವ ಕಾರ್ಯ ಅನುವಾಯಿತು. ಪರಿಷತ್ತಿನ ಆಶ್ರಯದಲ್ಲಿ ಕನ್ನಡ ಕಾರ್ಯ ನಡೆಯಲು ಅನುಕೂಲಿಸುವಂತೆ ಒಂದು ಅಚ್ಚುಕೂಟ ಏರ್ಪಡಿಸಲು ಪರಿಷತ್ತಿನ ಆಗಿನ ಉಪಾಧ್ಯಕ್ಷರಾದ ಶ್ರೀ. ಬಿ. ಎಂ. ಶ್ರೀಕಂಠಯ್ಯನವರು ಐದುಸಾವಿರ ರೂಪಾಯಿಗಳ ದಾನಮಾಡಿದ್ದರು ಮುದ್ರಣ ಯಂತ್ರಗಳನ್ನು ಕೊಳ್ಳುವುದಕ್ಕೂ ಅಚ್ಚುಕೂಟದ ಮೇಲ್ವಿಚಾರಣೆಗೂ ಸಹಾಯವನ್ನು ಕೋರಿ ಪರಿಷತ್ತಿನ ಕಾರ್ಯದರ್ಶಿಗಳು ತಂದೆಗೆ ಕಾಗದ

ಬರೆದರು. ತಂದೆ ಹೆಮ್ಮೆಯಿಂದ, ಅತಿಯಾದ ಆನಂದದಿಂದ ಈ ಕೆಲಸವನ್ನು ಒಪ್ಪಿಕೊಂಡರು. ಮದರಾಸಿಗೆ ಹೋಗಿ ಸುಲಭಕ್ರಯಕ್ಕೆ ಅಚ್ಚಿನ ಯಂತ್ರಗಳನ್ನು, ಅಚ್ಚು ಮೊಳೆಗಳನ್ನು, ಕೊಂಡು ತಂದರು. ಅತಿ ಶೀಘ್ರದಲ್ಲಿಯೇ ಅಚ್ಚುಕೂಟ ಸಿದ್ಧವಾಯಿತು. 'ಕನ್ನಡನುಡಿ' ಕೆಲವೇ ದಿನಗಳಲ್ಲಿ ಒಪ್ಪವಾಗಿ, ಯಾವ ಅಚ್ಚಿನ ತಪ್ಪೂ ಇಲ್ಲದೆ ಹೊರಬಿತ್ತು. ಅಚ್ಚುಕೂಟದ ಕಾರ್ಯವೆಲ್ಲ ಅಚ್ಚುಕಟ್ಟಾಗಿಯೇ ಇತ್ತು. ಅಚ್ಚುಕೂಟದ ಏಳಿಗೆ ಕಂಡು ಶ್ರೀಕಂಠಯ್ಯನವರಿಗೂ ಹಿಡಿಸಲಾರದ ಹಿಗ್ಗುಂಟಾಯಿತು. ಈ ಕಾಲದಲ್ಲಿ ತಂದೆಗೆ ಬರೆದ ಒಂದು ಪತ್ರದಲ್ಲಿ—"It is so nice of you to take all this trouble and give me perfect co-operation............what a gem of a man you are! God bless you" ಎಂದು ಹಿತನುಡಿ ನುಡಿದರು. ಈ ಮೆಚ್ಚಿಕೆಯ ಮಾತಿನಿಂದ ತಂದೆಗೆ ಅತಿಯಾದ ಸಂತೋಷವಾಗಿರಬೇಕು. ತಂದೆಗೂ ಶ್ರೀಕಂಠಯ್ಯನವರಿಗೂ ಆಗ ಉಂಟಾದ ಮೈತ್ರಿ ದಿನದಿನ ಬೆಳೆಯುತ್ತ ಹೋಯಿತು. ತಂದೆ ತೀರಿಹೋದಾಗ ತಮ್ಮ ಅನುತಾಪವನ್ನು ಸೂಚಿಸಿ ನನಗೆ ಬರೆದ ಒಂದು ಪತ್ರದಲ್ಲಿ 'ಶ್ರೀ'ಯವರು—"I particularly am grateful to him for having installed and supervised the Parishat Press. His striking qualities, his many sided public activities, his many sided personality, his frendliness will be missed by hundreds and thousands who knew and admired him. The State has lost one of its esteemed citizens and his friends a very good man" ಎಂದು ಬರೆದು ತಂದೆಯ ಮೇಲಿನ ಅಭಿಮಾನವನ್ನು ವ್ಯಕ್ತಪಡಿಸಿದರು.

ತಂದೆ ಕಾಲವಾದ ಒಂದು ವರ್ಷಕ್ಕೆ ಸರಿಯಾಗಿ ಶ್ರೀಯವರೂ ಕಣ್ಮರೆಯಾದರು. ಕನ್ನಡಕ್ಕೆ ನಿಜವಾದ ಸೇವೆ ಸಲ್ಲಿಸಿದವರು ಅವರು. ನಮ್ಮಲ್ಲಿ ಕನ್ನಡದ ಪರ ಅಭಿಮಾನ ಬೆಳೆದುಕೊಂಡು ಬರುವುದಕ್ಕೆ ಕಾರಣ

ರಾದವರು ಅವರು. "ಕನ್ನಡ ತಾಯೆ, ನಿನ್ನ ಶ್ರೀಕಂಠಮೇಪೋಯ್ತು ಕಳಿಯೆ ಶ್ರೀಕಂಠನ್" ಎಂದು ಹೇಳುವಾಗ ಕವಿ ಉತ್ಪ್ರೇಕ್ಷೆಮಾಡಲಿಲ್ಲ. ನಿಜವನ್ನು ಮಾತ್ರ ಹೇಳಿದ.

ನಿಮ್ಮ ಗೈಮೆಗಳೊಂದೆ ಎರಡೆ ಮೂರೆ ?
ಎನಿತುಕೊಂಡಾಡುವುದೊ ನಿಮ್ಮ ಮನವಾರೆ.
ಕನ್ನಡದ ಕಲ್ಮೆಯುಂ ಬೀರಿದಯ್ ಗುರುವೆ
ಕನ್ನಡದ ನಯ ನಲ್ಮೆ ಸಾರಿದಯ್ ಗುರುವೆ
ನಾಡನುಡಿಯೊಕ್ಕೂಟ ಕೊರ್ದಾರಿ ತೋರಿಸಿದೆ
ಜುರಿಪಾಗಿ ಕನ್ನಡದ ಬಾವುಟವ ಹಾರಿಸಿದೆ.
ನಿನ್ನಂತೆ ಕೊಟ್ಟರಾರ್ ತನುಮನಧನವ ನುಡಿಗೆ
ನಿನ್ನಂತೆ ಇಟ್ಟರಾರ್ ವಯಿರಮುಡಿ ತಾಯ ಮುಡಿಗೆ.

ಇಂಥ ಹಿರಿಯ ಸಾಹಿತಿಯೊಡನಿದ್ದ ಒಡನಾಟ, ಅಂಥವರಿಂದ ಪಡೆದುಕೊಂಡ ಮೆಚ್ಚಿಕೆ ಮಣ್ಣಣೆ ತಂದೆಯ ಜೀವನದ ಸುಕೃತಗಳ ಲ್ಲೊಂದಾಗಿತ್ತು.

## ಮರಿಯಪ್ಪನವರ ವಿದ್ಯಾರ್ಥಿನಿಲಯ ಮತ್ತು ಜನೋಪಕಾರಿ ದೊಡ್ಡಣ್ಣ ಶೆಟ್ಟರ ಧರ್ಮ.

ತಂದೆಯ ಸಾರ್ವಜನಿಕ ಕೆಲಸಗಳಲ್ಲಿ, ಮರಿಯಪ್ಪನವರ ವಿದ್ಯಾರ್ಥಿ ನಿಲಯ, ಜನೋಪಕಾರಿ ದೊಡ್ಡಣ್ಣಶೆಟ್ಟರ ಧರ್ಮಸಂಸ್ಥೆ, ಇವುಗಳ ಮೇಲ್ವಿಚಾರಣೆಯನ್ನು ವಿತರಣೆಯಿಂದ ನೋಡಿಕೊಳ್ಳುವ ಕೆಲಸವೂ ಒಂದಾಗಿತ್ತು. ತಂದೆಯ ಜೀವನವನ್ನು ಚಿತ್ರಿಸುವಾಗ ಈ ಸಂಸ್ಥೆಗಳ ಪರಿಚಯವನ್ನು ಪ್ರಾಸಂಗಿಕವಾಗಿಯಾದರೂ ಇಲ್ಲಿ ಕೊಡುವುದು ಸೂಕ್ತವಾಗಿ ಕಾಣುತ್ತದೆ.

ನಗರ ನಗರಗಳಲ್ಲಿ ಈಗ ಎಲ್ಲೆಂದರಲ್ಲಿ ವಿದ್ಯಾರ್ಥಿನಿಲಯಗಳು ಹುಟ್ಟಿಕೊಳ್ಳುತ್ತಿವೆ. ಇದು ಸಂತೋಷಿಸತಕ್ಕ ವಿಷಯ ಆದರೂ ಇದರಲ್ಲೂ ಜಾತಿಯ ಪೆಡಂಭೂತ ತಲೆಹಾಕಿರುವುದನ್ನು ನೋಡಿದರೆ ಸಂತೋಷಿಸಲು ಕಾರಣವಿಲ್ಲವೆಂದೇ ತೋರುತ್ತದೆ. ಒಂದೊಂದು ನಿಲಯವೂ ಒಂದೊಂದು ಕೋಮಿಗೆ ಮೀಸಲಾಗಿ ಹುಟ್ಟಿಕೊಳ್ಳುತ್ತಿದೆ. ಬೇರೆಯವರು ಯಾರಿಗೂ ಅಲ್ಲಿ ಪ್ರವೇಶ ದೊರೆಯುವುದಿಲ್ಲ. ಬ್ರಾಹ್ಮಣ ಪಂಗಡದಲ್ಲೇ, ಹೆಬ್ಬಾರರಿಗೆಂದು ಒಂದು, ಬಬ್ಬೂರ ಕಮ್ಮೆಗಳಿಗೆಂದು ಒಂದು, ಕರ್ಣಾಟಕರಿಗೆಂದು ಒಂದು, ಬಡಗನಾಡಿನವರಿಗೆಂದು ಒಂದು ಹೀಗೆ ಒಂದೊಂದು ಒಳಪಂಗಡಕ್ಕೂ ಒಂದೊಂದು ಬೇರೆಯಾದ ವಿದ್ಯಾರ್ಥಿನಿಲಯ ಹುಟ್ಟಿ, ವಿದ್ಯಾರ್ಥಿ ತನದಲ್ಲಿಯೇ, ಕೋಮಿನ ವಿಷವನ್ನು ಬೆರೆಸಿ ಜೀವನವನ್ನು ಕಹಿಯಾಗಿಸುತ್ತಿದೆ. ಇಂಥ ಆರೋಪಕ್ಕೆ ಅಪ್ಪಾಗಿ ಪಕ್ಕಾಗದ ಸಂಸ್ಥೆಯೆಂದರೆ ಬೆಂಗಳೂರು ಚಾಮರಾಜಪೇಟೆಯಲ್ಲಿರುವ ಮರಿಯಪ್ಪನವರ ವಿದ್ಯಾರ್ಥಿನಿಲಯ.

ಬೆಂಗಳೂರು ಕೋಟೆ ಮರಿಶಾಮಣ್ಣನವರ ಮಕ್ಕಳಾದ ಮರಿಯಪ್ಪನವರು ಇಲ್ಲಿಗೆ ಅರ್ಧಶತಮಾನಕ್ಕೂ ಹಿಂದೆ ಜೀವಿಸಿದ್ದ ನಗರ್ತ ಲಿಂಗಾಯತ ಕೋಮಿನ ವರ್ತಕರು. ತಮ್ಮ ಜೀವಿತಕಾಲದಲ್ಲಿ ಬಡವಿದ್ಯಾರ್ಥಿಗಳ ಹೀನ ದೆಸೆಯನ್ನು ಕಂಡು ಮರುಗಿ ವಿಶೇಷ ಸಹಾಯ ಒದಗಿಸಿದ ಮಹನೀಯರು. ಅವರ ಮನಸಿನಲ್ಲಿ ಯಾವ ಉನ್ನತವಾದ ಧ್ಯೇಯ ಮನೆಮಾಡಿಕೊಂಡಿತ್ತೊ,

ಸಾಯುವುದಕ್ಕೆ ಕೆಲವು ದಿನಗಳಿಗೆ ಮುಂಚೆ ಒಂದೂವರೆ ಲಕ್ಷ ರೂಪಾಯಿಗಳಿಗೂ ಮಿಕ್ಕು ಬಾಳುವ ತಮ್ಮೆಲ್ಲ ಆಸ್ತಿಯನ್ನು ಬಡವಿದ್ಯಾರ್ಥಿಗಳ ಏಳಿಗೆಗಾಗಿ ಮೀಸಲಾಗಿಡಬೇಕೆಂದು ಬರೆದಿಟ್ಟರು. ಆ ಕಾಲದಲ್ಲಿ ಶ್ರೀ ಮರಿಯಪ್ಪನವರನ್ನು ಇಂಥ ಕಾರ್ಯಕ್ಕೆಗೊಳ್ಳಲು ಪ್ರೇರಿಸಿದ ಶಕ್ತಿ ಯಾವುದೋ! ತಮ್ಮ ಕೋಮಿನ ವಿದ್ಯಾರ್ಥಿಗಳಿಗೇ ಅಲ್ಲ, ಬ್ರಾಹ್ಮಣರು ಬ್ರಾಹ್ಮಣೇತರರಿಗೂ ಸಮಾನಾವಕಾಶ ಕೊಡಬೇಕೆನ್ನುವುದು ಅವರ ಇಷ್ಟವಾಗಿತ್ತು. ತಾವು ಬರೆದಿಟ್ಟ ಉಯಿಲಿನಲ್ಲಿ ತಮ್ಮ ಆಸ್ತಿಯ ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು ಆರುಜನ ಟ್ರಸ್ಟಿಗಳನ್ನು ಹೆಸರಿಸಿದರು. ಈ ಟ್ರಸ್ಟಿಗಳು ಆಸ್ತಿಯೆಲ್ಲವನ್ನೂ ಮಾರಿ ಬಂದ ಹಣವನ್ನು ಸರಕಾರದ ನಿಧಿಗಳಲ್ಲಿ ಇಡಬೇಕೆಂದೂ, ಆ ಹಣದಿಂದ ಬರುವ ಬಡ್ಡಿಯಲ್ಲಿ ಹೆಂಡತಿಯಾದ ಗಿರಿಜಮ್ಮನಿಗೆ ತಿಂಗಳಿಗೆ ನಲವತ್ತು ರೂಪಾಯಿಗಳನ್ನು ಕೊಟ್ಟು, ಉಳಿದ ಹಣದಲ್ಲಿ ಪ್ರೋತ್ಸಾಹಯೋಗ್ಯರಾದ ನಲವತ್ತೈದು ಜನ ಬಡಹುಡುಗರಿಗೆ (ಇಲ್ಲಿ ಸಹ ಮತದ ಲೆಕ್ಕಾಚಾರ ಬರದೆ ಹೋಗಲಿಲ್ಲ. ೪೫ ಜನ ಹುಡುಗರಲ್ಲಿ ೧೫ ಜನ ಲಿಂಗಾಯಿತರು, ೧೫ ಜನ ಬ್ರಾಹ್ಮಣರು, ೧೫ ಜನ ಇತರ ಮತೀಯರು ಇರಬೇಕೆಂದು ನಿರ್ಧರಿಸಿತ್ತು) ತಮ್ಮ ಆಸ್ತಿಯ ಸ್ವಲ್ಪಭಾಗದಿಂದಲೂ, ಸರಕಾರ ಕೊಡಬಹುದಾದ ಸಹಾಯ ದ್ರವ್ಯದಿಂದಲೂ ಒಂದು ಕಟ್ಟಡವನ್ನು ಕಟ್ಟಿ, ವಿದ್ಯಾರ್ಥಿಗಳಿಗೆ ಉಚಿತವಾಗಿ ಊಟ ವಸತಿಯನ್ನು ಕೊಟ್ಟು ನೋಡಿಕೊಳ್ಳಬೇಕೆಂದೂ ಮರಿಯಪ್ಪನವರು ತಮ್ಮ ಇಷ್ಟವನ್ನು ವ್ಯಕ್ತಪಡಿಸಿದ್ದರು. ತಮ್ಮ ಮೇಲಿನ ಇಷ್ಟವನ್ನು ಕಾರ್ಯರೂಪಕ್ಕೆ ತರಲು, ತಮ್ಮ ನಂಬಿಕೆಗೆ ಪಾತ್ರರಾದ ಶ್ರೀಗಳಾದ ಹೆಚ್. ವಿ. ನಂಜುಂಡಯ್ಯನವರು. ಹೆಚ್. ರಾಮಯ್ಯನವರು, ಹೊಸಕೋಟೆ ವೆಂಕಟರಾಮಶಾಸ್ತ್ರಿಗಳು, ಬಿ. ಕೆಂಪಣ್ಣನವರು, ಮಧುರೆ ಚೆನ್ನಪ್ಪನವರು, ಸಿ. ಎನ್. ನಂಜಪ್ಪನವರು ಈ ಆರು ಜನರನ್ನು ಹೆಸರಿಸಿದ್ದರು.

ದಾತೃವಿನ ಇಷ್ಟದಂತೆ ಕಟ್ಟಡವನ್ನು ಕಟ್ಟಲು ಚಾಮರಾಜಪೇಟೆ ರಾಮೇಶ್ವರನ ಗುಡಿ ಎದುರುಗಡೆ ಇದ್ದ ವಿಶಾಲವಾದ ಮಾವಿನ ತೋಟಿನ ಬಯಲನ್ನು ಮುನಿಸಿಪಾಲಿಟಿಯವರಿಂದ ಕಡಿಮೆ ಬೆಲೆಗೆ ತೆಗೆದುಕೊಂಡರು.

ನಲವತ್ತೈದು ಜನ ಹುಡುಗರಿಗೆ ವಸತಿಯನ್ನು ಕಲ್ಪಿಸಲು ಅನುಕೂಲಿಸುವಂತೆ ಕಟ್ಟಡ ಒಂದರ ನಕ್ಷೆ ತಯಾರಾಯಿತು. ಹಾಸ್ಟಲು ಕಟ್ಟಡವೂ ಮೇಲೆದ್ದಿತು. ಆಗ ಮೊದಲನೆಯ ಮಹಾಯುದ್ಧದ ಕಾಲವಾದ್ದರಿಂದ ಸಾಮಾನುಗಳ ಬೆಲೆಯೆಲ್ಲ ಹೆಚ್ಚಿತ್ತಂತೆ. ಆ ಕಾಲದಲ್ಲೇ ಕಟ್ಟಡ ಕಟ್ಟಲು ಸುಮಾರು ಐವತ್ತುನಾಲ್ಕು ಸಾವಿರ ರೂಪಾಯಿ ವ್ಯಯವಾಯಿತು. ಈ ಹಣದಲ್ಲಿ ಸರಕಾರದವರು ೨೨,೨೬೧-೦-೦ ರೂಪಾಯಿಗಳನ್ನು ಕೊಟ್ಟರು. ೧೯೨೧ ನೆ ಇಸವಿ ಜೂನ್ ತಿಂಗಳು ೩೦ ನೆಯ ತಾರೀಖು ಗೃಹಪ್ರವೇಶ ಶಾಸ್ತ್ರೋಕ್ತವಾಗಿ ನೆರವೇರಿತು. ಮೊದಲಿಗೆ ಮುವ್ವತ್ತು ವಿದ್ಯಾರ್ಥಿಗಳು ಮಾತ್ರವಿದ್ದರು. ೧೯೨೨ ರಿಂದ ವಿದ್ಯಾರ್ಥಿಗಳ ಸಂಖ್ಯೆ ನಲವತ್ತೈದಕ್ಕೇರಿತು. ಮಧ್ಯೆ ಹದಿಮೂರು ತಿಂಗಳ ಕಾಲ ಹಣದ ಅಭಾವದಿಂದ ನಿಲಯ ಮುಚ್ಚಿದ್ದು ಹೊರತು ಮಿಕ್ಕಂತೆ ಸುಸೂತ್ರವಾಗಿ ನಿಲಯದ ಕಾರ್ಯ ನೆರವೇರುತ್ತ ಬಂದಿದೆ.

ಈ ಸಂಸ್ಥೆ ಹುಟ್ಟಿ ಈಗ್ಗೆ ಇಪ್ಪತ್ತೈದು ವರ್ಷಗಳಿಗೂ ಮೀರಿ ಹೋಯಿತು. ರಜತಮಹೋತ್ಸವವನ್ನು ಆಚರಿಸಿದರೋ ಇಲ್ಲವೋ? ಆಚರಿಸಿದಂತೆ ಕಾಣೆ. ದುಃಖದ ಸಂಗತಿಯೆಂದರೆ ಈ ಸಂಸ್ಥೆಯ ಆಶ್ರಯ ಪಡೆದು ವಿದ್ಯಾಭ್ಯಾಸ ಪಡೆದ ವಿದ್ಯಾರ್ಥಿಗಳ ಹೆಸರು, ಅವರು ಎಲ್ಲಿಯವರು, ಈಗ ಏನುಮಾಡುತಲಿದ್ದಾರೆ, ಎನ್ನುವ ವಿವರ ಸಂಸ್ಥೆಯ ಕಛೇರಿಯಲ್ಲಿ ದೊರೆಯುವುದಿಲ್ಲವಂತೆ. ಈ ಸಂಸ್ಥೆಯಿಂದ ಸಹಾಯ ಹೊಂದಿದ ಅನೇಕರು ನನಗೆ ತಿಳಿದಂತೆ ಈಗ ಉತ್ತಮ ಸ್ಥಿತಿಯಲ್ಲಿದ್ದಾರೆ. ಅವರೆಲ್ಲರ ಮನಸಿನಲ್ಲಿಯೂ ತಮ್ಮ ವಿದ್ಯಾರ್ಥಿ ದೆಸೆಯಲ್ಲಿ ಕಷ್ಟಕಾಲದಲ್ಲಿ ಸಾಕಿ ಸಲಹಿದ ಈ ಸಂಸ್ಥೆಯ ಪರ ಅಭಿಮಾನ ವಿಶೇಷವಾಗಿಯೇ ಇರುತ್ತದೆಂದು ನನ್ನ ಭಾವನೆ. ಅವರ ಅಭಿಮಾನ ಕಾರ್ಯರೂಪಕ್ಕೆ ಇಳಿಯುವಂತೆ ಮಾಡುವುದು ಸಂಸ್ಥೆಯ ಹಿತವನ್ನೇ ಮುಖ್ಯವಾಗಿಟ್ಟುಕೊಂಡಿರುವವರ ಕರ್ತವ್ಯವಾಗಿತ್ತು. ಹಾಗಿಲ್ಲದೆ ಹೋದುದು ತೀರ ಶೋಚನೀಯ. ಮರಿಯಪ್ಪನವರು ದಾನವಾಗಿ ಕೊಟ್ಟ ಹಣಕ್ಕೆ ಬೇರೆ ಯಾವರೀತಿಯಿಂದಲೂ ಹಣ ಶೇಖರವಾದಂತಿಲ್ಲ. ಮೊದಲಿದ್ದ ನಿಧಿ ಕಮ್ಮಿಯಾಗುತ್ತ ಹೋಯಿತೇ ಹೊರತು ಬೆಳೆಯಲಿಲ್ಲ. ಸಂಸ್ಥೆಯಿಂದ ಮೊದಲಿಗೆ ಪ್ರಯೋಜನ ಪಡೆದವರು ಉತ್ತಮಸ್ಥಿತಿ ಗಳಿಸಿ

ಕೊಂಡಾಗ ಸಂತೋಷದಿಂದ ಹೆಮ್ಮೆಯಿಂದ ತಮ್ಮ ಕಾಣಿಕೆಯನ್ನು ಸಲ್ಲಿಸಬಹುದಾಗಿತ್ತು. ಸಂಘದ ನಿಧಿ ಈ ಇಪ್ಪತ್ತೈದು ವರ್ಷಗಳಲ್ಲಿ ದ್ವಿಗುಣವಾಗಬಹುದಾಗಿತ್ತು. ಸಹಾಯ ಪಡೆಯುತ್ತಿರುವ ವಿದ್ಯಾರ್ಥಿಗಳ ಸಂಖ್ಯೆ ಇನ್ನೂ ಎಷ್ಟೋ ಹೆಚ್ಚಿಸಬಹುದಾಗಿತ್ತು. ಈ ರೀತಿಯಲ್ಲಿ ಸಂಸ್ಥೆಯ ಹಿತಚಿಂತಕರ ದೃಷ್ಟಿ ಓಡಲಿಲ್ಲವೇಕೊ !

ಕಾಲ ಬದಲಾಯಿಸುತ್ತಿದೆ. ಮರಿಯಪ್ಪನವರು ದಾನ ಕೊಟ್ಟ ಕಾಲಕ್ಕೆ ದೊಡ್ಡದಾಗಿ ತೋರುತ್ತಿದ್ದ ಹಣ ಈ ಕಾಲಕ್ಕೆ ಅಷ್ಟೇನೂ ದೊಡ್ಡದಾಗಿ ತೋರುತ್ತಿಲ್ಲ. ಮೂಲ ಹಣವನ್ನು ಹೆಚ್ಚಿಸುವ ಅಗತ್ಯ ದಿನೇ ದಿನೇ ಹೆಚ್ಚುತ್ತಿದೆ. ಸಂಸ್ಥೆಯ ಸಹಾಯಪಡೆದು ತಮ್ಮ ವಿದ್ಯಾಭ್ಯಾಸವನ್ನು ಮುಗಿಸಿದವರು ಸಂಸ್ಥೆಗೆ ಹಣ ಕೊಟ್ಟಾಗಲಿ ಬೇರೆ ಇನ್ನು ಯಾವ ರೀತಿಯಲ್ಲಾಗಲಿ ಸಹಾಯ ಮಾಡುವುದು ತಮ್ಮ ದೊಡ್ಡ ಕರ್ತವ್ಯವೆಂದು ತಿಳಿಯಬೇಕು. ಮರಿಯಪ್ಪನವರ ವಿದ್ಯಾರ್ಥಿನಿಲಯದಲ್ಲಿ ಒಮ್ಮೆ ತಂದೆ ಉಪನ್ಯಾಸ ಮಾಡುತ್ತ, ವಿದ್ಯಾರ್ಥಿಗಳ ಮನಸು ಇತ್ತ ಹರಿಯುವಂತೆ ಉಪದೇಶಿಸಿದರು. ಹಣವನ್ನು ಕಳುಹಿಸಲಾಗದಿದ್ದರೆ ಹಬ್ಬದ ದಿನ – ಯುಗಾದಿಯ ದಿನ – ಉಪಯುಕ್ತವಾದ ಯಾವುದಾದರೊಂದು ಸಾಮಾನನ್ನು ಕಳುಹಿಸುವ ಸಂಪ್ರದಾಯವನ್ನು ಬೆಳೆಸಿಕೊಂಡು ಬರಬೇಕೆಂದು ಕೋರಿದರು. ಕೊಡುವ ಸಾಮಾನು ಪಾತ್ರೆ ಸಾಮಾನಾಗಿರಬಹುದು, ಕುರ್ಚಿ ಮೇಜಾಗಿರಬಹುದು, ಪುಸ್ತಕವಾಗಿರಬಹುದು. ಪ್ರಾಯಶಃ ವಿದ್ಯಾರ್ಥಿಗಳಿಗೆ ಬಹುವಾಗಿ ಉಪಯೋಗಕರವಾದ ಬಹುಮಾನನೆಂದರೆ ಸಂಸ್ಥೆಯ ಸರಸ್ವತೀ ಭಂಡಾರಕ್ಕೆ ದಾನವಾಗಿ ಬರುವ ಪುಸ್ತಕಗಳು. ಮದರಾಸಿನ ಕ್ರಿಶ್ಚಿಯನ್ ಕಾಲೇಜಿನ ಹಾಸ್ಟೆಲಿನಲ್ಲಿ ಈ ಬಗೆಯ ಸಂಪ್ರದಾಯ ಬೆಳೆದುಕೊಂಡು ಬಂದಿದೆಯಂತೆ. ಹಾಸ್ಟೆಲಿನಲ್ಲಿದ್ದ ಹುಡುಗರು ತಾವು ಹಾಸ್ಟಲನ್ನು ಬಿಟ್ಟಮೇಲೆ ಎಲ್ಲಿಯೇ ಇರಲಿ ದೀಪಾವಳಿಯ ದಿನ ಹಾಸ್ಟಲಿಗೆ ಬೆಲೆಯುಳ್ಳ ಒಂದು ಪುಸ್ತಕವನ್ನಾದರೂ ಕಳುಹಿಸಬೇಕೆಂದು ತೀರ್ಮಾನಿಸಿಕೊಂಡಿದ್ದಾರಂತೆ. ಇದರ ಫಲವಾಗಿ ದೀಪಾವಳಿಯ ದಿನವನ್ನು ನಿಶ್ಚಯವಾಗಿಯೂ ದೊಡ್ಡ ಹಬ್ಬದ ದಿನದಂತೆ ಆಚರಿಸುತ್ತಾರಂತೆ. ಅಂದು ನೂರಾರು ಪುಸ್ತಕಗಳು, ಹಣ, ನಾಡಿನ

ಮೂಲೆ ಮೂಲೆಯಿಂದ ಬಂದು ಸೇರುತ್ತದಂತೆ. ದೀಪಾವಳಿಯ ದಿವಸ ಹುಡುಗರೆಲ್ಲರಲ್ಲೂ ಮಿತಿಮೀರಿದ ಉತ್ಸಾಹವಿರುತ್ತಂತೆ. ವಿದ್ಯಾರ್ಥಿಗಳ ಮುಂದೆ ಎಂಥ ಆದರ್ಶ ಅವರು ಕಟ್ಟಿಕೊಟ್ಟಿದ್ದಾರೆ. ಅಂಥದೇ ಒಂದು ಸಂಪ್ರದಾಯ ನಮ್ಮ ಹಾಸ್ಟೆಲುಗಳಲ್ಲೂ ಬೆಳೆದುಕೊಂಡು ಬರಕೂಡದೇತಕ್ಕೆ?

ಸಂಸ್ಥೆಯ ಸಹಾಯ ಪಡೆದ ವಿದ್ಯಾರ್ಥಿಗಳಿಗೆ ಒಂದು ಕರ್ತವ್ಯವಿರುವಂತೆ ಇಂಥ ಸಂಸ್ಥೆಗಳ ಪರ ಮಹಾಜನರದೂ ಒಂದು ಕರ್ತವ್ಯವಿದೆ. ಧರ್ಮಾತ್ಮರಾದವರೇನೊ ತಮ್ಮೆಲ್ಲ ಆಸ್ತಿಯನ್ನೂ ಧರ್ಮಕಾರ್ಯಕ್ಕೆ ವಿನಿಯೋಗಿಸಿ ಹೋದರು. ಅಷ್ಟು ಅನುಕೂಲವಿಲ್ಲದವರು ಸ್ವಲ್ಪ ಮಟ್ಟಿನ ಹಣವನ್ನಾದರೂ ಇಂಥ ಕಾರ್ಯಕ್ಕೆ ವಿನಿಯೋಗಿಸಕೂಡದೇತಕ್ಕೆ! ಒಬ್ಬೊಬ್ಬ ಹುಡುಗನ ಖರ್ಚನ್ನೂ ಒಬ್ಬೊಬ್ಬ ಮಹನೀಯರು ನೋಡಿಕೊಳ್ಳುವಂತೆ ಆಗಕೂಡದೇಕೆ? ಮೊದಲು ಹೇರಳವಾದ ಧನ ಕೊಟ್ಟವರು ನಮಗಾಗಿ ದಾರಿ ಮಾಡಿದ್ದಾರೆ. ಆ ದಾರಿಯಲ್ಲಿ ನಡೆದು ಹೋಗುವುದು ನಮ್ಮ ಕರ್ತವ್ಯ. ಅಶಕ್ತಪೋಷಕ ಸಭೆಯಂಥ ಸಂಸ್ಥೆಗೆ ಈಗ ಆ ಸಂಸ್ಥೆಯವರು ಕೇಳದೆಯೇ ಧನ ತಾನಾಗಿ ಬರುತ್ತಿದೆ. ನಾನು ಮುಂದೆ ತಾನು ಮುಂದೆ ಎಂದು ಮಹನೀಯರು ಬಂದು ಹಣವನ್ನೂ, ಅನ್ನ ಸಾಮಗ್ರಿಯನ್ನೂ ಒದಗಿಸಿ ಕೊಡುತ್ತಲಿದ್ದಾರೆ. ವಿದ್ಯಾದಾನಕ್ಕೂ ಇದೇ ತರದ ಪೈಪೋಟಿ ಇರಕೂಡದೇತಕ್ಕೆ? ಮರಿಯಪ್ಪನವರಂಥ ಮಹನೀಯರ ಸ್ತುತ್ಯವಾದ ಧರ್ಮಕಾರ್ಯ ಹತ್ತು ಮಡಿ, ನೂರು ಮಡಿ ಬೆಳೆಯಲು ಆಗ ಸಹಾಯವಾದೀತು.

ಮರಿಯಪ್ಪನವರ ವಿದ್ಯಾರ್ಥಿ ನಿಲಯ ಹುಟ್ಟಿಕೊಂಡು ಕೆಲಸ ಮಾಡುತ್ತಿದ್ದ ಸುಮಾರಿಗೆ ಇನ್ನೊಂದು ಅದೇ ತರದ ಧರ್ಮಸಂಸ್ಥೆ ವಿದ್ಯಾಭ್ಯಾಸದ ಪ್ರೋತ್ಸಾಹಕ್ಕಾಗಿಯೇ ಹುಟ್ಟಿಕೊಂಡಿತ್ತು. ಈ ಧರ್ಮಕ್ಕೆ ಕಾರಣರಾದವರು ಜನೋಪಕಾರಿಯೆಂದು ಮನ್ನಣೆ ಪಡೆದಿದ್ದ ಯಜಮಾನ ದೊಡ್ಡಣ್ಣಶೆಟ್ಟರವರು. ವಿದ್ಯಾಭ್ಯಾಸದ ಪ್ರೋತ್ಸಾಹಕ್ಕಾಗಿ ಹುಟ್ಟಿಕೊಂಡ ಈ ಎರಡು ಧರ್ಮಸಂಸ್ಥೆಗಳ ಮೇಲ್ವಿಚಾರಣೆಗಳನ್ನು ನೋಡಿಕೊಳ್ಳುವ ಭಾಗ್ಯ ತಂದೆಯದಾಗಿತ್ತು.

ಜನೋಪಕಾರಿ ಜ್ಯೋತಿನಗರದ ಯಜಮಾನ್ ದೊಡ್ಡಣ್ಣಶೆಟ್ಟರು ತಮ್ಮ ಇಷ್ಟದೈವವಾದ ಶ್ರೀ ಲಕ್ಷ್ಮೀ ನರಸಿಂಹ ಸ್ವಾಮಿಯ ಹೆಸರಿನಲ್ಲಿ ಹೇರಳವಾದ ತಮ್ಮ ಆಸ್ತಿಯನ್ನು ಧರ್ಮ ಕಾರ್ಯಗಳಿಗಾಗಿ ವಿನಿಯೋಗಿಸಿದರು. ಈಗ ಸಿನಿಮಾ ಮಂದಿರವಾಗಿರುವ ದೊಡ್ಡಣ್ಣ ಹಾಲ್ ಮತ್ತು ಆ ವಿಶಾಲವಾದ ಆವರಣದಲ್ಲಿರುವ ಅನೇಕ ಅಂಗಡಿಗಳು ಇವೆಲ್ಲ ದೊಡ್ಡಣ್ಣಶೆಟ್ಟರ ಆಸ್ತಿ. ಇವುಗಳಿಂದ ಬರುವ ಬಾಡಿಗೆಯಿಂದ, ಪ್ರೈಮರಿ, ಮಿಡಲ್ ಮತ್ತು ಹೈಸ್ಕೂಲು ತರಗತಿಗಳು ನಡೆಯುತ್ತಿವೆ. ನೆಯ್ಗೆ ಕೆಲಸ, ಮರಗೆಲಸ, ಕುಲುಮೆ ಕೆಲಸ, ಕತ್ತನೆ ಕೆಲಸ, ಬೆತ್ತದ ಹೆಣಿಗೆ, ಈ ಕೆಲಸಗಳನ್ನು ಹೇಳಿಕೊಡಲು ಒಂದು ಕೈಗಾರಿಕಾ ಶಾಲೆ ಇದೆ. ತಮ್ಮ ಕೋಮಿನವರಾದ ಜ್ಯೋತಿ ನಗರದ ವೈಶ್ಯ ವಿದ್ಯಾರ್ಥಿಗಳಿಗಾಗಿ ಉಚಿತವಾದ ನಿಲಯ ಒಂದಿದೆ. ಈ ನಿಲಯದಲ್ಲಿನ ಪ್ರತಿ ಹುಡುಗನಿಗೂ ಒಂದು ಪೆಟ್ಟಿಗೆ, ಅವನಿಗೆ ಓದಲು ಬೇಕಾಗುವ ಪುಸ್ತಕಗಳು, ಒಂದು ಹಾಸಿಗೆ ಉಚಿತವಾಗಿ ಕೊಡಲಾಗುತ್ತಿದೆ. ಪ್ರತಿವರ್ಷ ದೊಡ್ಡಣ್ಣಶೆಟ್ಟರ ದಿನಾಚರಣೆಯ ಸಂದರ್ಭದಲ್ಲಿ ಪ್ರತಿಹುಡುಗನಿಗೂ ಒಂದು ಕೋಟು, ಎರಡು ಚಡ್ಡಿ, ಒಂದು ಜೊತೆ ಪಂಚೆ, ಒಂದು ಟವಲು, ಎರಡು ಬನೀನು ಕೊಡಲಾಗುತ್ತಿದೆ. ಎಲ್ಲ ಹುಡುಗರಿಗೂ ಎರಡು ಹೊತ್ತು ಊಟ ಒಂದು ಹೊತ್ತು ತಿಂಡಿ ದೊರೆಯುತ್ತದೆ. ಪ್ರತಿ ರಾತ್ರಿ ಕುಡಿಯಲು ಹಾಲು ಕೊಡಲು ಏರ್ಪಾಡಾಗಿದೆ. ಹದಿನೈದು ದಿನಕ್ಕೆ ಒಮ್ಮೆ ಹುಡುಗರು ಮುಖಕ್ಷೌರ ಮಾಡಿಸಿಕೊಳ್ಳುವ ಅನುಕೂಲತೆ ಇದೆ. ವಿದ್ಯಾರ್ಥಿಗಳ ತಂದೆ ತಾಯಿ ಅಥವ ನೆಂಟರಿಷ್ಟರು ಬಂದರೆ ಒಂದು ದಿನದ ಮಟ್ಟಿಗೆ ಅವರೂ ನಿಲಯದಲ್ಲೆ ಉಳಿದು ಊಟವನ್ನು ಉಚಿತವಾಗಿ ಮಾಡಿಕೊಂಡು ಹೋಗುವ ವ್ಯವಸ್ಥೆ ಇದೆ. ನಿಲಯದ ಪ್ರತಿಯೊಬ್ಬ ವಿದ್ಯಾರ್ಥಿಯೂ ಯಾವುದಾದರೂ ಒಂದು ಕೈಗಾರಿಕೆಯನ್ನು ಕಲಿತೇ ತೀರಬೇಕೆಂದು ನಿಯಮವಿದೆ. ವಿದ್ಯಾರ್ಥಿಗಳಾದವರಿಗೆ ಇಷ್ಟೊಂದು ವ್ಯವಸ್ಥಿತ ರೀತಿಯಲ್ಲಿ ಸಹಾಯ ದೊರಕಿಸಿ ಕೊಡುವ ಸಂಸ್ಥೆ ಬೇರೆ ಯಾವುದೂ ಇರುವ ನೆನಪಿಲ್ಲ. ಈ ರೀತಿಯಾಗಿ ವ್ಯವಸ್ಥೆಗೊಳಿಸಿದ ಕೀರ್ತಿ ದೊಡ್ಡಣ್ಣಶೆಟ್ಟರದು. ಅವರು ಕಣ್ಣು ಮರೆಯಾದ ಮೇಲೂ ಅದೇ ರೀತಿ ನಡೆಸಿಕೊಂಡು ಬರುತ್ತಿರುವ, ಧರ್ಮಕಾರ್ಯಕ್ಕೆ ನೆರವಾಗಿ ನಿಂತ ಮಹನೀಯರದು.

ಮರಿಯಪ್ಪನವರ ವಿದ್ಯಾರ್ಥಿನಿಲಯ, ಶ್ರೀ ಲಕ್ಷ್ಮೀ ನರಸಿಂಹ ಸ್ವಾಮಿಯ ಧರ್ಮ ನಿಲಯ, ಇಂಥ ಸಂಸ್ಥೆಗಳು, ವಿದ್ಯಾರ್ಥಿಗಳಿಗೆ ಉಚಿತ ವಾಗಿ ವಸತಿಯನ್ನೂ ಊಟವನ್ನೂ ಕಲ್ಪಿಸುವುದರಲ್ಲೆ ತೃಪ್ತರಾಗದೆ ವಿದ್ಯಾರ್ಥಿಗಳ ಮುಂದಿನ ಆಗು ಹೋಗುಗಳನ್ನು ಗಮನದಲ್ಲಿಟ್ಟುಕೊಂಡು ಅವರಿಗೆ ಸರಿಯಾದ ಶಿಕ್ಷಣ ದೊರೆಯುವಂತೆ ಮಾಡಬೇಕು. ಇವುಗಳು ವಿದ್ಯಾರ್ಥಿ ನಿಲಯಗಳೇ ಆಗಿರದೆ ಪಾಶ್ಚಾತ್ಯರ ಬೋರ್ಡಿಂಗ್ ಸ್ಕೂಲುಗಳಂತಿರಬೇಕು. ಪ್ರತಿ ವಿದ್ಯಾರ್ಥಿಗೂ ಯಾವುದಾದರೂ ವೃತ್ತಿಯೊಂದರಲ್ಲಿ ಒಳ್ಳೆಯ ಜ್ಞಾನ ದೊರೆಯಬೇಕು. ನಿಲಯದಿಂದ ಹೊರಬಿದ್ದ ವಿದ್ಯಾರ್ಥಿ, ಕೊರಗಡೆ ದಂಡದ ಹೊರೆಯಾಗದೆ, ಉತ್ತಮ ಪೌರನಾಗಿ, ತನ್ನ ನೆರೆಹೊರೆಯವರ ಹಿತದಲ್ಲಿ ಆಸಕ್ತನಾಗಿ, ತನ್ನ ಜೀವನೋಪಾಯವನ್ನು ತಾನೇ ಕಲ್ಪಿಸಿ ಕೊಳ್ಳುವಂತಾಗಬೇಕು. ಸಂಸ್ಥೆಗಳು ಈ ರೀತಿಯ ಗುರಿಯನ್ನಿಟ್ಟುಕೊಂಡು ಹುಟ್ಟಬೇಕು, ಬೆಳೆಯಬೇಕು, ಎನ್ನುವುದು ತಂದೆಯ ಅಭಿಪ್ರಾಯವಾಗಿತ್ತು. ಮನಸ್ಸಿನಲ್ಲಿದ್ದ ಈ ಅಭಿಪ್ರಾಯವನ್ನು ಕಾರ್ಯರೂಪಕ್ಕೆ ತರಲು ಏನಾದರೂ ಕಾರ್ಯಕ್ರಮ ತೆಗೆದುಕೊಂಡಿದ್ದರೋ ಇಲ್ಲವೊ ನಾನು ತಿಳಿಯೆ. ಮರಿಯಪ್ಪನವರ ವಿದ್ಯಾರ್ಥಿ ನಿಲಯದ ವಿದ್ಯಾರ್ಥಿಗಳನ್ನು ಉದ್ದೇಶಿಸಿ ಮಾತನಾಡುವ ಸಂದರ್ಭದಲ್ಲಿ ತಮ್ಮ ಮನಸ್ಸಿನಲ್ಲಿದ್ದ ಭಾವನೆಗಳಿಗೆ ರೂಪು ಕೊಟ್ಟಿದ್ದರು. ಹೊಸಹೊಸ ಹೈಸ್ಕೂಲುಗಳನ್ನು ತೆಗೆಯುವುದರ ಬದಲು ಈ ರೀತಿಯ ಬೋರ್ಡಿಂಗ್ ಸ್ಕೂಲುಗಳನ್ನು ತೆರೆದರೆ ದೇಶಕ್ಕೆ ಎಷ್ಟೋ ಹಿತ ಎಂದು ತಂದೆ ಬಗೆದಿದ್ದರು.

## ವಿಶ್ವವಿದ್ಯಾನಿಲಯದ ಸಭೆಗಳಲ್ಲಿ

ನಾನು ವಿವರಿಸುತ್ತಿರುವ ಈ ಕಾಲದ ಸುಮಾರಿಗೆ ತಂದೆ ಬಹು ತರದ ಕಾರ್ಯಗಳಲ್ಲಿ ತೊಡಗಿ ನಿಮಿಷದ ಬಿಡುವನ್ನೂ ಕಾಣದವರಂತೆ ಎಲ್ಲಿಂದರಲ್ಲಿ ಓಡಾಡುತ್ತಿದ್ದರು. ದಿನದ ತುಂಬ ಒಂದಲ್ಲ ಒಂದು ಕಾರ್ಯಕ್ರಮ ಇದ್ದೇ ಇರುತ್ತಿತ್ತು. ಈ ನಾಲ್ಕು ವರ್ಷಗಳು ದಿನಚರಿಯ ಪುಸ್ತಕವೆಲ್ಲ ಅವರ ಕಾರ್ಯಕ್ರಮಗಳಿಂದ ತುಂಬಿಹೋಗಿದೆ. ನಾನು ಇದುವರೆಗೆ ವಿವರಿಸಿದ ಸಂಸ್ಥೆಗಳಲ್ಲಿನ ಕಾರ್ಯವೇ ಅಲ್ಲದೆ ಹೊಸತಾಗಿ ಜೈಲು ಸುಧಾರಣಾ ಸಮಿತಿ, ಇಂಗ್ಲೀಷು ಕನ್ನಡ ಕೋಶ ಸಮಿತಿ, ಭಿಕ್ಷುಕ ಪರಿಹಾರ ಸಮಿತಿ, ಪಠ್ಯಪುಸ್ತಕಗಳ ಸಮಿತಿ, National War-front, ಈ ರೀತಿ ಬಹು ತರದ ಸಮಿತಿಗಳ ಸದಸ್ಯರಾಗಿ ಕೆಲಸ ಮಾಡಬೇಕಾಗಿತ್ತು. ಜೈಲುಸುಧಾರಣಾ ಸಮಿತಿ ಮತ್ತು ಭಿಕ್ಷುಕರ ಪರಿಹಾರ ಸಮಿತಿಯ ಸದಸ್ಯರಾದುದರ ಫಲವಾಗಿ ದೂರ ದೂರದ ಊರುಗಳನ್ನು ಸುತ್ತಿ ಅಲ್ಲಿನ ಸ್ಥಿತಿಗತಿಗಳನ್ನು ತಿಳಿದುಕೊಂಡು ಅನುಭವವನ್ನು ವಿಶಾಲವಾಗಿಸಿಕೊಳ್ಳುವ ಅವಕಾಶ ಒದಗಿತು, ಅಲ್ಲದೆ ಈ ಸಂದರ್ಭದಲ್ಲಿ ಸಮಸ್ಯೆಗಳ ಸರಿಯಾದ ಪರಿಚಯ ಮಾಡಿಕೊಳ್ಳಲು ಹಲವಾರು ಪುಸ್ತಕಗಳನ್ನು ಓದಬೇಕಾಯಿತು. ವಿಷಯ ಸಂಗ್ರಹಿಸಿ ವರದಿಗಳನ್ನು ತಯಾರಿಸಬೇಕಾಯಿತು. ಇಂಗ್ಲೀಷು ಕನ್ನಡ ಕೋಶ ನಿರ್ಮಾಣದಲ್ಲಿಯೂ ತರತರದ ಕೋಶಗಳನ್ನು ಎದುರಿಗಿಟ್ಟುಕೊಂಡು, ರಾತ್ರಿಯ ಹೊತ್ತು ಬಹು ಕಾಲದವರೆಗೆ ಕುಳಿತು ಕರಡುಪ್ರತಿಗಳ ಮೇಲೆ ಸಲಹೆಗಳನ್ನು ಸೂಚಿಸಬೇಕಾಗಿತ್ತು.

ಈ ಕೆಲಸಗಳು ಸಾಲದೆಂಬಂತೆ ಅವರು ಮೈಸೂರು ವಿಶ್ವವಿದ್ಯಾನಿಲಯದ ಸೆನೆಟ್‌ಸಭೆಗೂ, ಕೆಲ ಕಾಲವಾದಮೇಲೆ University Council ಸಭೆಗೂ ಚುನಾಯಿತರಾದರು. ಅವರ ಕೆಲಸ ಮತ್ತೂ ಹೆಚ್ಚಿತು. ತಂದೆಯ ಸ್ವಭಾವವೇ ಒಂದು ಬಗೆಯದು. ಕೆಲಸ ಹೆಚ್ಚಿದಂತೆಲ್ಲಾ ಅವರ ಮನಸ್ಸು ಹಗುರವಾಗುತ್ತಿತ್ತು. ಗೆಲುವಿನಿಂದ ಕೂಡಿರುತ್ತಿತ್ತು. ಕೆಲಸವಿಲ್ಲದೆ ಒಬ್ಬರೇ ಕುಳಿತರೆಂದರೆ ಇಲ್ಲದ ಯೋಚನೆಗಳು ಅವರನ್ನು ಮುತ್ತಿ ಅವರ ಮನಸ್ಸಿನ

ನೆಮ್ಮದಿಯನ್ನು ಹಾಳುಮಾಡುತ್ತಿದ್ದುವು. ಅಂಥ ಸಂದರ್ಭಗಳಲ್ಲಿ ತೀರ ವಯಸ್ಸಾದವರಂತೆ, ಏನೂ ತೋರದವರಂತೆ, ಖಿನ್ನರಾಗಿ ಕುಳಿತುಬಿಡುತ್ತಿದ್ದರು. ಕೆಲಸ ಹೆಚ್ಚಿದಂತೆ ಲವಲವಿಕೆ ಹೆಚ್ಚುತ್ತಿತ್ತು. ಕೊನೆಯ ನಾಲ್ಕು ವರ್ಷಗಳನ್ನು ಅವರು ಗೆಲುಮನಸ್ಸಿನಿಂದಲೇ ಕಳೆದರು. ಹೆಚ್ಚು ಕೆಲಸದಿಂದ, ಹೆಚ್ಚಿಗೆ ಓಡಾಟದಿಂದ ಒಮ್ಮೊಮ್ಮೆ ರಕ್ತದ ಒತ್ತಡ ಹೆಚ್ಚಿ, ತಲೆ ಸುತ್ತಿ ಬಿದ್ದುದುಂಟು. ಇಂಥ ಕಾಲದಲ್ಲಿ ಎರಡು ಮೂರು ದಿನ ಪೂರ್ತಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದರು. ಈ ವಿಶ್ರಾಂತಿಯಿಂದ ದೇಹದ ಆಯಾಸ ಸ್ವಲ್ಪಮಟ್ಟಿಗೆ ಕಮ್ಮಿಯಾಗುತ್ತಿದ್ದಿರಬಹುದು. ಮನಸ್ಸಿಗೆ ಮಾತ್ರ ನೆಮ್ಮದಿ ದೊರೆಯುತ್ತಿರಲಿಲ್ಲವೆಂದೇ ನನ್ನೆಣಿಕೆ. ಮಾಡಲು ಏನೂ ಕೆಲಸವಿಲ್ಲದೆ ಮನೆಯಲ್ಲಿ ಒಂದು ಗಳಿಗೆ ಕುಳಿತರೆ ಸಾವಿರ ಯೋಚನೆ ಅವರನ್ನು ಮುತ್ತುತ್ತಿದ್ದುವು. ಅವ್ಯಕ್ತವಾದ ಭಯದಿಂದ ತಳಮಳಗೊಳ್ಳುತ್ತಿದ್ದರು. ಬೇಕೆಂದೇ ಅವರು ವಿಶ್ರಾಂತಿಯನ್ನು ಬಯಸುತ್ತಿರಲಿಲ್ಲ.

ವಿದ್ಯಾಭ್ಯಾಸಕ್ಕೆ ಸಂಬಂಧಿಸಿದ ವಿಷಯಗಳೆಂದರೆ ತಂದೆಗೆ ಮೊದಲಿನಿಂದಲೂ ಅಭಿಮಾನ. ಅದುವರೆಗಾಗಲೇ ಆ ವಿಷಯವಾಗಿ ಉತ್ತಮವಾದ ಉಪನ್ಯಾಸಗಳನ್ನು ಅವರು ಕೊಟ್ಟಿದ್ದರು. ಉನ್ನತವಾದ ಆದರ್ಶಗಳು ಅವರ ಮನಸ್ಸಿನ ತುಂಬ ಮನೆಮಾಡಿದ್ದುವು. ಅದರಿಂದಲೇ ವಿಶ್ವವಿದ್ಯಾನಿಲಯದೊಡನೆ ದೊರೆತ ಸಂಪರ್ಕದಿಂದ, ತಮ್ಮ ಇಳಿವಯಸ್ಸಿನಲ್ಲಿ ಅದು ದೊರೆತರೂ ಕೂಡ, ಅದರಿಂದ ಬಹಳವಾಗಿ ಸಂತೋಷಪಟ್ಟರು, ಉತ್ಸಾಹಗೊಂಡರು. ಆದರೆ ಅವರ ಸಂತೋಷ ಉತ್ಸಾಹಗಳು ಬಹು ದಿನ ಉಳಿಯಲಿಲ್ಲ. ತಮ್ಮ ಮನಸ್ಸಿನಲ್ಲಿ ಮನೆಮಾಡಿಕೊಂಡಿದ್ದ ಎಷ್ಟೋ ಯೋಚನೆಗಳನ್ನು ಕಾರ್ಯರೂಪಕ್ಕೆ ಇಳಿಸಲು ಪಟ್ಟ ಪ್ರಯತ್ನಗಳಿಗೆ ಸ್ವಲ್ಪವೂ ಮನ್ನಣೆ ದೊರೆಯದೆ ಹೋಯಿತು. ಸಭೆಯ ಚರ್ಚೆಗಳಲ್ಲೆಲ್ಲ ಪೀರಿಯಡ್ಡುಗಳು, ಪಾಠಗಳು, ಸಂಬಳ ಸಾರಿಗೆಗಳು, ವರ್ಗಾವರ್ಗಿಗಳು, ಜಾತಿಮತದ ಮೇಲೆ ವಾದ ವಿತಂಡಗಳು ಇವುಗಳೇ ಮೇಲುಕೈಯಾಗಿ, ಇದ್ದ ಕಾಲಾವಕಾಶವೆಲ್ಲ ಇಂಥ ಚರ್ಚೆಗಳಿಗೇ ಮೀಸಲಾಗುತ್ತಿದ್ದುವು. ನೂತನ ಏರ್ಪಾಡುಗಳಿಗಾಗಿ ತಂದೆ ಸೂಚಿಸಿದ ವಿಷಯಗಳು ಎಷ್ಟೋ ವೇಳೆ ಚರ್ಚಿತವಾಗದೆ

ಹೋಗಿ, ಚರ್ಚಿತವಾದರೂ ಗಳಿಗೆಯೊಂದರಲ್ಲಿ ಮುಗಿದುಹೋಗಿ ಅವರನ್ನು ಖಿನ್ನಗೊಳಿಸುತ್ತಿತ್ತು. ಒಂದು ಸಂದರ್ಭದಲ್ಲಿ ನನ್ನೊಡನೆ ಮಾತನಾಡುತ್ತ "ವಿಶ್ವವಿದ್ಯಾನಿಲಯದ ಸಭೆಯೆಂದರೆ ಬಹು ದೊಡ್ಡ ಅಭಿಪ್ರಾಯ ಇಟ್ಟು ಕೊಂಡಿದ್ದೆ. ಸದಸ್ಯನಾದಮೇಲೆ ಏನೇನೊ ಕೆಲಸಗಳನ್ನು ಸಾಧಿಸುವ ಅವಕಾಶ ಇರುತ್ತದೆ ಎಂದಿದ್ದೆ. ಆದರೆ ಇಲ್ಲಿ ಏನೂ ಒಳ್ಳೆಯ ಕೆಲಸವನ್ನು ಮಾಡಲಾಗುವುದಿಲ್ಲ. ನನ್ನ ಆಶೆಯಲ್ಲ ನಿರಾಶೆಯಾಯಿತು" ಎಂದು ಹೇಳಿದರು.

ವಿಶ್ವವಿದ್ಯಾನಿಲಯ ಸಭೆಯ ಸದಸ್ಯರಾದುದರಿಂದ ಅಂಥದೇನೂ ಒಳ್ಳೆಯ ಕೆಲಸ ಮಾಡುವುದಾಗಲಿಲ್ಲ. ವ್ಯವಸಾಯದಲ್ಲಿ ಉಚ್ಚ ಶಿಕ್ಷಣ ದೊರೆಯಬೇಕು, ಇದು ಖಂಡಿತವಾಗಿ ಆಗಿಯೇ ತೀರಬೇಕು, ಎಂದು ಪಣ ತೊಟ್ಟವರಂತೆ ಅದಕ್ಕಾಗಿ ಹೊಡೆದಾಡಿದರು. ಮೊದಲಿಂದಲೂ ಸಾಮಾಜಿಕ ಏಳಿಗೆಗಾಗಿ ಹುಟ್ಟಿಕೊಂಡ ಸಂಸ್ಥೆಗಳಲ್ಲಿ ದುಡಿದವರಾದ ಕಾರಣ, ಅಲ್ಲಿನ ಕೆಲಸಗಳು ವ್ಯವಸ್ಥಿತ ರೀತಿಯಲ್ಲಿ ನಡೆಯಬೇಕೆನ್ನುವುದನ್ನು ಮನಗಂಡಿದ್ದ ರಾದ ಕಾರಣ, ವಿಶ್ವವಿದ್ಯಾನಿಲಯದ ಶಾಲಾ ಕಾಲೇಜುಗಳಲ್ಲಿ ಸಮಾಜಸೇವೆ ಯಲ್ಲಿ ಶಿಕ್ಷಣ ದೊರೆಯಬೇಕು, ಅದನ್ನೆ ಐಚ್ಛಿಕ ವಿಷಯವಾಗಿಡಬೇಕು, ಅದರಲ್ಲಿ ಪಾಠ ಪ್ರವಚನ ನಡೆಯಬೇಕು, ನುರಿತವರಿಗೆ ವಿಶ್ವವಿದ್ಯಾನಿಲಯ ದಿಂದ ಪ್ರಶಸ್ತಿ ದೊರೆಯಬೇಕು, ಎನ್ನುವುದು ಅವರ ಮನಸ್ಸಿನಲ್ಲಿ ಮೂಡಿದ್ದ ಯೋಜನೆಗಳಲ್ಲೊಂದು. ವೃತ್ತಪತ್ರಿಕೆಗಳನ್ನು ನಡೆಸುವ ಕಲೆಗೂ ವಿಶ್ವ ವಿದ್ಯಾನಿಲಯದಲ್ಲಿ ಸ್ಥಳ ದೊರೆಯಬೇಕು ಎನ್ನುವುದು ಅವರ ಇನ್ನೊಂದಾಸೆ. ಈ ಯೋಜನೆಗಳಲ್ಲಿ ಯಾವುದಕ್ಕೂ ತಂದೆ ಬಯಸಿದಷ್ಟು ಪುರಸ್ಕಾರ ದೊರೆ ಯಲಿಲ್ಲ. ಹೊಸತಾಗಿ ಏನುಮಾಡಲೂ ಸಾಧ್ಯವಾಗಲಿಲ್ಲ. ವ್ಯವಸಾಯ ಕಾಲೇಜನ್ನು ತೆರೆಯುವ ವಿಷಯಯವಾಗಿ ಮಾತು ಕತೆ ಮುಂದುವರಿ ಯಿತು. ಸಮಿತಿಯೂ ನೇಮಕವಾಯಿತು. ಆದರೆ ಅವರ ಜೀವಿತ ಕಾಲ ದಲ್ಲಿ, ಕಾಲೇಜು ಸ್ಥಾಪಿತವಾಗುವುದನ್ನು ಅವರು ನೋಡಲಾಗಲಿಲ್ಲ.

ಈ ರೀತಿ ತಮ್ಮ ಮನಸ್ಸಿನಲ್ಲಿ ಎಡೆ ಮಾಡಿಕೊಂಡಿದ್ದ ಯೋಜನೆ ಗಳಿಗೆ ಪುರಸ್ಕಾರ ದೊರೆಯದೆ ಹೋಗಿ ಉತ್ಸಾಹ ಹಿಂಗಿ, ಕೊನೆಕೊನೆಗೆ

ಏನೊಂದು ಹೊಸ ವಿಷಯವನ್ನು ಮಂಡಿಸಲೂ ಹಿಂದೆಗೆಯುವಂತಾಯಿತು. ವಿಶ್ವವಿದ್ಯಾನಿಲಯದಲ್ಲಿ ಅವರು ಅಂಥ ಒಳ್ಳೆಯ ಕೆಲಸವೇನನ್ನೂ ಸಾಧಿಸದೆ ಹೋದರೂ, ಅಲ್ಲಿನ ಕಾರ್ಯ ಕಲಾಪಗಳ ದೆಸೆಯಿಂದ ಅವರ ಮಿತ್ರವರ್ಗ ವಿಶಾಲವಾಗಲು ಸಹಾಯವಾಯಿತು. ಈ ಸುಮಾರಿಗೆ ತಂದೆಯನ್ನು ಕಾಣಲು ಬಹುಜನ ಬಂದು ಹೋಗುತ್ತಿದ್ದರು. ಕಾಲೇಜುಗಳ ಅಧ್ಯಾಪಕ ವರ್ಗದವರು ಆಡಳಿತ ವರ್ಗದವರು ಅನೇಕರು ಪರಿಚಿತರಾದರು. ಕೆಲವರಂತೂ ಅತಿ ಬಳಕೆಯ ಮಿತ್ರರಾದರು.

ಈ ಕಾಲದಲ್ಲಿ ವಿಶ್ವವಿದ್ಯಾನಿಲಯದಲ್ಲಿ ಕೋಮುವಾರು ಭೂತ ತಲೆ ಹಾಕಿತ್ತು. ಮೇಧಾಶಕ್ತಿ ಒಂದಕ್ಕೇ ಪುರಸ್ಕಾರ ದೊರೆಯುತ್ತಿರಲಿಲ್ಲ. ಅಧ್ಯಾಪಕ ವರ್ಗದಲ್ಲಿ ಹಿಂದುಳಿದ ಮತದವರನ್ನು ಮೇಲೇರಿಸುವ ಕಾರ್ಯ ಮೊದಲಾಗಿತ್ತು. ಕಾಲೇಜುಗಳಿಗೆ ಪ್ರವೇಶ ದೊರಕಿಸುವುದರಲ್ಲೂ ಮತಮಾತದ ಲೆಕ್ಕಾಚಾರ ನಡೆಯುತ್ತಿತ್ತು. ಇಂಥ ಕಾರ್ಯಕ್ರಮಗಳಿಗೆ ತಂದೆಯು ಸಹಾನುಭೂತಿಯಿತ್ತು ಎಂದು ಹಿಂದೆಯೇ ತಿಳಿಸಿದ್ದೇನೆ. ಈ ರೀತಿಯ ಪ್ರೋತ್ಸಾಹ ಕೊಡುವುದು ಅಗತ್ಯ ಎಂದು ಅವರು ಭಾವಿಸಿದ್ದರು. ತಂದೆಯು ಈ ಬಗೆಯ ಭಾವನೆಯಿಂದ ಮೇಧಾವಂತರಾದ ಯಾರಿಗಾದರೂ ಅನ್ಯಾಯವಾಯಿತೋ ಏನೋ ನನಗೆ ತಿಳಿಯದು. ಹಿಂದುಳಿದ ಮತದವರಿಗೆ ಹೆಚ್ಚಿನ ಅವಕಾಶವನ್ನು ಕಲ್ಪಿಸಿಕೊಡಬೇಕೆಂಬ ಭಾವನೆ ಅವರಲ್ಲಿ ಮೇಲುಕೈಯಾಗಿದ್ದುದು ನಿಜ. ನಿಜವಾದ ಪ್ರತಿಭಾವಂತರನ್ನು ಹಿಂದೆ ತಳ್ಳಿ ಅಂಥವರ ಏಳಿಗೆಗೆ ವಿರುದ್ಧವಾಗಿ, ಮತವನ್ನೆ ಮುಂದಿಟ್ಟುಕೊಂಡು ಅವರು ಹೊಡೆದಾಡಲಿಲ್ಲ ಎಂದು ಮಾತ್ರ ಧೈರ್ಯದಿಂದ ಹೇಳಬಲ್ಲೆ.

ತಮ್ಮ ಕೊನೆಯ ದಿನಗಳಲ್ಲಿ ವಿಶ್ವವಿದ್ಯಾನಿಲಯದ ಮೂಲಕ ಶಾಸನ ಸಭೆಗೆ ಚುನಾಯಿತರಾಗಿ ನಿಲ್ಲ ಬಯಸಿದರು. ಅದಕ್ಕಾಗಿ ಉಮೇದುವಾರಿಕೆಯ ಪತ್ರಕೂಡ ಸಲ್ಲಿಸಿದ್ದರು. ತಮ್ಮ ಮಿತ್ರರಲ್ಲಿ ಮತ ದೊರಕಿಸಿಕೊಳ್ಳುವ ವಿಷಯವಾಗಿ ಕೇಳಿಕೊಂಡೂ ಇದ್ದರು. ಮನಸ್ಸಿನಲ್ಲಿ ಏನೇನು ಬಗೆಯ ಆಶೆ ಬಯಕೆಗಳು ತುಂಬಿದ್ದುವೋ ಅತಿ ಹುಮ್ಮಸ್ಸಿನಿಂದ ಓಡಾಡುತ್ತಿದ್ದರು. ಹುಮ್ಮಸ್ಸಿನಿಂದಲೇ ದೂರದ ರಬಕವಿಗೆ ಹೋದರು. ಆದರೆ ತಾನೊಂದು ಬಗೆದರೆ

ದೈವವೊಂದು ಒಗೆಯಿತ್ತು ಕಾಣದ ದೈವದ ಆಟವನ್ನು ಕಂಡವರಾರು. ತಂದೆ ರಬಕವಿಗೆ ಹೋದವರು ಮರಳಲಿಲ್ಲ. ಅವರೆಲ್ಲ ಕಾರ್ಯಕ್ರಮಕ್ಕೂ ಅದೇ ಕೊನೆಯಾಯಿತು. ಆ ಕೊನೆಯ ದಿನಗಳ ಕತೆಯನ್ನು ಮುಂದಿನ ಅಧ್ಯಾಯದಲ್ಲಿ ಬೆಳೆಸಿದ್ದೇನೆ.

## ಕೊನೆಯ ದಿನಗಳು

ಅದೇ ವರ್ಷ, ಎಂದರೆ ೧೯೪೪ರ ಡಿಸೆಂಬರ್ ತಿಂಗಳ ಕೊನೆಯಲ್ಲಿ ಸಾಹಿತ್ಯ ಪರಿಷತ್ತಿನ ವಾರ್ಷಿಕಾಧಿವೇಶನ ರಬಕವಿಯಲ್ಲಿ ನಡೆಯುವುದೆಂದು ಗೊತ್ತಾಗಿತ್ತು. ಪರಿಷತ್ತಿನ ಕಾರ್ಯಕ್ರಮಗಳಲ್ಲಿ ತಂದೆ ಮೇಲಿಂದಮೇಲೆ ವಿಶೇಷ ಆಸಕ್ತಿ ವಹಿಸಿ ಭಾಗವಹಿಸುತ್ತಲೇನೊ ಇದ್ದರು. ಮೈಸೂರು ಪ್ರಾಂತಸಮಿತಿಯ ಸದಸ್ಯರಾಗಿದ್ದರು. ಅಚ್ಚುಕೂಟದ ಗೌರವ ಮೇಲ್ವಿಚಾರಕ ರಾಗಿದ್ದರು. ಪರಿಷತ್ತಿನಲ್ಲಿ ನಡೆಯುತಿದ್ದ ಪ್ರತಿ ಸಭೆಗೂ ಹೋಗಿಬರುತ ಲಿದ್ದರು. ಆದರೆ ಅವರೆಂದೂ ಬೆಂಗಳೂರಿನಿಂದ ದೂರವಾಗಿ ನಡೆಯುತಿದ್ದ ವಾರ್ಷಿಕಾಧಿವೇಶನಗಳಿಗೆ ಹೋಗಿ ಬಂದವರಲ್ಲ. ಅದರಲ್ಲೂ ರಬಕವಿ ತೀರ ದೂರದ ಊರಾಯಿತು. ಅಂಥ ರಬಕವಿಗೆ ತಂದೆ ಹೋದುದು ನಮಗೆಲ್ಲ ತೀರ ಆಶ್ಚರ್ಯ. ರಬಕವಿಗೆ ತಂದೆ ಹೋಗಲು ಪರಿಷತ್ತಿನ ಮೇಲಿನ ಅಭಿ ಮಾನ ಒಂದೇ ಕಾರಣವಲ್ಲ ಎನ್ನುವ ಅನುಮಾನ ನನ್ನ ಮನಸಿನಲ್ಲಿ ತೋರಿದೆ. ಎಂದೂ ಹೋಗದಿದ್ದ ತಂದೆ ತಮ್ಮ ಇಳಿವಯಸಿನಲ್ಲಿ ದೂರದ ರಬಕವಿಗೆ ಹೋಗಲು ಮನಸುಮಾಡಿದರೆಂದರೆ ಅದು ಅತಿಶಯದ ಸಂಗತಿಯೇ ಸರಿ. ನಮ್ಮ ಮನೆಯಲ್ಲಿ ಹೇಳುವ ಪ್ರಕಾರ ರಬಕವಿಗೆ ತಂದೆ ಹೋಗಲು ಅವರ ಮಿತ್ರರು ಕೆಲವರ ಪ್ರೇರಣೆಯೇ ಕಾರಣವೆಂದು ತೋರುತ್ತದೆ. ಪರಿಷತ್ತಿನಲ್ಲಿ ಗೌರವಸ್ಥಾನ ಒಂದಕ್ಕೆ ತಂದೆಯನ್ನು ಚುನಾಯಿಸಬೇ ಕೆಂಬುದೇ ಈ ಮಿತ್ರರು ಕೆಲವರ ಆಲೋಚನೆಯಿತ್ತೆಂದು ತೋರುತ್ತದೆ. ಅಧಿವೇಶನ ನಡೆಯಲು ಕೆಲವು ದಿನ ಇನ್ನೂ ಮಿಕ್ಕಿರುವಾಗ ಈ ಮಿತ್ರರು ಬಂದು ತಂದೆಯನ್ನು ತಮ್ಮೊಂದಿಗೆ ಬರಲು ಬಲವಂತ ಮಾಡಿದರಂತೆ. ನನಗೆ ತಿಳಿದ ಮಟ್ಟಿಗೆ ತಂದೆ ತಾವಾಗಿ ಯಾವ ಗೌರವಸ್ಥಾನವನ್ನೂ ಬಯಸಿ ಅದಕ್ಕಾಗಿ ಆಸೆಪಟ್ಟು ಹೆಣಗಿದವರಲ್ಲ. ಹಿಂದಿದ್ದುಕೊಂಡು ಕೆಲಸ ಮಾಡುವುದೇ ಅವರಿಗೆ ಹಿತವಾಗಿತ್ತು. ಇಂಥವರು ಕೊನೆಯ ಗಳಿಗೆಯಲ್ಲಿ ತಮ್ಮ ಅಂತರ್ಯಕ್ಕೆ ವಿರುದ್ಧವಾಗಿ ನಡೆದುಕೊಂಡರೇಕೊ ನನಗೆ ತಿಳಿಯ ದಾಗಿದೆ. ಅಂತೂ ಮಿತ್ರರ ಪ್ರೇರಣೆಯಿಂದ ಮನಸಿನಲ್ಲಿ ಗೂಢವಾದ

ಆಸೆಯನ್ನಿಟ್ಟುಕೊಂಡು ರಜಕವಿಗೆ ಹೋದರು. ಸಾಹಿತಿಯಾದವನಿಗೆ ನ್ಯಾಯವಾಗಿ ಸಲ್ಲಬೇಕಾದ ಒಂದು ಗೌರವಕ್ಕಾಗಿ ಆಸೆಪಟ್ಟು ಅವರು ಅಷ್ಟು ದೂರ ಹೋದುದು ನನಗಂತೂ ತಪ್ಪಾಗಿಯೇ ತೋರುತ್ತಿದೆ. ಆ ಆಸೆಯ ಬೆನ್ನ ಹಿಂದೆಯೇ ನಿರಾಸೆ ಕಾದಿತ್ತು. ಬಯಸಿದ ಪದವಿ ದೊರೆಯದೆ ಹೋಯಿತು. ಮನಸು ಖಿನ್ನವಾಯಿತು. ಮನಸಿನ ಬೇಗುದಿ ಹೆಚ್ಚಿತು. ಊಟ ಉಪಚಾರಗಳಲ್ಲಿ ಕೊರತೆ ಬೇರೆ ಇದ್ದಂತೆ ತೋರುತ್ತದೆ. ಅವರಲ್ಲಿ ಮೊದಲಿನಿಂದಲೂ ಮನೆಮಾಡಿಕೊಂಡಿದ್ದ ಹೊಟ್ಟೆನೋವು ಇದರಿಂದ ಪ್ರಬಲ ವಾಗಿರಬೇಕು. ಹೀಗೆ ವ್ಯಸನಗಳೆರಡಕ್ಕೂ ಪೆಟ್ಟು ತಗಲಿದಂತೆ ತೋರು ತ್ತದೆ. ಮಿಕ್ಕ ಸದಸ್ಯರೆಲ್ಲರೂ ತಮ್ಮ ತಮ್ಮ ಊರುಗಳಿಗೆ ಹೋಗುವ ಸಡಗರದಲ್ಲಿ ಸಾಮಾನುಗಳನ್ನು ಕಟ್ಟುತಿದ್ದಾಗ ತಂದೆ ತಮ್ಮ ಈ ಲೋಕದ ಯಾತ್ರೆಯನ್ನು ಅಲ್ಲಿಗೇ ಮುಗಿಸಿ ಏನೊಂದು ಸದ್ದೂ ಇಲ್ಲದೆ ಹೊರಟು ಬಿಟ್ಟಿದ್ದರು.

ನೊಂದ ತಂದೆಯ ಮನಸಿಗೆ, ಕೊನೆಗಾಲದಲ್ಲಿ, ತಾನು ಕಷ್ಟಪಟ್ಟು ಕಟ್ಟಿದ ಮನೆ, ಸುಖದಲ್ಲಿ ದುಃಖದಲ್ಲಿ ಸಮಭಾಗಿನಿಯಾದ ತನ್ನ ಜೀವನದ ಸಹೋದ್ಯೋಗಿ, ತಾನು ಸಾಕಿ ಸಲಹಿ ದೊಡ್ಡವರನ್ನಾಗಿ ಮಾಡಿದ ಮಕ್ಕಳು, ತನ್ನ ಕಣ್ಣ ಬೆಳಕಾಗಿ ಮುಂದೆ ನಲಿಯುತಿದ್ದ ಮೊಮ್ಮಕ್ಕಳು, ಇವರುಗಳನ್ನು ನೋಡಿದ್ದರೆ ಸ್ವಲ್ಪಮಟ್ಟಿನ ನೆಮ್ಮದಿ ದೊರೆಯುತ್ತಿತ್ತೊ ಏನೊ. ಆ ನೆಮ್ಮದಿ ಅವರಿಗೆ ದೊರೆಯಲಿಲ್ಲ. ಅದನ್ನು ದೊರಕಿಸುವ ಪುಣ್ಯ ಕೂಡ ಅವರ ಮಕ್ಕಳದಾಗಲಿಲ್ಲ.

ತಂದೆ ಯಾರಿಗೆ ಏನೊಂದು ಕಷ್ಟವನ್ನೂ ಕೊಡದೆ ತಮ್ಮ ಇಹ ಲೋಕದ ಯಾತ್ರೆಯನ್ನು ಮುಗಿಸಿದರಾದರೂ, ಮೃತದೇಹವನ್ನು ಬಂಧು ವರ್ಗದವರಾದ ನಮಗೆ ಮುಟ್ಟಿಸಲು ಅವರ ಮಿತ್ರರು ವಿಶೇಷ ಶ್ರಮಪಡ ಬೇಕಾಯಿತು. ಬೇಗನೆ ತರಲು ಮೋಟರೊಂದರಲ್ಲಿ ತರುವ ಏರ್ಪಾಟು ಮಾಡಿದರೂ ಅರ್ಧ ದಾರಿಯಲ್ಲಿ ಆ ಮೋಟಾರು ಕೆಟ್ಟು, ಅದರ ಫಲವಾಗಿ ರೈಲಿನಲ್ಲಿ ಪೆಟ್ಟಿಗೆಯೊಂದರಲ್ಲಿಟ್ಟು ತರಬೇಕಾಯಿತು. ಪ್ರಾಣ ಹೋದ ಚಳಿ

ಗಂಟೆಗಳನಂತರ ತಂದೆಯು ಜೀವಹೋದ ದೇಹ ನಮ್ಮ ಮನೆಯ ಆವರಣವನ್ನು ಬಂದು ಸೇರಿತು.

ಬರಸಿಡಿಲಿನಂತೆ ಬಂದೆರಗಿದ ತಂದೆಯ ಮರಣದ ಸುದ್ದಿಯಿಂದ ಮನೆ ಮಕ್ಕಳಾದ ನಾವು ಯಾವ ರೀತಿ ತಲ್ಲಣಿಸಿಹೋದೆವೆಂದು ಹೇಗೆ ಹೇಳಲಿ. ಮಕ್ಕಳಾದ ನಾವು ಯಾರೂ ಆಗ ಮನೆಯಲ್ಲಿರಲಿಲ್ಲ. ನಾನು ದೂರದ ಊರಾದ ಬೆಳ್ಳಾರದಲ್ಲಿದ್ದೆ. ಅದೇ ಕೆಲವು ದಿನಗಳ ಹಿಂದೆ ಕೆಲವು ಕವಿಮಿತ್ರರು ಬೆಳ್ಳಾರದಲ್ಲಿ ಬಂದು ಸೇರಿದ್ದರು. ಬೋರನ ಕಣಿವೆಯ ಕಟ್ಟೆಯ ಮೇಲೆ ಕುಳಿತು, ಬೆಳುದಿಂಗಳ ಬೆಳಕಿನಲ್ಲಿ ಕವಿಯೊಬ್ಬರು ತಮ್ಮ ಮೋಹಕ ಗೀತಗಳನ್ನು ಹಾಡಿ ತೋರಿದ್ದರು. ಇನರುಗಳಿಂದಾಗಿ ನನ್ನ ಮನಸು ಉಲ್ಲಾಸವಾಗಿ ಹರಿಯುತಿತ್ತು. ವರ್ಷದ ಕೊನೆಯ ದಿನ ನನ್ನ ಪ್ರಿಯ ಮಿತ್ರರು ಹಲವರು ಬಂದು ಕೂಡಿಕೊಳ್ಳಬೇಕಾಗಿತ್ತು. ಕತ್ತಲಲ್ಲಿ ಹೊರಗಡೆ ಮೋಟರಿನ ಕಹಳೆಯ ಧ್ವನಿಯನ್ನು ಕೇಳಿ ಅವರೇ ಬಂದರೇನೊ ಎಂದು ಹೊರಗೆ ಧಾವಿಸಿ ಬಂದೆ. ಆದರೆ ಬಂದವರು ನನ್ನ ಮಿತ್ರರಲ್ಲ ನನ್ನ ತಂದೆಯ ಮರಣದ ಕಠೋರ ವಾರ್ತೆಯನ್ನು ತಂದ ಅಣ್ಣ ಕಳುಹಿಸಿದ ಮೋಟಾರು. ಹೊರಗೆ ಒಂದು ಗಳಿಗೆಯ ಹಿಂದೆ ಕಾಡನ್ನು ತಬ್ಬಿ ಬೆಳುದಿಂಗಳು ಅದೇನು ರಮ್ಯವಾಗಿ ಹರಡಿತ್ತು. ಈಗ ನನ್ನ ಕಣ್ಣಮುಂದೆ ಒಮ್ಮೆಗೇ ಕತ್ತಲು ಕವಿದಂತಾಯಿತು. ಕಣ್ಣಿನಿಂದ ಕಣ್ಣೀರು ತಾನಾಗಿ ಸುರಿಯಿತು. ಹೇಳಲಾಗದ ದುಃಖ ಗಂಟಲವರೆಗೂ ಒತ್ತರಿಸಿ ಬಂತು. ಆ ನಡುರಾತ್ರಿಯಲ್ಲಿ ಊರು ಕುರಿತು ಹೊರಟದ್ದಾಯಿತು. ಬೆಳುದಿಂಗಳಿನಲ್ಲಿ ಪಟ್ಟಿಯಂತೆ ಮುಂದೆ ಹರಡಿದ್ದ ಹಾದಿ ಒಂದೇ ಸಮನೆ ಸವೆಯುತಿತ್ತು. ಪಕ್ಕದ ಮರಗಳು ಸರಸರನೆ ಸರಿದುಹೋಗುತಿದ್ದುವು. ತಂದೆಯ ನೆನಪು ದಟ್ಟವಾಗಿ ಕವಿದು ಬಂದು ರಸ್ತೆಯ ಮರಗಳಂತೆಯೇ ಒಂದಾಗುತಲೊಂದು ಮನಸಿನ ಮುಂದೆ ತೋರಿ ಮಾಯವಾಗುತಿದ್ದುವು. ಮನಸಿನಲ್ಲಿ ಅದೇ ಕೆಲವು ದಿನಗಳಿಗೆ ಹಿಂದೆ ಕೇಳಿದ 'ಶರಣೆನುವೆಂ ಬೃಂದಾವನ ಚರಚರಣಕೆ ನಾಂ' ಎನ್ನುವ ಪಲ್ಲವಿ ದುಡಿಯುಂತೆ ಕಿವಿಯಲ್ಲಿ ಒಂದೇ ಸಮನೆ ಮೊಳಗುತಿತ್ತು. ಮನೆಯನ್ನು ಸೇರುವ ವೇಳೆಗೆ ಬೆಳಗಾಗಿತ್ತು.

ಮನೆಯ ಸುತ್ತ ಬಹುಜನರು ಸೇರಿದ್ದರು. ಬಂಧುಗಳು ಮಿತ್ರರು ತಂದೆಯ ಶವವನ್ನು ಎದುರುನೋಡುತ್ತ ನಿಂತಿದ್ದರು. ಅದುವರೆಗೂ ತಡೆದಿದ್ದ ದುಃಖ ಮನೆಯ ಹೊಸ್ತಿಲನ್ನು ಮೆಟ್ಟಿದಾಗ ಮತ್ತೆ ಒತ್ತರಿಸಿ ಬಂತು. ತಾಯಿಯ ಬೆಂದ ಮುಖವನ್ನು ನೋಡುವುದು ನನ್ನಿಂದಂತೂ ಆಗಲಿಲ್ಲ.

ಆ ದಿನವೆಲ್ಲ ತಂದೆಯ ಶವ ಬರಲಿಲ್ಲ. ಮೂರನೆಯ ದಿನ ಬೆಳಗ್ಗೆ ಬಂತು. ಶವದ ಪೆಟ್ಟಿಗೆಯ ಬಾಯನ್ನು ತೆರೆಯಲು ಹಾಕುತ್ತಿದ್ದ ಉಳಿಯ ಪೆಟ್ಟುಗಳು ಅತಿ ಕರ್ಕಶವಾಗಿ ಕೇಳುತ್ತಿದ್ದುವು. ಸತ್ತು ಎರಡು ದಿನಗಳ ಮೇಲಾದುದರಿಂದ ತಂದೆಯ ಮುಖ ಕೆಟ್ಟಿತ್ತಂತೆ. ನನಗೆ ಆ ಮುಖ ನೋಡುವ ಮನಸ್ಸಾಗಲಿಲ್ಲ. ನಾನು ನೋಡಲಿಲ್ಲ. ಎಷ್ಟೋ ಸಲ ತಂದೆ ನಡೆದು ಸವೆಸಿದ್ದ ಹಾದಿಯಲ್ಲಿ ಅವರ ಶವವನ್ನು ಹೊತ್ತು ಶ್ಮಶಾನ ಸೇರಿದೆವು. ಒಂದಿಷ್ಟು ಸೌದೆ, ಒಂದು ಹಿಡಿ ಬೆಂಕಿ, ನನ್ನ ಕಣ್ಣಮುಂದೆಯೇ ತಂದೆಯ ದೇಹ ಉರಿದು ಒಂದು ಹಿಡಿ ಬೂದಿಯಾಯಿತು. ಅವರ ನೆನಪು ಒಂದು ಮಾತ್ರ ಮನಸ್ಸಿನಲ್ಲಿ ಉಳಿದು ಮನೆಗೆ ಹಿಂದಕ್ಕೆ ಬಂದುದಾಯಿತು. ಹಿಂದೆ ಬರುವ ಹೊತ್ತಿಗೆ ನಡು ಮನೆಯಲ್ಲಿದ್ದ ತಂದೆಯ ಕಳೆಗೂಡಿದ ಚಿತ್ರಕ್ಕೆ ಹೂವಿನ ಹಾರವನ್ನು ಹಾಕಿದ್ದರು. ಪಕ್ಕದಲ್ಲಿ ಆ ನಡು ಹಗಲಿನಲ್ಲಿಯೂ ಪ್ರಕಾಶವಾಗಿ ಹಣತೆಯೊಂದು ಉರಿಯುತ್ತಿತ್ತು. ಅದುವರೆಗೂ ಉದ್ವೇಗಗೊಂಡಿದ್ದ ಮನಸ್ಸು ಏನೋ ಒಂದು ರೀತಿಯಲ್ಲಿ ಶಾಂತವಾಯಿತು. ಮನೆ ಸತ್ತವರ ಮನೆಯಂತೆ ತೋರಲಿಲ್ಲ. ಎಂದಿನಂತೆಯೇ ಕಳೆಗೂಡಿಕೊಂಡಿತ್ತು.

ಹೀಗೆ ಹುಟ್ಟಿದ ಅರವತ್ತೈದು ವರ್ಷಗಳ ನಂತರ ನನ್ನ ತಂದೆ ತಮ್ಮ ಜೀವನ ಯಾತ್ರೆಯನ್ನು ಮುಗಿಸಿದರು. ತಂದೆ ಅಂಥ ಅಸಾಧಾರಣ ವ್ಯಕ್ತಿ ಏನಲ್ಲ. ಪ್ರತಿಭಾವಂತರೆಂದೂ ಮಹಾನುಭಾವರೆಂದೂ ನಾನು ಹೇಳಹೋಗುವುದಿಲ್ಲ. ಬಹು ಜನರಂತೆ ಅವರೂ ಸಾಧಾರಣರು. ಸಾಧಾರಣನಾದ ವ್ಯಕ್ತಿ ಯಾವ ರೀತಿ ತನ್ನ ಸುತ್ತಲಿನ ಜೀವನದಲ್ಲಿ ಭಾಗಿಯಾಗಬಹುದು, ತನ್ನ ಜೀವನವನ್ನು, ತನ್ನೊಂದಿಗೆ ಬಾಳಿ ಬೆಳೆಯುವವರ ಜೀವನವನ್ನು ಬೆಳಗಿಸಬಹುದು, ದೇಶದ ಆಗುಹೋಗುಗಳಲ್ಲಿ ನೆರವಾಗ

ಬಹುದು, ಎನ್ನುವುದನ್ನು ತೋರಿಕೊಟ್ಟರು ತಂದೆ. “ಹೆಬ್ಬದುಕನೊಂಟಿ ತನದೊಳದೇಕೆ ಕಳೆಯುವೆಯೊ ತಬ್ಬಿಕೊಳೊ ವಿಶ್ವವನು” ಎನ್ನುವ ತತ್ವಕ್ಕೆ ಅನುಸಾರವಾಗಿ ಜೀವನ ನಡೆಸಿದರು. ಅವರ ನೆನಪು ಮನೆಯವರಾದ ನಮ್ಮನ್ನು ಸುಖದಲ್ಲಿ ಕಷ್ಟದಲ್ಲಿ ಕಾಯುತ್ತದೆ ಎಂದು ನನ್ನ ದೃಢವಾದ ನಂಬಿಕೆ. ನಮ್ಮ ಅಮ್ಮ ಅನುದಿನದ ಪ್ರಾರ್ಥನೆಯನ್ನು ಕೊನೆ ಮಾಡುವಾಗ ಗಂಭೀರವಾಧ ಧ್ವನಿಯಲ್ಲಿ ಶ್ಲೋಕ ಹೇಳಿ ಮನಸ್ಸಿಗೆ ಶಾಂತಿ ತರುತ್ತಿದ್ದರು. ಆ ಶ್ಲೋಕದೊಂದಿಗೆ ನನ್ನ ತಂದೆಯ ಜೀವನ ಕತೆಯನ್ನು ಮುಕ್ತಾಯ ಮಾಡುತ್ತೇನೆ.

**ಅಸತೋಮಾ ಸದ್ಗಮಯ, ತಮಸೋಮಾ ಜ್ಯೋತಿರ್ಗಮಯ**

**ಮೃತ್ಯೋರ್ಮಾ ಅಮೃತಂಗಮಯ**

**ಓಂ ಶಾಂತಿಃ ಶಾಂತಿಃ ಶಾಂತಿಃ**